ಶ್ರೀ

# ಸನಾತನಧರ್ಮದೀಪಿಕೆ

ಎಂಬೀ ಗ್ರಂಥವು ವಾರಾಣಸೀ ಕ್ಷೇತ್ರದಲ್ಲಿರುವ
ಆರ್ಯಧರ್ಮ ಪ್ರಧಾನ ವಿದ್ಯಾಶಾಲಾಧ್ಯಕ್ಷ ಮಂಡಲಿಯವರಿಂದ
ಆಂಗ್ಲೇಯ ಭಾಷೆಯಲ್ಲಿ ರಚಿತವಾಗಿರುವ
ಸರಳಪಾಠದ ಪುಸ್ತಕದಿಂದ ಅವರನುಜ್ಞೆಯೊಡನೆ

ಬ್ರಹ್ಮವಿದ್ಯಾಪರಿಷತ್ತಿನ
ಚಿತ್ರದುರ್ಗದಶಾಖೆಯ ಅಧ್ಯಕ್ಷರಾದ
ರಾ. ರಘುನಾಥರಾವ್, ಬಿ.ಎ.
ಎಂಬುವರಿಂದ ಕನ್ನಡಿಸಲ್ಪಟ್ಟು
ಪ್ರಚುರಗೊಳಿಸಲ್ಪಟ್ಟಿದೆ.



ಮೈಸೂರು :
ಜಿ. ಟಿ. ಎ. ಪ್ರೆಸ್ಸಿನಲ್ಲಿ ಮುದ್ರಿತವಾದುದು.
1908

---





ಕ್ರಯ ರೂ. ೧.   ಇದರಲ್ಲಿ ಪಾದಾಂಶವು ವಾರಾಣಸೀಕ್ಷೇತ್ರದ
ವಿದ್ಯಾಶಾಲೆಯ ಸಹಾಯಕ್ಕೆ ಹೋಗುವುದು.

16.6.31.

ಸ್ವಸ್ತ್ಯಸ್ತು !

---

# ಸನಾತನಧರ್ಮದೀಪಿಕೆ

ಎಂಬೀಗ್ರಂಥವನ್ನು

ಕರ್ನಾಟಕ ದೇಶಬಾಂಧವ ಮಹಾಮಂಡಲಿಗೆ

ಶ್ರೇಯಃಪ್ರಾರ್ಥನೆಗಳೊಡನೆ

ಪ್ರೀತಿಪೂರ್ವಕವಾಗಿ

ಸಮರ್ಪಿಸಿರುತ್ತೇನೆ.

ರಾ. ರಘುನಾಥರಾಯ.

16. 8. 31.

# ಉಪೋದ್ಘಾತ.

---

ವೇದಾದಿಶಾಸ್ತ್ರಕಾರ್ಯೈಃ ನಿಗದತಿ ನಿಖಿಲಂ ನಿವೇದಿತವ್ಯಂ ಯಃ ।
ಬ್ರಹ್ಮಾನುಭೂತಿದೋಽಯಂ ಜಯತು ಜಗತ್ಯಾಂ ಸನಾತನೋ ಧರ್ಮಃ ॥

---

ನಮ್ಮ ಭಾರತಭೂಮಿಯು ಸಾಸಿರಾರು ವರುಷಗಳಿಂದ ಅನಾರ್ಯರ ಹಾವಳಿಗೊಳಪಟ್ಟು ಹೀನದಶೆಯನ್ನೈದಿರುವುದನ್ನು ಸಕಲರೂ ತಿಳಿದಿರುತ್ತಾರೆ. ಈ ಹಾವಳಿಗಳದೆಸೆಯಿಂದ ಆರ್ಯಧರ್ಮದ ಸದಾಚಾರಗಳು ಖಿಲವಾಗುತ್ತ ಬಂದಿರುವುವು. ಸಂಸ್ಕಾರಕರ್ಮಗಳು ವೈದಿಕಸಂಪ್ರದಾಯಗಳಿಗನುಸಾರವಾಗಿ ನಡೆಯದೆ, ಅನಾರ್ಯರ ಅವೈದಿಕಸಂಪ್ರದಾಯಗಳು ಕ್ರಮಕ್ರಮವಾಗಿ ಪ್ರಚುರಗೊಳ್ಳುವುದಕ್ಕೆ ಪ್ರಾರಂಭಿಸಿರುವುವು. ಈದೃಶ ಶೋಚನೀಯ ಸ್ಥಿತಿಯನ್ನು ನೋಡಿನೋಡಿ ವಿಷಾದಿಸಿ, ಲೋಕಪ್ರಸಿದ್ಧವಾಗಿರುವ ಬ್ರಹ್ಮವಿದ್ಯಾಪರಿಷತ್ತಿನ ಮಹನೀಯರು ವಾರಾಣಸೀಕ್ಷೇತ್ರದಲ್ಲಿ ಆರ್ಯಧರ್ಮಪ್ರಧಾನವಿದ್ಯಾಶಾಲೆಯೊಂದನ್ನು ಸ್ಥಾಪಿಸಿ, ಆರ್ಯಬಾಲರ ವ್ಯಾಸಂಗಕ್ಕೋಸ್ಕರ ಸನಾತನಧರ್ಮದೀಪಿಕೆ, ಸನಾತನಧರ್ಮಪ್ರದೀಪಿಕೆ ಎಂಬ ಎರಡು ಗ್ರಂಥಗಳನ್ನು ರಚಿಸಿರುವರು. ಈ ಗ್ರಂಥಗಳಲ್ಲಿ ಮೊದಲನೆಯದು ಸರಳಪಾಠವಾಗಿ, ಎರಡನೆಯದು ಪ್ರೌಢಪಾಠವಾಗಿ ರಚಿತವಾಗಿರುತ್ತದೆ. ಈ ಗ್ರಂಥಗಳ ರಚನೆಯೂ ಸರ್ವಜನಸಮ್ಮತವಾಗಿಯೇ ನಡೆಯಿತು. ಮೊಟ್ಟಮೊದಲು ನೂರುಪ್ರತಿಗಳನ್ನು ಮುದ್ರಿಸಿ ಭರತಖಂಡದಲ್ಲಿ ಪ್ರಮುಖರಾಗಿರುವ ದ್ವೈತಾದ್ವೈತವಿಶಿಷ್ಟಾದ್ವೈತ ಪಂಡಿತಮಹನೀಯರಿಗೆ ಅವುಗಳನ್ನು ಕಳುಹಿಸಿ, ಅವರುಗಳು ತೋರಿಸಿದ ದೋಷಗಳನ್ನೆಲ್ಲಾ ತಿದ್ದಿ, ಸರ್ವಜನ ಸಮ್ಮತವಾಗಿರುವಂತೆ ಅವು ಮುದ್ರಿಸಲ್ಪಟ್ಟಿರುವುವು. ಈಗ ಅವು ಆಸೇತುಶೀತಾಚಲದವರೆಗೂ ಆರ್ಯರಿಂದ ಸ್ವೀಕರಿಸಲ್ಪಟ್ಟವೆ, ಮತ್ತು ಬಗೆಬಗೆಯ ದೇಶಭಾಷೆಗಳಲ್ಲಿ ಪರಿವರ್ತಿಸಲ್ಪಟ್ಟೂ ಇವೆ. ಈ ಪಾಠದ್ವಯದಲ್ಲಿ ಸೇರಿರುವ ಪ್ರಮೇಯಗಳ ವಿಷಯವಾಗಿ ಗ್ರಂಥಸಂಗ್ರಹಕಾರರ ಪೂರ್ವವಚನವೆಂಬ ಪೀಠಿಕೆಯನ್ನು ವಿದ್ಯಾರ್ಥಿಗಳು

ಓದಬಹುದು. ದ್ವೈತಾದಿಮತಪ್ರಭೇದಗಳ ವಿವರಗಳನ್ನು ಬಿಟ್ಟು, ಆರ್ಯಧರ್ಮಾವಲಂಬಿಗಳಿಗೆಲ್ಲಾ ಉಪಾದೇಯಗಳಾಗಿರುವ ಪ್ರಮೇಯಗಳನ್ನೇ ಈ ಪಾಠತ್ರಯದಲ್ಲಿಯೂ ಪ್ರವಚನಮಾಡಿರುತ್ತಾರಾದುದರಿಂದ ಈ ಪುಸ್ತಕಗಳನ್ನು ಭರತಖಂಡದ ಮತತ್ರಯದವರೆಲ್ಲರೂ ವ್ಯಾಸಂಗ ಮಾಡಬಹುದಾಗಿದೆ.

ಆರ್ಯಧರ್ಮಪ್ರಧಾನ ವಿದ್ಯಾಶಾಲಾಧ್ಯಕ್ಷ ಮಂಡಲಿಯವರು ಸನಾತನ ಧರ್ಮದ ಈ ಪಾಠತ್ರಯವನ್ನು ರಚಿಸುವವರೆಗೂ ಸಾಧಾರಣ ಜನರಿಗೆ ಆರ್ಯಧರ್ಮದ ಉತ್ಕೃಷ್ಟತೆಯು ಗೊತ್ತೇ ಆಗಿರಲಿಲ್ಲ. ಈ ಗ್ರಂಥಗಳಲ್ಲಿ ಈ ಮಹನೀಯರು ಶಾಸ್ತ್ರಸಂಜ್ಞೆಗಳನ್ನು ಉದಾಹರಿಸದೆ ಯಾವುದನ್ನೂ ಪ್ರವಚನ ಮಾಡಿಲ್ಲ. ವೇದಗಳಿಂದಲೂ ಉಪನಿಷತ್ತುಗಳಿಂದಲೂ ಭಗವದ್ಗೀತೆಯಿಂದಲೂ ವಿಷ್ಣುಪುರಾಣದಿಂದಲೂ ಮನುಸ್ಮೃತಿಯಿಂದಲೂ ರಾಮಾಯಣ ಮಹಾಭಾರತಗಳಿಂದಲೂ ಶ್ರೀಮದ್ಭಾಗವತ ದೇವೀ ಭಾಗವತಗಳಿಂದಲೂ ವಿಶೇಷವಾಗಿ ಆಧಾರ ವಚನಗಳನ್ನೂ ಇತಿಹಾಸಗಳನ್ನೂ ಸಂಗ್ರಹಿಸಿ, ಈ ಗ್ರಂಥಗಳನ್ನು ಸರ್ವೋತ್ತಮ ರೀತಿಯಲ್ಲಿ ರಚಿಸಿರುತ್ತಾರೆ.

ಈ ಪಾಠತ್ರಯದಲ್ಲಿ ಸರಳಪಾಠದ ಪುಸ್ತಕವನ್ನು ನಾನು ನನಗೆ ತಿಳಿಯಬಂದಮಟ್ಟಿಗೆ ಕನ್ನಡಕ್ಕೆ ಪರಿವರ್ತನ ಮಾಡಿರುತ್ತೇನೆ. ಮೂಲಗ್ರಂಥದ ಆಶಯವನ್ನು ಗ್ರಹಿಸಿ, ಆ ಅರ್ಥವು ಹೊರಡುವಂತೆ ಕನ್ನಡದಲ್ಲಿ ಬರೆಯುವುದಕ್ಕೆ ಯತ್ನಿಸಿನೇನೆ. ನಾನು ಬರೆದುದನ್ನು ಪಂಡಿತರಾದ ಬ್ರಹ್ಮಶ್ರೀ ಹೊಸದುರ್ಗದ ಶೇಷಾಚಾರ್ಯರವರೂ ಮೈಸೂರರಮನೆಯ ವಿದ್ವಾಂಸರಾಗಿರುವ ಬ್ರಹ್ಮಶ್ರೀ ಸರಗೂರು ಮಾ. ಅನಂತಕೃಷ್ಣಮಾಚಾರ್ಯರೂ ಆಮೂಲಾಗ್ರಹವಾಗಿ ಓದಿಯೊಪ್ಪಿರುತ್ತಾರೆ. ಇವರುಗಳ ಸಹಾಯವು ಚಿರಸ್ಮರಣೀಯವಾಗಿರುವುದು. ಸಂಸ್ಕೃತ ಗ್ರಂಥಶ್ಲೋಕಗಳ ಪರಿವರ್ತನದಲ್ಲಿ ಅನೇಕಡೆಗಳಲ್ಲಿ ಮೂಲಗ್ರಂಥದ ಮುಖ್ಯಪದಗಳನ್ನೇ ಪ್ರಯೋಗಿಸಿರುತ್ತೇನೆ. ಮಾತಿನ ಬಿಗಿಯೂ ಅರ್ಥಸ್ವಾರಸ್ಯವೂ ಕೆಡದಿರಬೇಕೆಂಬ ಉದ್ದೇಶದಿಂದ ಹೀಗೆ ಮಾಡಿದೆ. ವಾಚಕಮಹಾಶಯರಿಗೆ ಮಾತಿನ ಬಂಡವಾಳವೂ ಹೆಚ್ಚಬೇಕು ಎಂಬದೊಂದಾಲೋಚನೆಯೂ ತೋರಿತ್ತು. ಆರ್ಯಧರ್ಮಪ್ರವಚನದಲ್ಲಿ

ಅನೇಕ ಶಬ್ದಗಳಿಗೆ ಸಂದರ್ಭಾನುಸಾರವಾಗಿ ಅರ್ಥವನ್ನು ಮಾಡಬೇಕಾಗಿ ಬರುತ್ತದೆ. ಆತ್ಮ, ಧರ್ಮ, ಕಾಮ ಎಂಬ ಪದಗಳು ಉದಾಹರಣೆಗಳಾಗಿರುವುವು. ಬಾಲೆಯರೂ, ತರುಣಿಯರೂ ಈ ಪುಸ್ತಕವನ್ನು ನಿರಾಲಸ್ಯದಿಂದ ವ್ಯಾಸಂಗಮಾಡುವುದು ದೇಶದೇಳಿಗೆಗೂ ಜನ್ಮಸಾರ್ಥಕ್ಯಕ್ಕೂ ಅವಶ್ಯಕವಾಗಿರುವುದರಿಂದ ಸಾಧ್ಯವಾದಮಟ್ಟಿಗೂ ಈ ಗ್ರಂಥವನ್ನು ಸುಲಭಶೈಲಿಯಲ್ಲಿಯೇ ಬರೆದಿದೆ. ಆದರೂ ಅಲ್ಲಲ್ಲಿ ಕ್ಲಿಷ್ಟ ಸಂಸ್ಕೃತಪದಗಳು ಪ್ರಯೋಗಿಸಲ್ಪಟ್ಟಿರುವುದರಿಂದ ಅಂತಹ ಪದಗಳಿಗೆ ಅರ್ಥಮಾಡಿಕೊಳ್ಳುವುದಕ್ಕಾಗಿ ನಿಘಂಟೊಂದನ್ನು ಸೇರಿಸಿದೆ. ಇದರಿಂದ ವಿಶೇಷ ಸಹಾಯವಾಗುವುದೆಂದು ನಂಬಿದೇವೆ. ಇಂತಿಂತಹ ವಿಷಯಗಳು ಇಂತಿಂತಹ ಸ್ಥಳಗಳಲ್ಲಿ ಬರುವುವೆಂಬುದನ್ನು ತೋರಿಸಿಕೊಡುವುದಕ್ಕಾಗಿ "ವಿಷಯಸ್ಥಳ ಸೂಚಿನಿ" ಎಂಬ ಮತ್ತೊಂದು ಭಾಗವನ್ನೂ ಸೇರಿಸಿರುತ್ತೇವೆ.

ಅನೇಕ ಪುಟಗಳಲ್ಲಿ ಸಂಸ್ಕೃತರೂಪದ ಮಾತುಗಳ ಪಕ್ಕಗಳಲ್ಲಿ ಆಂಗ್ಲೇಯ ಭಾಷೆಯ ಮಾತುಗಳನ್ನು ಕೊಟ್ಟಿರುತ್ತೇವೆ. ಈ ಮಾತುಗಳು ಆಂಗ್ಲೇಯಭಾಷೆಯ ಮೂಲಪುಸ್ತಕದಲ್ಲಿ ಪ್ರಯೋಗಿಸಲ್ಪಟ್ಟಿರುವುವು ಎಂಬುದನ್ನು ಮಾತ್ರ ಸೂಚಿಸುತ್ತವೆ. ಸಂಸ್ಕೃತಪದಗಳ ಅರ್ಥವನ್ನು ಈ ಆಂಗ್ಲೇಯಭಾಷೆಯ ಮಾತುಗಳು ಸರಿಯಾಗಿ ತೋರಿಸುವುವು ಎಂದು ನಾವು ಒಪ್ಪಿರುತ್ತೇವೆ ಎಂಬದಾಗಿ ವಾಚಕಮಹಾಶಯರು ಭಾವಿಸಕೂಡದು. ೧೪೭ನೆಯ ಪುಟದಲ್ಲಿ "ವಿಧಿತ್ಸ" "ಪರಾಸುತ್ವ" ಎಂಬ ಮಾತುಗಳ ಪಕ್ಕಗಳಲ್ಲಿ "cynicism" "wrongful activity" ಎಂಬುವು ಕೊಡಲ್ಪಟ್ಟಿವೆ. ಈ ಮಾತುಗಳು ಸಮಂಜಸಗಳಾದ ಪ್ರತಿಪದಗಳೆಂದು ನಾವು ಹೇಳಲಾರೆವು. ಇಂತಹವು ಇನ್ನೂ ಕೆಲವೆಡೆಗಳಲ್ಲಿಯೂ ಸಿಕ್ಕುವುವು. ಸಂಸ್ಕೃತ ಶ್ಲೋಕಗಳ ಆಧಾರದಮೇಲೆ ಆಂಗ್ಲೇಯವಚನಗಳು ನೆಲೆಗೊಂಡಿರುವುದರಿಂದ, ಮೂಲಾಧಾರವಾದ ಸಂಸ್ಕೃತಶ್ಲೋಕಗಳನ್ನೇ ನಾವು ಅನುಸರಿಸುವುದು ನಮ್ಮ ಕರ್ತವ್ಯವೆಂದು ನಾವು ಭಾವಿಸಿದುದರಿಂದ ಹೀಗೆ ಮಾಡಬೇಕಾಯಿತು. ಈ ವಿಷಯವನ್ನು ಕುರಿತು ವಾರಾಣಸಿಯ ಆರ್ಯಧರ್ಮಪ್ರಧಾನ ವಿದ್ಯಾಶಾಲಾಧ್ಯಕ್ಷಮಂಡಲಿಯವರಿಗೆ ಸಮಯವನ್ನರಿತು ಬರೆಯಬೇಕೆಂದು ಉದ್ದೇಶಿಸಿರುತ್ತೇವೆ.

ವಾರಾಣಸೀಕ್ಷೇತ್ರದಲ್ಲಿ ಪ್ರತಿಷ್ಠಿತವಾಗಿರುವ ಆರ್ಯಧರ್ಮಪ್ರಧಾನ ವಿದ್ಯಾಶಾಲೆಯಲ್ಲಿ ಭರತಖಂಡದೇಳಿಗೆಗಾಗಿ ದಿವ್ಯಪ್ರಯತ್ನಗಳು ನಡೆಯುತ್ತಿರುವುವು. ಸದಾಚಾರ ಸಂಪನ್ನರಾಗಿಯೂ ವಯೋವೃದ್ಧರಾಗಿಯೂ ಅನುಭವಶಾಲಿಗಳಾಗಿಯೂ ಇರುವ ಮಹಾಮಹೋಪಾಧ್ಯಾಯರನೇಕರು ವೇತನವೇನೂ ಇಲ್ಲದೆ ಧರ್ಮಾರ್ಥಿಗಳಾಗಿ ಕೆಲಸವನ್ನು ಮಾಡುತ್ತಿರುವರು. ವಿದ್ಯಾರ್ಥಿಗಳನ್ನು ಸದ್ಗುಣಸಂಪನ್ನರನ್ನಾಗಿ ಮಾಡಬೇಕೆಂದು ಬದ್ಧಕಂಕಣರಾಗಿ ಸಕಲರೂ ಕೆಲಸ ಮಾಡುತ್ತಿರುವರು. ದ್ರವ್ಯಸಹಾಯವು ಈ ಸತ್ಕಾರ್ಯಕ್ಕೆ ಪುಷ್ಕಳವಾಗಿ ಬೇಕು. ಈ ಪುಸ್ತಕದ ಕ್ರಯದಲ್ಲಿ ಪಾದಾಂಶವು ಈ ಪ್ರಧಾನವಿದ್ಯಾಶಾಲೆಗೆ ಹೋಗಿ ಸೇರುತ್ತದೆ.

ಬಗೆಬಗೆಯ ಶಾಸ್ತ್ರವಿಷಯಗಳೂ ತತ್ತ್ವಾರ್ಥಗಳೂ ಈ ಪುಸ್ತಕದಲ್ಲಿ ಉಪನ್ಯಸಿಸಲ್ಪಟ್ಟಿರುವುದರಿಂದ ಶಬ್ದಾದಿ ದೋಷಗಳು ಅಲ್ಲಲ್ಲಿ ಸಿಕ್ಕಬಹುದು. ಅಂತಹವುಗಳನ್ನು ವಿದ್ವನ್ಮಂಡಲಿಯವರು ದಯವಿಟ್ಟು ತಿಳಿಸಿದರೆ, ವಿನಯಪೂರ್ವಕ ಕೃತಜ್ಞತೆಯೊಡನೆ ಅವುಗಳನ್ನು ಸ್ವೀಕರಿಸುವನಾಗುತ್ತೇನೆ.

ಚಿತ್ರದುರ್ಗದ ಬ್ರಹ್ಮ-
ವಿದ್ಯಾಸದನ, 1908

ರಾ. ರಘುನಾಥರಾಯಡು.



ಸತ್ಯಮೇವ ಜಯತೇ ನಾನೃತಂ ॥

ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ ॥



ಸತ್ಯಕ್ಕೇಜಯ, ಅನೃತಕ್ಕಿಲ್ಲ ॥

ಏಳಿ, ಜಾಗರಿತರಾಗಿ, ವರರಂಪ್ರೊಂದಿ ಜ್ಞಾನಿಗಳಾಗಿ ॥

## ಪೂರ್ವವಚನ.

ವಾರಾಣಸೀ ಕ್ಷೇತ್ರದಲ್ಲಿ ಪ್ರತಿಷ್ಠಿತವಾಗಿರುವ ಆರ್ಯಧರ್ಮಪ್ರಧಾನ ವಿದ್ಯಾಶಾಲೆಯ (Central Hindu College) ಅಧ್ಯಕ್ಷ ಮಂಡಲಿಯವರು (Board of Trustees) ತಮ್ಮ ವಿಚಾರಣೆಯಲ್ಲಿರುವ ವಿದ್ಯಾಶಾಲೆಗಳಲ್ಲೆಲ್ಲಾ ಆರ್ಯಧರ್ಮವನ್ನೂ ಆರ್ಯನೀತಿಯನ್ನೂ ಬೋಧಿಸುವುದರಲ್ಲಿ ಮುಂದೆ ಹೇಳುವ ನಿಯಮಗಳನ್ನು ಅನುಸರಿಸಿ ಪಾಠಪ್ರವಚನಗಳನ್ನು ನಡೆಯಿಸಬೇಕೆಂದು ವಿಧಿಸಿರುವರಾಗಿದಾರೆ.

ಈಗಿನ ಕಾಲಕ್ಕೆ ಅವಶ್ಯಕವಾಗಿರುವ ಪಾಶ್ಚಿಮಾತ್ಯರ ಭೌತಿಕಶಾಸ್ತ್ರಮುಂತಾದ ವ್ಯಾಸಂಗಗಳ ಜತೆಗೆ ಆರ್ಯಧರ್ಮದ ತತ್ವಗಳನ್ನೂ ನೀತಿಗಳನ್ನೂ ಜೋಡಿಸಿ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಬೇಕೆಂಬ ಮುಖ್ಯೋದ್ದೇಶವನ್ನು ಆರ್ಯಧರ್ಮಪ್ರಧಾನ ವಿದ್ಯಾಶಾಲೆಯವರು ಇಟ್ಟುಕೊಂಡಿರುವುದರಿಂದ ಆ ಆರ್ಯಧರ್ಮ ಪ್ರವಚನವು ಆರ್ಯಮರ್ಯಾದೆಯನ್ನೇ ಸ್ಪಷ್ಟವಾಗಿ ಅನುಸರಿಸಿದ್ದರೂ, ಸರ್ವಜನ ಸಮ್ಮತವಾಗಿಯೂ ಬುಧಜನ ಮನೋರಂಜಕವಾಗಿಯೂ ಮತಪ್ರಭೇದ ವಿಯುಕ್ತವಾಗಿಯೂ ಇರುವುದೇ ಅವಶ್ಯಕವಾಗಿರುವುದು. ವೈದಿಕಮತದ ಪ್ರಭೇದಗಳಿಗೆಲ್ಲಾ ಸಾಮಾನ್ಯವಾಗಿರುವ ತತ್ವಗಳನ್ನೂ ನೀತಿಗಳನ್ನೂ ಸಂಗ್ರಹಿಸಿರಬೇಕಲ್ಲದೆ, ಅನಾರ್ಯಗಳಾದ ಅವೈದಿಕ ಪ್ರಮೇಯಗಳನ್ನೆಲ್ಲಾ ಬಹಿಷ್ಕರಿಸಿರಬೇಕು. ವೈದಿಕ ಸಂಪ್ರದಾಯದ ಪ್ರಭೇದಗಳಲ್ಲಿ ವಿವಾದಕ್ಕೆ ವಿಷಯಗಳಾಗಿರುವುವುಗಳನ್ನು ಬಿಡಬೇಕು ; ತಾತ್ಕಾಲಿಕ ರಾಜಕೀಯ ವಿಷಯಗಳಿಗೂ ದೇಶಾಚಾರ ಪ್ರಭೇದಗಳಿಗೂ ಹೋಗಕೂಡದು ; ಯಾವ ಅಸ್ತಿಭಾರದಮೇಲೆ ವಿದ್ಯಾರ್ಥಿಯು ಪ್ರಾಪ್ತವಯಸ್ಕನಾದನಂತರದಲ್ಲಿ, ತನ್ನ ಬುದ್ಧಿಜಾತಿಗೂ ಚಿತ್ತವೃತ್ತಿಗೂ ಅನುಕೂಲಗಳಾದ ದ್ವೈತಾದಿ ಸಿದ್ಧಾಂತ ವಿಷಯಗಳನ್ನು ರಚಿಸಿಟ್ಟುಕೊಳ್ಳಬಹುದೋ ಅಂತಹ ಅಸ್ತಿಭಾರವನ್ನು ಹಾಕುವುದಾಗಬೇಕು. ಭಗವದ್ಭಕ್ತಿಯನ್ನೂ ಧರ್ಮನಿಷ್ಠೆಯನ್ನೂ ಮನೋದಾರ್ಢ್ಯವನ್ನೂ ಆತ್ಮಾವಲಂಬನವನ್ನೂ ಸತ್ಯಸಂಧತೆಯನ್ನೂ ಸದ್ವರ್ತನವನ್ನೂ ವಿನಯ ಗುಣವನ್ನೂ

ಸಮುತ್ತೋಕದ ಬುದ್ಧಿಯನ್ನೂ ಬೆಳಗೊಂಡಿರುವ ಸಚ್ಛೀಲದ ಅರ್ಜನೆಗೆ ಸಾಧಕವಾಗಿರಬೇಕು. ಸಭ್ಯನೆನಿಸಿಕೊಂಡಿರುವನಲ್ಲಿ ಕಾಣಬರುವ ಸಚ್ಛೀಲವನ್ನು ರಚಿಸುವುದಕ್ಕೆ ಸಂಸಾರ ಧರ್ಮಗಳಿಗೆಲ್ಲಾ ಆಧಾರಭೂತವಾಗಿರುವ ಸನಾತನಧರ್ಮದ ಪ್ರಧಾನತತ್ವಗಳೇ ಸಾಕಾಗಿರುತ್ತವೆ. ಹಿಂದೂಜನರನ್ನೆಲ್ಲಾ ಯಾವ ಧರ್ಮವು ಒಟ್ಟುಗೂಡಿಸಬಲ್ಲುದೋ ಅಂತಹ ಸರ್ವಸಮ್ಮತ ಧರ್ಮವನ್ನು ಸರಳವಾಗಿಯೂ ಸ್ಪಷ್ಟವಾಗಿಯೂ ತಿಳಿಸಬೇಕು; ಯಾವುದು ಅವರನ್ನು ಅಗಲಿಸುವುದೋ ಅದನ್ನು ಬಿಡಲೇಬೇಕು ; ಪರಮತದ ವಿಷಯದಲ್ಲಿ ಸೈರಣೆ ಹುಟ್ಟುವಂತೆ ಕೃಷಿ ಮಾಡಬೇಕು ; ಈ ಸೈರಣೆಯು ಹಿಂದೂಜನರಲ್ಲಿರುವ ಬೇರೆಬೇರೆ ಪಂಗಡದವರ ಸಿದ್ಧಾಂತ ವಿಷಯಗಳನ್ನೂ, ಅವರವರ ಆಚಾರಗಳನ್ನೂ ಸನ್ಮಾನಿಸುವುದಲ್ಲದೆ ಹಿಂದೂಜನರಲ್ಲದವರ ಮತಗಳನ್ನೂ ಸನ್ಮಾನಿಸಬೇಕು. ಸಕಲ ಮತಗಳೂ ಪರಮೇಶ್ವರನೆಡೆಗೊಯ್ಯುವ ಸನ್ಮಾರ್ಗಗಳಾಗಿಯೇ ಇವೆ ಎಂದು ತಿಳಿದು ಅವುಗಳ ವಿಷಯದಲ್ಲೆಲ್ಲಾ ಸೈರಣೆಯಿದ್ದೇ ಇರಬೇಕು. ಆದುದರಿಂದ:—

(೧) ಮತ ವಿಷಯಿಕವಾಗಿಯೂ ನೀತಿ ವಿಷಯಿಕವಾಗಿಯೂ ಏನೇನು ಹೇಳಿಕೊಡುತ್ತೇವೆಯೋ ಅವೆಲ್ಲವೂ ಆರ್ಯ ಮತಾವಲಂಬಿಗಳಿಗೆಲ್ಲಾ ಉಪಾದೇಯಗಳಾಗಿರಬೇಕು.

(೨) ಯಾವಯಾವ ವಿಶೇಷವಿಷಯಗಳು ಆರ್ಯಧರ್ಮಕ್ಕೆ ಗುರುತಾಗಿ, ಅನ್ಯಮತಗಳಿಂದ ಅದನ್ನು ಪ್ರತ್ಯೇಕಿಸುವುವೋ ಅವುಗಳೆಲ್ಲವೂ ಸೇರಿರಬೇಕು.

(೩) ಆರ್ಯಮತದ ಶಾಖೆಗಳ ಪ್ರತ್ಯೇಕ ಪ್ರತ್ಯೇಕ ಸಿದ್ಧಾಂತಗಳ ವಿಷಯಗಳು ಸೇರಕೂಡದು.

ಮೇಲಣ ಕ್ರಮಕ್ಕನುಸಾರವಾಗಿ ಬರೆದಿರುವ ಈ ಸರಳಪಾಠದ ಪುಸ್ತಕವು ಇಂಡಿಯಾದೇಶದ ಹೈಸ್ಕೂಲುಗಳ (High Schools), ಮೇಲಣ ತರಗತಿಗಳಲ್ಲಿ ಓದುವ ವಿದ್ಯಾರ್ಥಿಗಳಿಗಾಗಿ ಪ್ರಚುರಮಾಡಲ್ಪಟ್ಟದೆ. ಆರ್ಯಧರ್ಮದ ಸಾಮಾನ್ಯ ವಿಷಯಗಳನ್ನು ತಪ್ಪಿಲ್ಲದಂತೆ ತಿಳಿಸಬೇಕೆಂದು ಉದ್ದೇಶಿಸಲ್ಪಟ್ಟದೆ. ವಿದ್ಯಾರ್ಥಿಯು ಮುಂದಕ್ಕೆ ವಿಶೇಷವಾಗಿ ವ್ಯಾಸಂಗಮಾಡಿ ಹೊಸಹೊಸ ವಿಷಯಗಳನ್ನು ಸೇರಿಸಿಕೊಳ್ಳಬಹುದೆಂತಲೂ, ಯಾವ

ವಿಷಯವನ್ನೂ ತಿದ್ದುಕೊಳ್ಳಬೇಕಾದ ಪ್ರಮೇಯ ಬೀಳುವುದಿಲ್ಲವೆಂತಲೂ ನಂಬಲ್ಪಟ್ಟಿದೆ.

ಶಾಸ್ತ್ರಸಮ್ಮತಗಳೆಂದು ಸ್ವೀಕರಿಸಲ್ಪಟ್ಟಿರುವ ಮುಖ್ಯಮುಖ್ಯ ವಿಷಯಗಳು ಮಾತ್ರ ಈ ಪುಸ್ತಕದಲ್ಲಿ ಸೇರಿರುತ್ತವೆ. ದ್ವೈತಾದಿ ಭೇದಗಳು ಯಾವಯಾವ ಸಂಗತಿಗಳಿಂದ ಹುಟ್ಟಿವೆಯೋ ಅವುಗಳ ವಿವರಕ್ಕೆ ಹೋಗಿಲ್ಲ. ದ್ವೈತಾದಿ ಮತದವರು ತಮತಮಗೆ ಬೇಕಾದ ಪ್ರಮೇಯಗಳನ್ನು ಸೇರಿಸಿಕೊಳ್ಳುವುದಕ್ಕೆ ಅವಕಾಶವನ್ನು ಕೊಟ್ಟಿದೆಯೆಂತಲೂ ಅಂತಹರು ಸರ್ವಥಾ ಒಪ್ಪಲಾಗದ ವಿಷಯಗಳು ಸೇರಿಲ್ಲವೆಂತಲೂ ನಂಬಲ್ಪಟ್ಟಿದೆ.

ವಿದ್ಯಾರ್ಥಿಗಳ ಕೈಯಲ್ಲಿ ಸ್ವಂತ ವ್ಯಾಸಂಗಕ್ಕಾಗಿ ಈ ಪುಸ್ತಕವನ್ನು ಇಡಬಹುದಾಗಿದ್ದರೂ, ಉಪಾಧ್ಯಾಯರು ಬಾಯಿಮಾತಿನಿಂದ ಅನೇಕ ಅಂಶಗಳನ್ನು ವಿಶದಪಡಿಸಿ ಸುಲಭವಾಗಿ ತಿಳಿಯುವಂತೆ ಮಾಡಬಹುದು. ಪ್ರತ್ಯಧ್ಯಾಯದ ಮೇಲೆಯೂ ಒಂದೆರಡು ಪಾಠಗಳನ್ನು ಇಟ್ಟುಕೊಳ್ಳಬಹುದು

ಅಧ್ಯಾಯಗಳ ಕೊನೆಯಲ್ಲಿ ಕೊಟ್ಟಿರುವ ಶ್ರುತ್ಯಾದಿ ವಚನಗಳನ್ನು ವಿದ್ಯಾರ್ಥಿಗಳು ಕಂಠಪಾಠ ಮಾಡಬೇಕು. ಹೀಗೆ ಮಾಡುವುದರಿಂದ ಅವರ ಸನಾತನ ಧರ್ಮದ ಗ್ರಂಥವಚನಗಳು ಅವರ ಸ್ಮರಣೆಯಲ್ಲಿರುವುವು.

ಇಲ್ಲಿ ವಿವರಿಸಿರುವ ಮುಖ್ಯಮುಖ್ಯ ತತ್ವಗಳ ಭಾವವನ್ನು ಚೆನ್ನಾಗಿ ತೋರಿಸುವುದೆಂದು ನಂಬಿ ಸನಾತನ ಧರ್ಮವೆಂಬ ಹೆಸರನ್ನು ಚರ್ಚೆಮಾಡಿಟ್ಟಿದೆ. ಸನಾತನ ಎಂಬ ಹೆಸರು ಒಂದು ಪಂಗಡದವರ ಹೆಸರಾಗಿದ್ದರೂ, ಈ ಪುಸ್ತಕದಲ್ಲಿ ಶಾಶ್ವತ ಎಂಬ ಅರ್ಥದಲ್ಲಿಯೇ ಪ್ರಯೋಗಿಸಲ್ಪಟ್ಟಿದೆ.

ಹಿಂದೂಬಾಲರ ಬುದ್ಧಿಯಲ್ಲಿ ಕ್ರಮಾನುಸಾರವಾದ ವಿಮರ್ಶೆಗೆ ಬೇಕಾದ ಅಸ್ತಿಭಾರವದೊಂದನ್ನು ಹಾಕುವುದರಲ್ಲಿ ಸಹಾಯವಾಗಲೆಂದೂ, ಭಗವದ್ಭಕ್ತರಾಗಿಯೂ ಧರ್ಮನಿರತರಾಗಿಯೂ ರಾಜಭಕ್ತಿಯುಳ್ಳವರಾಗಿಯೂ ಸದ್ವರ್ತನ ಶಿರೋಮಣಿಗಳಾಗಿಯೂ ಬಾಲರು ಬಳೆದು, ತಮ್ಮ ಮಾತೃಭೂಮಿಗೂ ಆಂಗ್ಲೇಯ ಸಾಮ್ರಾಜ್ಯಕ್ಕೂ ಸಹಾಯಕರಾಗಲೆಂದು ಪ್ರಾರ್ಥಿಸಿ, ಈ ಪುಸ್ತಕದ ಸಂಗ್ರಹಕಾರರು ಈ ಗ್ರಂಥವನ್ನು ಲೋಕಸಂಚಾರಕ್ಕೆ ಕಳುಹಿಸಿರುತ್ತಾರೆ.





# ವಿಷಯ ಸೂಚಿಕೆ.

## ಭಾಗ ೧. ತತ್ವಪ್ರಕಾಶಿಕೆ.



## ಭಾಗ ೨. ಕರ್ಮಪ್ರಕಾಶಿಕೆ.



## ಭಾಗ ೩. ನೀತಿಪ್ರಕಾಶಿಕೆ.



ಓಂ.

ಯತ್ಸತ್ಯಂ ಯದಪಿಸ್ಮರಂತಿ ಮುನಯೋ ಯೇನೈವಸೃಷ್ಟಂ ಜಗ |
ದ್ಯಸ್ಮಿನ್ತಿಷ್ಠತಿ ಜೀವಜಾಲಮಖಿಲಂ ಯಸ್ಮಾದಿದಂ ವಿದ್ಯತೇ ||
ಯಸ್ಯಶ್ರೀರನಪಾಯಿನೀ ವಿಜಯತೇಯಸ್ಮಿನ್ಜಗಲ್ಲೀಯತೇ |
ತತ್ಸಾನಂದಮುಪಾಸ್ಮಹೇ ನಿರುಪಮಂ ಸಚ್ಚಿತ್ಸ್ವರೂಪಂಮಹಃ ||

# ಸನಾತನ ಧರ್ಮದೀಪಿಕೆ.

---:o:---

## ಓಂ.

ಮಂಗಳಂ ದಿಶತು ನೋವಿನಾಯಕೋ |
ಮಂಗಳಂ ದಿಶತು ನಸ್ಸರಸ್ವತೀ ||
ಮಂಗಳಂ ದಿಶತು ನಸ್ಸಮುದ್ರಜಾ |
ಮಂಗಳಂ ದಿಶತು ನೋಮಹೇಶ್ವರೀ ||



## ಅವತರಣಿಕೆ.

ಸನಾತನ ಧರ್ಮವೆಂದರೆ ಶಾಶ್ವತಧರ್ಮ, ಪ್ರಾಚೀನಧರ್ಮ. ಇದಕ್ಕೆ ತಳಹದಿ ವೇದಗಳು. ಪವಿತ್ರತಮಗಳಾದೀ ವೇದಗಳು ಯುಗಯುಗಾಂತರಗಳ ಹಿಂದೆ ಮಾನವರಿಗೆ ದಯಪಾಲಿಸಲ್ಪಟ್ಟುವು. ಈ ಧರ್ಮವನ್ನು ಆರ್ಯಧರ್ಮವೆಂದೂ ಕರೆಯುವುದುಂಟು; ಏಕೆಂದರೆ ಆರ್ಯಕುಲದ ( Aryan Race ) ಮೊಟ್ಟಮೊದಲ ಜನಾಂಗಕ್ಕೆ ಇದು ಉಪದೇಶ ಮಾಡಲ್ಪಟ್ಟಿತು. ಆರ್ಯಶಬ್ದಕ್ಕೆ ಶ್ರೇಷ್ಠವೆಂದರ್ಥ. ಪೃಥ್ವಿಯ ಪೂರ್ವತರಕಾಲಗಳಲ್ಲಿ

ಬಾಳಿದ ಮಾನವಕುಲಗಳಿಗಿಂತ ಗುಣದಲ್ಲಿಯೂ, ರೂಪಿನಲ್ಲಿಯೂ ಬಹು ಶ್ರೇಷ್ಠವಾಗಿದ್ದ ಅದೊಂದು ಮಹಾಕುಲಕ್ಕೆ ಆರ್ಯವೆಂಬ ಹೆಸರು ಕೊಡಲ್ಪಟ್ಟಿತು. ಇಂಡಿಯ ಎಂಬ ಹೆಸರಿನಿಂದ ಈಗ ಸುಪ್ರಸಿದ್ಧವಾಗಿರುವ ದೇಶದುತ್ತರಭಾಗದಲ್ಲಿ ಈ ಮಹಾಕುಲದ ಪ್ರಥಮ ವಂಶಗಳು ಬಂದು ನೆಲೆಗೊಂಡುವು. ಈ ಭಾಗಕ್ಕೆ ಆರ್ಯಾವರ್ತವೆಂಬ ಹೆಸರು ಬಂತು. ಏಕೆಂದರೆ- ಆರ್ಯರು ಇಲ್ಲಿ ವಾಸಮಾಡುತ್ತಿದ್ದರು. "ಪೂರ್ವ ಪಶ್ಚಿಮ ಸಮುದ್ರಗಳಿಗೂ ಹಿಮವದ್ವಿಂಧ್ಯಗಳಿಗೂ ನಡುವೆ ಇರುವ ದೇಶವನ್ನು ಪ್ರಾಜ್ಞರು ಆರ್ಯಾವರ್ತವೆನ್ನುತ್ತಾರೆ."

ಈಚೀಚೆಗೆ ಈ ಧರ್ಮವು ಹಿಂದೂಧರ್ಮವೆಂದೂ ಕರೆಯಲ್ಪಟ್ಟಿದೆ, ಮತ್ತು ಈಗ ಈ ಹೆಸರೇ ವಾಡಿಕೆಗೆ ಬಂದಿರುತ್ತದೆ. ಈಗ ಬಾಳುತ್ತಿರುವ ಧರ್ಮಗಳೊಳಗೆಲ್ಲಾ ಇದೇ ಬಹು ಪ್ರಾಚೀನ. ಮತ್ತಾವ ಧರ್ಮವೂ ಇದರಷ್ಟು ಮಹಾಪುರುಷರನ್ನು ಹುಟ್ಟಿಸಿಲ್ಲ. ಮಹಾಮಹಾ ಗುರುಗಳು ಮಹಾಮಹಾ ಕವಿಗಳು ಮಹಾಮಹಾ ಋಷಿಗಳು ಮಹಾಮಹಾ ಭಕ್ತರು ಮಹಾಮಹಾ ಭೂಪತಿಗಳು ಮಹಾಮಹಾ ವೀರರು ಮಹಾಮಹಾ ಮಂತ್ರಿಗಳು ಮಹಾಮಹಾ ಲೋಕೋಪಕಾರಿಗಳು ಮಹಾಮಹಾ ದೇಶಾಭಿಮಾನಿಗಳೂ ಈ ಧರ್ಮಕ್ಕೆ ಸೇರಿದವರಾಗಿದ್ದರು. ಈ ಧರ್ಮವನ್ನು ನೀವು ತಿಳಿದ ಹಾಗೆಲ್ಲಾ, ನೀವು ಹೆಚ್ಚು ಹೆಚ್ಚಾಗಿ ಇದನ್ನು ಸನ್ಮಾನಿಸುತ್ತಾ ಪ್ರೀತಿಸುವಿರಿ; ಈ ಧರ್ಮಕ್ಕೆ ಸೇರಿದವರಾಗಿ ಹುಟ್ಟಿದೆವು ಎಂದು ಕೃತಜ್ಞತೆಯನ್ನು ಹೆಚ್ಚು ಹೆಚ್ಚಾಗಿ ತೋರಿಸುವರಾಗುವಿರಿ. ಆದರೆ ಈ ಧರ್ಮವನ್ನವಲಂಬಿಸಲು ಅರ್ಹರಾಗದ ಪಕ್ಷಕ್ಕೆ ಈ ಪವಿತ್ರತಮ ಧರ್ಮದಿಂದ ನಿಮಗೆ ಶುಭವಾಗುವುದಿಲ್ಲ.

## ಸನಾತನ ಧರ್ಮದ ತಳಹದಿ.

ಸನಾತನ ಧರ್ಮಕ್ಕೆ ಪ್ರಬಲವಾದೊಂದು ತಳಹದಿ ಯಿದೆ. ಆ ತಳಹದಿಯಮೇಲೆ ಅದರ ಗೋಡೆಗಳು ಕಟ್ಟಲ್ಪಟ್ಟಿವೆ.

ಆ ತಳಹದಿಯನ್ನು ಶ್ರುತಿಯೆಂದು ಕರೆಯುತ್ತಾರೆ. ಗೋಡೆಗಳನ್ನು ಸ್ಮೃತಿಯೆಂದೆನ್ನುತ್ತಾರೆ.

ಶ್ರುತಿಯು ಬಹು ಪ್ರಾಜ್ಞರಾದ ಮಾನವರ ಮುಖಾಂತರವಾಗಿ ಆರ್ಯರಿಗೆ ಕೊಡಲ್ಪಟ್ಟಿರುವುದು. ಈ ಪ್ರಾಜ್ಞರು ಅದನ್ನು ದೇವತೆಗಳ ಬಾಯಿಂದ ಕೇಳಿ ಸ್ವೀಕಾರಮಾಡಿದರು. ಪವಿತ್ರತಮಗಳಾದ ಈ ಉಪದೇಶಗಳು ಈಚೀಚಿನವರೆಗೂ ಅಕ್ಷರದಲ್ಲಿ ಬರೆಯಲ್ಪಟ್ಟಿರಲಿಲ್ಲ ; ಕಂಠಪಾಠವಾಗಿ ಕಲಿಯಲ್ಪಟ್ಟು ಪದೇಪದೇ ಪಾರಾಯಣ ಮಾಡಲ್ಪಟ್ಟಿದ್ದುವು.

ಗುರುವಾದವನು ತನ್ನ ಶಿಷ್ಯಮಂಡಲಿಗೆ ಶ್ರುತಿಯನ್ನು ಸ್ವರಸಹಿತವಾಗಿ ಪಾಠಹೇಳಿಕೊಟ್ಟನು. ಶಿಷ್ಯರು ಬಾಯಿಂದ ತಮ್ಮ ಗುರುವಿನಂತೆ ಅದನ್ನು ಉಚ್ಚರಿಸಿದರು. ಗುರುವು ಕೊಂಚಕೊಂಚವಾಗಿಯೇ ಹೇಳಿಕೊಟ್ಟನು ; ಅದನ್ನು ಶಿಷ್ಯರು ಪಠನಮಾಡಿಮಾಡಿ ಚೆನ್ನಾಗಿ ಕಲಿತರು. ಬಹುಪುರಾತನ ಕಾಲದಲ್ಲಿ ನಮ್ಮ ಪಿತೃಪಿತಾಮಹರುಗಳು ಹೇಗೆ ವೇದವನ್ನು ಕಲಿತರೋ ಹಾಗೆಯೇ ವಿದ್ಯಾರ್ಥಿಗಳು ಅದನ್ನು ಈಗಲೂ ಕಲಿಯುತ್ತಿದಾರೆ. ವೈದಿಕ ಪಾಠಶಾಲೆಯೊಂದಕ್ಕೆ ಹೋದರೆ, ಈ ಬಗೆಯಲ್ಲಿ "ಸಂತೆ" ಹೇಳುವುದನ್ನು ಈಗಲೂ ಕೇಳಬಹುದಾಗಿದೆ.

ಚತುರ್ವೇದಗಳೇ ಶ್ರುತಿ. ವೇದವೆಂದರೆ ಜ್ಞಾನ. ಧರ್ಮಕ್ಕೆಲ್ಲಾ ಅಸ್ತಿಭಾರವಾಗಿರುವ ಈ ಜ್ಞಾನವು ಚತುರ್ವೇದಗಳಲ್ಲಿ ಮಾನವರಿಗೋಸ್ಕರ ದಯಾಪಾಲಿಸಲ್ಪಟ್ಟಿರುವುದು. ಈ ವೇದಗಳ ಹೆಸರು—ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ.

ಪ್ರತಿವೇದದಲ್ಲಿಯೂ ಮೂರುಭಾಗಗಳಿವೆ :—(೧) ಮಂತ್ರ ಅಥವಾ ಸಂಹಿತೆ ; (೨) ಬ್ರಾಹ್ಮಣ ; (೩) ಉಪನಿಷತ್ತು.

ಮಂತ್ರಭಾಗದಲ್ಲಿ ಮಂತ್ರಗಳಿರುವುವು. ಮಂತ್ರಗಳ ವಾಕ್ಯಗಳಲ್ಲಿ ಒಂದೊಂದು ಬಗೆಯ ಶಬ್ದ ಸರಣಿಯಿರುವುದು. ಈ ಶಬ್ದ ಸರಣಿಗೆ ಅದ್ಭೊಂದು ಶಕ್ತಿಯುಂಟು. ಅದರಿಂದ ಕೆಲಕೆಲ ಫಲಗಳು ಫಲಿಸುವುವು. ದೇವತೆಗಳನ್ನು ಕುರಿತ ಋಕ್ಕುಗಳಿವೆ ;—ದೇವತೆಗಳಿಗೂ ಮಾನವರಿಗ್ಗೂ ಇರುವ ಪರಸ್ಪರ ಸಂಬಂಧಗಳನ್ನು ಮುಂದೆ ತಿಳಿಸುವರಾಗುತ್ತೇವೆ ;—ಕ್ರಮಾನುಸಾರವಾಗಿ ಕಲಿತ ಪ್ರಾಜ್ಞರಿಂದ ಕ್ರಮಾನುಸಾರವಾಗಿ ಈ ಋಕ್ಕು

ಗಳು ಉಚ್ಚಾರಣೆ ಮಾಡಲ್ಪಟ್ಟಾಗ ಕೆಲವು ಫಲಗಳು ಲಭಿಸುವುವು. ಈ ಮಂತ್ರಗಳನ್ನು ಹವ್ಯಕವ್ಯಾದಿ ಕರ್ಮಗಳಲ್ಲಿ ಉಪಯೋಗಿಸುತ್ತೇವೆ. ಕರ್ಮದ ಫಲವು ಸರಿಯಾಗಿ ಲಭಿಸಬೇಕಾದರೆ, ಮಂತ್ರವು ತಕ್ಕವರಿಂದ ಸರಿಯಾಗಿ ಉಚ್ಚರಿಸಲ್ಪಡಲೇ ಬೇಕು.

ವೇದಗಳ ಬ್ರಾಹ್ಮಣ ಭಾಗದಲ್ಲಿ ಹವ್ಯಕವ್ಯಾದಿಗಳನ್ನು ನಡೆಯಿಸುವ ವಿಧಾನವನ್ನು ತಿಳಿಸಿರುತ್ತಾರೆ. ಪ್ರಥಮಭಾಗದಲ್ಲಿ ಕೊಟ್ಟಿರುವ ಮಂತ್ರಗಳನ್ನು ವಿನಿಯೋಗಿಸುವ ಕ್ರಮವನ್ನು ಈ ಭಾಗವು ವಿಶದಗೊಳಿಸುವುದು. ಇದೂ ಅಲ್ಲದೆ ಈ ಪ್ರಯೋಗಗಳಿಗೆ ಸಂಬಂಧಪಡುವ ಇತಿಹಾಸಗಳನ್ನೂ ತಿಳಿಸುವುದು.

ಉಪನಿಷದ್ಭಾಗದಲ್ಲಿ ಮಹಾಮಹಾ ತತ್ವಾರ್ಥಗಳು ತಿಳಿಸಲ್ಪಟ್ಟಿವೆ. ಬ್ರಹ್ಮಲಕ್ಷಣ, ಪರಮಾತ್ಮ ಜೀವಾತ್ಮರುಗಳ ವಿಚಾರ, ಬ್ರಹ್ಮಾಂಡ ಪಿಂಡಾಂಡಗಳ ವಿಷಯ, ಬಂಧ, ಮೋಕ್ಷ—ಇವೆಲ್ಲಾ ಬರುವುವು. ಸಾಂಖ್ಯಾದಿ ದರ್ಶನಗಳಿಗೆಲ್ಲಾ ಉಪನಿಷತ್ತುಗಳೇ ಮೂಲ, ಪ್ರೌಢ ವಯಸ್ಕರಾದಮೇಲೆ ನೀವುಗಳು ಇವನ್ನು ವ್ಯಾಸಂಗ ಮಾಡಿ ಸಂತುಷ್ಟರಾಗಬಹುದು. ವಿಶೇಷವಾಗಿ ವಿದ್ಯಾವ್ಯಾಸಂಗ ಮಾಡಿದವರು ಮಾತ್ರ ಇವನ್ನು ಕಲಿಯಬಹುದಾಗಿದೆ ; ಉಳಿದವರಿಗೆ ಬಹುಕಷ್ಟ.

ಉಪವೇದವೆಂದೂ, ತಂತ್ರವೆಂದೂ, ಕೆಲಕೆಲವೇಳೆಗಳಲ್ಲಿ ಕರೆಯಲ್ಪಡುತ್ತಿದ್ದ ವೇದದ ನಾಲ್ಕನೆಯ ಭಾಗವದೊಂದು ಪೂರ್ವದಲ್ಲಿತ್ತು. ಇದರಲ್ಲಿ ವಸ್ತುಶಾಸ್ತ್ರದ ವಿಷಯಗಳನ್ನೂ ತದನುಸಾರಿಗಳಾದ ಕ್ರಿಯಾವಿಧಿಗಳನ್ನೂ ತಿಳಿಸಿದ್ದರು. ಪುರಾತನಕಾಲದ ನಿಜವಾದ ತಾಂತ್ರಿಕವಿದ್ಯೆಯಲ್ಲಿ ಈಗುಳಿದಿರುವುದು ಬಹುಬಹು ಸ್ವಲ್ಪ. ಇದಕ್ಕೆ ಕಾರಣವೂ ಉಂಟು ; ಜನರು ಅಸಾಧುಗಳಾಗಿಯೂ ಅಜ್ಞಾನಿಗಳಾಗಿಯೂ ಇರುವ ಕಾಲಕ್ಕೆ ಇವು ತಕ್ಕವುಗಳಲ್ಲವೆಂದು ಋಷಿಗಳು ಈ ವಿದ್ಯೆಯನ್ನು ಮುಚ್ಚಿಟ್ಟಿರುತ್ತಾರೆ. ಆದರೂ ವಾಡಿಕೆಯಲ್ಲಿರುವ ವೈದಿಕ ಕರ್ಮಗಳ ಜತೆಯಲ್ಲಿಯೂ ಇವುಗಳಿಗೆ ಬದುಲಾಗಿಯೂ ಪೂಜಾಕ್ರಮಗಳಲ್ಲಿ ಕೆಲ

ಕೆಲವು ತಾಂತ್ರಿಕ ಕ್ರಿಯೆಗಳು ಪ್ರಯೋಗದಲ್ಲಿರುತ್ತವೆ. ತಂತ್ರವೆಂಬ ಹೆಸರಿನೊಡನೆ ಈಗುಳಿದಿರುವ ಗ್ರಂಥಗಳನ್ನು ಸಾಮಾನ್ಯವಾಗಿ ಈಗ ವೇದದ ಭಾಗವಾಗಿ ಸ್ವೀಕರಿಸುವುದಿಲ್ಲ.

ಶ್ರುತ್ಯುಕ್ತವಾದುದು ಸರ್ವಪ್ರಧಾನವೆಂದು ಭಾವಿಸಲ್ಪಟ್ಟಿದೆ. ಸನಾತನ ಧರ್ಮಾವಲಂಬಿಗಳು ಶ್ರುತಿಯನ್ನು ಸರ್ವೋತ್ಕೃಷ್ಟ ಪ್ರಮಾಣವೆಂದು ಭಾವಿಸಿರುತ್ತಾರೆ. ವಿವಾದ ಪ್ರಕರಣಗಳಲ್ಲೆಲ್ಲಾ ಎಲ್ಲಾ ಪಂಗಡದವರೂ ಎಲ್ಲಾ ಸಿದ್ಧಾಂತಿಗಳೂ ಶ್ರುತಿಯನ್ನೇ ಸರ್ವೋತ್ಕೃಷ್ಟಪ್ರಮಾಣವೆಂದು ತೋರಿಸುತ್ತಿದ್ದಾರೆ.

ಸ್ಮೃತಿಗೆ ಅಥವಾ ಧರ್ಮಶಾಸ್ತ್ರಕ್ಕೆ ಶ್ರುತಿಯೇ ಆಧಾರ. ಪ್ರಮಾಣದಲ್ಲಿದು ಶ್ರುತಿಗೆ ಎರಡನೆಯದು. ಋಷಿಪ್ರೋಕ್ತಗಳಾದ ನಾಲ್ಕು ಮಹಾ ಗ್ರಂಥಗಳು ಸ್ಮೃತಿಯೆನಿಸಿಕೊಂಡಿವೆ. ಸ್ವಾರ್ಥಾನುಷ್ಠಾನಗಳಿಗೂ ಗೃಹಕೃತ್ಯಕರ್ಮಗಳಿಗೂ ಸಾಮಾಜಿಕ ವ್ಯವಹಾರಗಳಿಗೂ ರಾಷ್ಟ್ರೀಯಧರ್ಮಗಳಿಗೂ ಸಂಬಂಧಪಡುವ ವಿಧಿಗಳನ್ನೂ ನಿಬಂಧನೆಗಳನ್ನೂ ಇವು ತೋರಿಸಿಕೊಡುವುವು. ಹಿಂದೂ ಜನಾಂಗವು ನೆಲೆಗೊಂಡಿರುವುದು ಈ ಆಧಾರದ ಮೇಲೆಯೇ ; ಮತ್ತು ಹಿಂದೂಜನರೆಲ್ಲರೂ ಈ ಧರ್ಮನಿಬಂಧನೆಗಳಿಗೇ ಒಳಪಟ್ಟಿರುವರು. ಇವು ಯಾವುವೆಂದರೆ :—

(೧) ಮನುಸ್ಮೃತಿ ಅಥವಾ ಮಾನವಧರ್ಮಶಾಸ್ತ್ರ. ಇಂಗ್ಲೀಷಿನಲ್ಲಿದನ್ನು Institutes of Manu ಎನ್ನುತ್ತಾರೆ.

(೨) ಯಾಜ್ಞವಲ್ಕ್ಯಸ್ಮೃತಿ.

(೩) ಶಂಖಲಿಖಿತಸ್ಮೃತಿ.

(೪) ಪರಾಶರಸ್ಮೃತಿ.

ಆರ್ಯಮಹಾಕುಲಕ್ಕೆಲ್ಲಾ ಮನುವೇ ಮಹಾ ಧರ್ಮಸಂಸ್ಥಾಪನಾಚಾರ್ಯನಾದುದರಿಂದ ಮನುಸ್ಮೃತಿಯು ಸ್ಮೃತಿಗಳಲ್ಲಿ ಪ್ರಮಾಣತಮ ಗ್ರಂಥವಾಗಿದೆ. ಕಾಲಧರ್ಮ ವಿವೇಚನೆಯಲ್ಲಿ ಆರ್ಯರು ಲೋಕಚರಿತ್ರೆಯನ್ನು ಸಪ್ತಮಹಾಭಾಗಗಳಾಗಿ ವಿಂಗಡಿಸಿರುತ್ತಾರೆ. ಒಂದೊಂದು

ಭಾಗಕ್ಕೂ ಒಬ್ಬೊಬ್ಬ ಮನುವು ಅಧಿಕಾರಿಯಾಗಿರುವನು. ಮನುಗಳಿಬ್ಬರ ಮಧ್ಯಕಾಲಕ್ಕೆ ಮನ್ವಂತರವೆಂದು ಹೆಸರು.

"ಸ್ವಯಂಭುವಿನಿಂದ ಹುಟ್ಟಿದವನಾದ ಈ ಮನುವಿನ ಸದ್ವಂಶಕ್ಕೆ ಸೇರಿದವರಾಗಿಯೂ, ಮಹಾ ತೇಜಸ್ವಿಗಳಾಗಿಯೂ ಮಹೋನ್ನತ ಮಾನಸವೃತ್ತಿಯವರಾಗಿಯೂ ಇದ್ದ ಬೇರೆ ಬೇರೆ ಮನುಗಳು ಆರುಮಂದಿಗಳು, ಒಬ್ಬೊಬ್ಬರೂ ಪ್ರಾಣಿಗಳನ್ನು ಸೃಷ್ಟಿಸಿರುತ್ತಾರೆ." ಎಂದು ಹೇಳಲ್ಪಟ್ಟಿದೆ. ಮುಂದಿನ ಶ್ಲೋಕವು ಶ್ರುತಪಡಿಸುವಂತೆ ವಿವಸ್ವಂತನ ಮಗನಾದ ಮನುವಿನ ಅಧಿಪತ್ಯದಲ್ಲಿ, ನಾಲ್ಕನೆಯ ಮನ್ವಂತರದಲ್ಲಿ, ನಾವುಗಳು ಬಾಳುತ್ತಿರುವೆವೆಂದು ಇದರಿಂದ ವ್ಯಕ್ತವಾಗುತ್ತದೆ. ಮನುಸ್ಮೃತಿಯಲ್ಲಿ ಈತನು ವಿಧಾನ ಮಾಡಿದ ಧರ್ಮಾಚರಣೆಗಳು ಕೆಲವು ನಮಗೆ ಬಂದಿರುತ್ತವೆ.

ಮನುಸ್ಮೃತಿಯ ಪಥವನ್ನೇ ಯಾಜ್ಞವಲ್ಕ್ಯ ಸ್ಮೃತಿಯೂ ಪ್ರಾಯೇಣ ಅನುಸರಿಸಿದೆ. ಪ್ರಮಾಣದಲ್ಲಿದು ಅದಕ್ಕೆರಡನೆಯದು. ದಕ್ಷಿಣದೇಶದ ಕೆಲವು ಭಾಗಗಳಲ್ಲಿ ವಿನಾ, ಉಳಿದೆರಡು ಸ್ಮೃತಿಗಳು ಈಗ ವಾಡಿಕೆಯಲ್ಲಿಲ್ಲ.

ಸನಾತನಧರ್ಮವೆಂಬ ಭವನಕ್ಕೆ ಶ್ರುತಿಸ್ಮೃತಿಗಳು ತಳಹದಿ ಗೋಡೆಗಳಾಗಿರುವಲ್ಲಿ, ಪುರಾಣೇತಿಹಾಸಗಳೆಂಬ ಎರಡು ಆಧಾರಭಿತ್ತಿಗಳೂ ಇರುವುವು.

ವೇದ ವ್ಯಾಸಂಗಕ್ಕೆ ಅಧಿಕಾರವಿಲ್ಲದವರ ಮತ್ತು ವಿದ್ಯಾವ್ಯಾಸಂಗದಲ್ಲಿ ಪ್ರವರ್ಧಮಾನರಾಗಿಲ್ಲದವರ ಪ್ರಯೋಜನಾರ್ಥವಾಗಿ ಪುರಾಣಗಳಿರುವುವು. ಪುರಾಣಗಳಲ್ಲಿ ಚರಿತ್ರೆಗಳೂ, ಕಥೆಗಳೂ ಪಾರಿಭಾಷಿಕ ಪದಗಳ ಮುಖಾಂತರವಾಗಿ ತಿಳಿಸಿರುವ ತತ್ವಪ್ರಕಾಶಗಳೂ ಇರುವುವು. ಪುರಾಣಗಳು ಪಠನಕ್ಕೆ ಯೋಗ್ಯಗಳಾಗಿಯೂ ಮನೋರಂಜಕಗಳಾಗಿಯೂ ನಾನಾಬಗೆಯ ವಿಚಾರಗಳನ್ನೊಳಕೊಂಡುವುಗಳಾಗಿಯೂ ಇವೆ. ಪಾರಿಭಾಷಿಕ ಪದಗಳ ಅರ್ಥವು ಕ್ಲಿಷ್ಟವಾಗಿರುವುದರಿಂದ ಗುರು ಸಹಾಯವಿಲ್ಲದೆ ರಹಸ್ಯಗಳು ತಿಳಿಯಬರುವುದಿಲ್ಲ.

ಇತಿಹಾಸಭಾಗವು ಮಹಾಕಾವ್ಯಗಳೆರಡನ್ನೊಳಕೊಂಡಿವೆ.

(೧). ಶ್ರೀಮದ್ರಾಮಾಯಣ :—ಇದರಲ್ಲಿ ದಶರಥಪುತ್ರನಾದ ಶ್ರೀರಾಮನ, ಆತನ ಸತಿಯಾದ ಸೀತೆಯ, ಮತ್ತು ಆತನ ಭ್ರಾತೃಗಳ ಚರಿತ್ರೆಯು ಚಿತ್ರಿಸಲ್ಪಟ್ಟಿದೆ. ನೀವೆಲ್ಲರೂ ತಿಳಿದಿರುವಂತೆ ಈ ಕಥೆಯು ನವರಸಭರಿತವಾಗಿಯೂ ನೀತಿಪ್ರದವಾಗಿಯೂ ಮನೋಲ್ಲಾಸಕರವಾಗಿಯೂ ಇರುವುದು.

(೨). ಶ್ರೀಮನ್ಮಹಾಭಾರತ :—ಉತ್ತರದೇಶದಲ್ಲಾಳಿ, ಕೌರವ ಪಾಂಡವರೆಂಬ ಎರಡು ಕಕ್ಷಿಗಳಾಗಿ ಘೋರಯುದ್ಧವನ್ನು ಮಾಡಿದ ರಾಜರ ಚರಿತ್ರೆಯನ್ನು ಇದು ತಿಳಿಸುವುದು. ಸೊಗಸಾದುಪಾಖ್ಯಾನಗಳೂ ಮಹಾ ಮಹಾ ಧರ್ಮೋಪದೇಶಗಳೂ ಪ್ರಯೋಜನಕಾರಿಗಳಾದ ನಾನಾ ಬಗೆಯ ಪಾಠಪ್ರವಚನಗಳೂ ಈ ಮಹಾಭಾರತದಲ್ಲಿ ಮಿತಿಯಿಲ್ಲದೆ ತುಂಬಿವೆ.

ರಾಮಾಯಣ ಮಹಾಭಾರತಗಳೆಂಬೀ ಎರಡು ಕಾವ್ಯಗಳೂ ಇಂಡಿಯಾದೇಶದ ಪೂರ್ವಸ್ಥಿತಿಯನ್ನೂ, ಆಗಿದ್ದ ಜನರನ್ನೂ, ಅವರ ಆಚಾರ ವ್ಯವಹಾರಗಳನ್ನೂ, ಅವರು ಜೀವಿಸುತ್ತಿದ್ದ ತೆರಗಳನ್ನೂ, ಅವರ ಕುಶಲ ವಿದ್ಯೆಗಳನ್ನೂ, ಅವರ ಕೈಗಾರಿಕೆಗಳನ್ನೂ, ಕುರಿತು ನಮಗೆ ಬಹಳ ತಿಳಿವಳಿಕೆಯನ್ನುಂಟುಮಾಡುತ್ತವೆ. ಇವುಗಳನ್ನು ನೀವು ಓದಿದರೆ, ಎಂತಹ ಮಹೋನ್ನತಸ್ಥಿತಿಯಲ್ಲಿ ಇಂಡಿಯಾದೇಶವು ಒಂದಾನೊಂದು ಕಾಲದಲ್ಲಿತ್ತೋ, ಮತ್ತು ನಿಮ್ಮ ದೇಶವನ್ನು ಮತ್ತೊಮ್ಮೆ ಯುನ್ನತಸ್ಥಿತಿಗೆ ತರುವುದಕ್ಕೆ ಹೇಗೆ ಹೇಗೆ ನಡೆದುಕೊಳ್ಳಬೇಕೋ—ಇವೆಲ್ಲವನ್ನೂ ಕಲಿಯುವಿರಿ.

## ಸನಾತನ ಧರ್ಮದಲ್ಲಿರುವ ಶಾಸ್ತ್ರಗಳು ಮತ್ತು ತತ್ವಗಳು.

ಶ್ರುತಿ ಸ್ಮೃತಿಗಳೂ ಪುರಾಣೇತಿಹಾಸಗಳೂ ಸೇರಿ ಆರ್ಯಧರ್ಮವೆಂಬ ಭವನವಾಗಿರುವುದಲ್ಲದೆ, ಈ ಧರ್ಮವು ದಿವ್ಯಗಳಾದನೇಕ ಶಾಸ್ತ್ರ

ಗ್ರಂಥಗಳಿಗೂ ತತ್ವಗ್ರಂಥಗಳಿಗೂ ಅವಕಾಶವನ್ನುಂಟುಮಾಡಿದೆಯೆಂಬುದೂ ಕಾಣಬರುತ್ತದೆ.

ಶಾಸ್ತ್ರಗಳನ್ನು ಷಡಂಗಗಳಾಗಿ ವಿಂಗಡಿಸಿದಾರೆ. ಈ ಷಡಂಗಗಳು ಅಥವಾ ಶಾಖೆಗಳು ಲೌಕಿಕ ವಿಷಯಗಳನ್ನೊಳಕೊಂಡಿವೆ. ಪೂರ್ವದಲಿ ಲೌಕಿಕ ವೈದಿಕ ವಿಚಾರಗಳಲ್ಲಿ ಈಗಿನಂತೆ ಭೇದವನ್ನು ಕಲ್ಪಿಸಿಕೊಂಡಿರಲಿಲ್ಲ.

ವ್ಯಾಕರಣ, ನಿರುಕ್ತ, ಜ್ಯೋತಿಷ, ಛಂದಸ್ಸು, ಶಿಕ್ಷ, ಕಲ್ಪ—ಇವುಗಳನ್ನೂ ಅರವತ್ತುನಾಲ್ಕು ಬಗೆಯ ವಿದ್ಯೆಗಳನ್ನೂ, ವ್ಯಾಸಂಗದ ಕ್ರಮಗಳನ್ನೂ ಷಡಂಗಗಳೊಳಕೊಂಡಿದ್ದುವು. ಷಡಂಗ ಪಾರಂಗತನು ಮಹಾವಿದ್ವಾಂಸನೆನಿಸಿಕೊಂಡಿದ್ದನು.

ತತ್ವವಿಚಾರದಲ್ಲಿಯೂ ಆರು ಭಾಗಗಳಿದ್ದುವು. ಷಡ್ದರ್ಶನಗಳೆಂದು—ಆರು ವಿಧದ ವಿಚಾರಗಳೆಂದು—ಇವನ್ನು ಕರೆಯುತ್ತಾರೆ. ಇವುಗಳುದ್ದೇಶವೆಲ್ಲಾ ಒಂದೇ. ಜೀವಾತ್ಮಗಳು ಪರಮಾತ್ಮನಲ್ಲಿ ಐಕ್ಯವಾಗುವುದಕ್ಕೆ ದುಃಖವಿಮೋಚನೆಯನ್ನು ಪಡೆಯಬೇಕೆಂಬುದೇ ಇವುಗಳ ಉದ್ದೇಶ. ಜ್ಞಾನಸಂಪಾದನೆಯೇ ಷಡ್ದರ್ಶನಗಳೂ ಬೋಧಿಸುವ ಸಾಧನ ಮಾರ್ಗ. ಮಾನವರಲ್ಲಿ ಕಾಣಬರುವ ಬಗೆಬಗೆಯ ಚಿತ್ತವಿಪಾಕಗಳಿಗೆ ಅನುಗುಣವಾಗುವಂತೆ ಬೇರೆಬೇರೆ ಮಾರ್ಗಗಳನ್ನು ನಿರೂಪಿಸುವುವು. ಒಂದೇ ಪಟ್ಟಣವನ್ನು ಸೇರಿಸುವ ನಾನಾದಿಕ್ಕಿನ ರಾಜಮಾರ್ಗಗಳಂತೆ ಈ ಷಡ್ದರ್ಶನಗಳಿವೆ.

ಷಡ್ದರ್ಶನಗಳ ಪ್ರಮೇಯಗಳನ್ನು ಕುರಿತು ಮುಂದೆ ಹೇಳುವುದನ್ನು ಹುಡುಗರು ಗ್ರಹಿಸಿದರೆ ಸಾಕಾಗಿರುವುದು :—

ನ್ಯಾಯ ವೈಶೇಷಿಕಗಳೆರಡೂ ಪ್ರಪಂಚದಲ್ಲಿರುವ ವಸ್ತುಗಳನ್ನೆಲ್ಲಾ ಕೆಲವು ವರ್ಗಗಳಿಗೆ ವಿಂಗಡಿಸಿ, ಮಾನವನಾದವನು ಪ್ರತ್ಯಕ್ಷ ಪ್ರಮಾಣದಿಂದಾಗಲಿ, ಅನುಮಾನ ಪ್ರಮಾಣದಿಂದಾಗಲಿ, ಉಪಮಾನ ಪ್ರಮಾಣದಿಂದಾಗಲಿ, ಶಾಬ್ದ ಪ್ರಮಾಣದಿಂದಾಗಲಿ ವಸ್ತುಜ್ಞಾನವನ್ನು ಸಂಪಾದಿಸಬೇಕೆಂಬುದನ್ನು ತೋರಿಸಿಕೊಡುವುವು ; ಪಾಂಚ ಭೌತಿಕಲೋಕಗಳನ್ನೆಲ್ಲಾ ಅಣು

ಪರಮಾಣುಗಳಿಂದ ಈಶ್ವರನು ನಿರ್ಮಿಸಿರುವುದನ್ನು ವಿಶದಪಡಿಸುವುವು ; ಕೊನೆಯಲ್ಲಿ ಜ್ಞಾನಗಳೊಳಗೆಲ್ಲಾ ಈಶ್ವರವಿಷಯಕ ಜ್ಞಾನವೇ ಸರ್ವೋತ್ತಮವೆಂತಲೂ, ಪರಮಾತ್ಮನೇ ಮಾನವರಲ್ಲಿ ಅಂತರಾತ್ಮನಾಗಿರುವನೆಂತಲೂ, ಈ ಜ್ಞಾನವು ನಾನಾವಿಧಗಳಲ್ಲಿ ದೊರೆಯಬಹುದೆಂತಲೂ ತೋರಿಸುವುವು.

ಸಾಂಖ್ಯವು ವಿರಳ ವಿರಳವಾಗಿಯೂ ಹೊಸಹೊಸ ವಿಧಗಳಲ್ಲಿಯೂ ಪುರುಷಪ್ರಕೃತಿಗಳ ವಿಚಾರವನ್ನು ಮಾಡಿ, ಇವೆರಡಕ್ಕೂ ಇರುವ ಪರಸ್ಪರ ಸಂಬಂಧಗಳನ್ನು ವಿಶದ ಪಡಿಸುವುದು.

ಪಂಚ ಕರ್ಮೇಂದ್ರಿಯಗಳೂ ಪಂಚ ಜ್ಞಾನೇಂದ್ರಿಯಗಳೂ ಎಲ್ಲರಿಗೂ ತಿಳಿದಿರುವಂತೆ, ಇರುವುವಷ್ಟೆ ; ಹೀಗೆಯೇ ಸೂಕ್ಷ್ಮತರಗಳಾದ ಇತರ ಜ್ಞಾನೇಂದ್ರಿಯಗಳೂ ಕರ್ಮೇಂದ್ರಿಯಗಳೂ ಸೂಕ್ಷ್ಮತರ ಶರೀರದಲ್ಲಿರುವುವು; ತಮ್ಮ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ತಿಳಿಯಬೇಕೆಂದು ಪ್ರಯತ್ನಿಸುವ ಜನರು ಈ ಸೂಕ್ಷ್ಮೇಂದ್ರಿಯಗಳ ಪಾಟವವನ್ನು ಕ್ರಮಕ್ರಮವಾಗಿ ವೃದ್ಧಿಗೊಳಿಸಬಹುದೆಂಬುದನ್ನು ಯೋಗವು ವಿಶದವಾಗಿ ತಿಳಿಸುವುದು.

ಮೀಮಾಂಸವು ಕರ್ಮ ವಿವೇಚನೆಗೈದು, ಲೌಕಿಕ ವೈದಿಕ ಕರ್ಮಗಳನ್ನು ವಿಂಗಡಿಸಿ, ಕರ್ಮದ ಕಾರ್ಯಕಾರಣಗಳ ತೆರಗಳನ್ನೂ ಫಲಗಳನ್ನೂ ತಿಳಿಸಿ, ಕರ್ಮವೆಂಬುದು ಮಾನವನನ್ನು ಇಹಲೋಕಕ್ಕಾಗಲಿ ಬೇರೊಂದು ಲೋಕಕ್ಕಾಗಲಿ ಬಂಧಿಸುವುದೆಂಬುದನ್ನು ತೋರಿಸಿಕೊಡುತ್ತದೆ.

ವೇದಾಂತವು ಪರಮಾತ್ಮನ ಪಾರಮಾರ್ಥಿಕವಾದ ಸ್ವರೂಪಲಕ್ಷಣಗಳನ್ನು ತಿಳಿಸಿ, ಮನುಷ್ಯನಲ್ಲಿರುವ ಜೀವನೂ ಸರ್ವಾಂತರ್ಯಾಮಿಯಾದ ಪರಮಾತ್ಮನೂ ಸ್ವರೂಪತಃ ಒಂದೇ ಯೆಂಬುದನ್ನು ಬೋಧಿಸಿ, ಕರ್ಮಪಾಶಕ್ಕೊಳಗಾಗದಂತೆ ಮಾನವನು ಬಾಳಬಹುದಾದ ತೆರವನ್ನು ವಿಶದಗೊ

ಳಸಿ, ಮಾನವನು ಪರಮಾತ್ಮನ ಮಾಯಾಶಕ್ತಿಯಿಂದ ಲೋಕಗಳು ಉದ್ಭವಿಸಿ ಭಾಸಿಸಿ ಲಯವನ್ನು ಹೊಂದುವ ರೀತಿಯನ್ನು ಅರಿತವನಾಗಿ, ಯೋಗಾಭ್ಯಾಸದ ಬಲದಿಂದ ಪರಮಾತ್ಮನನ್ನು ಸೇರಿ ಐಕ್ಯವನ್ನು ಹೊಂದಿ ಮೋಕ್ಷವನ್ನು ಪಡೆಯಬಹುದೆಂಬುದನ್ನು ತೋರಿಸಿಕೊಡುತ್ತದೆ.

ಇದು ಸನಾತನಧರ್ಮ ದೀಪಿಕೆಯ ಅವತರಣಿಕೆ.





# ಪ್ರಥಮ ಭಾಗ.

## ಪ್ರಥಮಾಧ್ಯಾಯ.

---

### ಬ್ರಹ್ಮಸ್ವರೂಪ ನಿರೂಪಣ.






ನಂತಂ, ಶಾಶ್ವತಂ, ಅವ್ಯಯಂ, ಸರ್ವಂ ಎನಿಸಿಕೊಂಡು ತನ್ನಾಮವಾಚ್ಯವಾದುದದೊಂದುಂಟು.

ಆ ತತ್ ಎಂಬುದರಿಂದ ಸಕಲವೂ ವ್ಯಕ್ತವಾಗಿ, ಆ ತತ್ ಎಂಬುದರಲ್ಲಿಯೇ ಸಕಲವೂ ಲಯವನ್ನು ಹೊಂದುವುದು.

"ಏಕಮೇವಾದ್ವಿತೀಯಂ." (ಛಾಂದೋಗ್ಯೋಪನಿಷತ್ತು. ಪ್ರಪಾಠಕ ೬, ಖಂಡ ೨, ಋಕ್ಕು ೧).

ಆ ತತ್ ಎಂಬುದು ಹಿಂದಿದ್ದುದೆಲ್ಲವನ್ನೂ ಈಗಿರುವುದೆಲ್ಲವನ್ನೂ ಮುಂದೆ ಹುಟ್ಟುವುದೆಲ್ಲವನ್ನೂ ಒಳಕೊಂಡಿದೆ. ಸಾಗರದಲ್ಲಿ ತರಂಗವೊಂದು ಉದ್ಭವಿಸುನಂತೆ, ಸರ್ವವೆನಿಸಿಕೊಂಡಾ ತತ್ ಎಂಬುದರಲ್ಲಿ ಜಗತ್ತೊಂದು ಉದ್ಭವಿಸುವುದು ; ಆ ತರಂಗವು ಸಾಗರದಲ್ಲಿ ಲಯವಾಗುವ ತೆರದಲ್ಲಿ, ಆ ಸರ್ವವೆನಿಸಿಕೊಂಡುದರೊಳಗೇ ಜಗತ್ತೂ ಲಯವನ್ನು ಹೊಂದುವುದು. ಸಾಗರವು ಹೇಗೆ ಜಲಮಯವಾಗಿರುವುದೋ, ಮತ್ತು ಆ ತರಂಗವು ಹೇಗೆ ತಜ್ಜಲದದೊಂದು ವ್ಯಕ್ತರೂಪವಾಗಿರುವುದೋ,

ಹಾಗೆಯೇ ಏಕಂ ಎನಿಸಿಕೊಂಡಿರುವುದದೊಂದು ಇರುವುದು, ಮತ್ತು ಜಗತ್ತೆಂಬುದು ಅದರ ಅದೊಂದು ವ್ಯಕ್ತರೂಪವಾಗಿರುವುದು. "ಸರ್ವಂ ಖಲ್ವಿದಂ ಬ್ರಹ್ಮ" (ಛಾಂದೋಗ್ಯೋಪನಿಷತ್ತು, ಪ್ರ. ೩, ಖಂ. ೧೪, ಋ. ೧. "ಇದಂ" ಎಂಬುದು "ಜಗತ್ತು" ಎಂಬುದಕ್ಕೆ ಸಂಕೇತ ಪದ.)

ಇದು ಸನಾತನ ಧರ್ಮದ ಪ್ರಥಮ ತತ್ವ. ಸರ್ವಂ ಎನಿಸಿಕೊಂಡಿರುವುದಕ್ಕೆ ಬಗೆಬಗೆಯ ಹೆಸರುಗಳನ್ನಿತ್ತಿರುವರು. ಸನಾತನ ಧರ್ಮದಲ್ಲಿ ಬ್ರಹ್ಮವೆಂಬ ಹೆಸರಿದೆ. ಇಂಗ್ಲೀಷು ಭಾಷೆಯವರು ಗಾಡ್ (ದೇವ) ಎಂದು ಕರೆಯುತ್ತಾರೆ. ಸ್ಪಷ್ಟಾರ್ಥಕ್ಕೋಸ್ಕರವಾಗಿ "God in His own nature" (ಸ್ವಸ್ವಭಾವ ಭೂಷಿತದೇವ) ಎನ್ನುತ್ತಾರೆ. ಆರ್ಯರು ಈ ಸರ್ವಂ ಎಂಬುದನ್ನು ಕೆಲವು ವೇಳೆಗಳಲ್ಲಿ ನಿರ್ಗುಣ ಬ್ರಹ್ಮ, ಉಪಾಧಿರಹಿತನಾದ ಬ್ರಹ್ಮ ಎನ್ನುವುದೂ ಉಂಟು. ಬ್ರಹ್ಮನ ಅವ್ಯಕ್ತಾವಸ್ಥೆಯನ್ನು ಪ್ರತ್ಯೇಕಿಸುವುದಕ್ಕಾಗಿ ನಿರ್ಗುಣಬ್ರಹ್ಮ ಎಂಬ ಪದವನ್ನು ಪ್ರಯೋಗಿಸುವರು. ಬ್ರಹ್ಮನು ವ್ಯಕ್ತಾವಸ್ಥೆಯಲ್ಲಿರುವಾಗ ಸಗುಣನಾಗುವನು, ಉಪಾಧಿಸಹಿತನಾಗುವನು, ಜಗತ್ತಿನೊಡನೆ ಕೂಡಿದ ಮಹೇಶ್ವರನಾಗುವನು. (ಬೃಹದಾರಣ್ಯಕೋಪನಿಷತ್ತು. ಅ. ೪, ಬ್ರಾ. ೩. ಋ. ೧).

ಇವುಗಳನ್ನು ಬ್ರಹ್ಮನ "ಅವಸ್ಥಾದ್ವಯ" ವೆನ್ನುತ್ತಾರೆ. ಈ ವಿಷಯವು ಬಹುಕ್ಲಿಷ್ಟ. ಸಗುಣಬ್ರಹ್ಮನು ವ್ಯಕ್ತನಾದ ಬ್ರಹ್ಮನೆಂತಲೂ, ದ್ವಿತೀಯನಲ್ಲವೆಂತಲೂ, ಅದ್ವಿತೀಯನಾಗಿಯೇ ಕಂಗೊಳಿಸುವ ಬ್ರಹ್ಮನೆಂತಲೂ, ಸಚ್ಚಿದಾನಂದಮೂರ್ತಿಯೆಂತಲೂ ವಿದ್ಯಾರ್ಥಿಯು ಗ್ರಹಿಸಿದರೆ ಸಾಕಾಗಿದೆ. ಸಗುಣ ಬ್ರಹ್ಮನು ಸ್ವಯಂಭು, ಸರ್ವಭೂತಗಳಿಗೂ ಮೂಲಾಧಾರಪುರುಷ, ಕಾರಣಪುರುಷ. ಪುರುಷೋತ್ತಮನೆಂತಲೂ ಪರಮಾತ್ಮನೆಂತಲೂ ಕೆಲಕೆಲವೇಳೆಗಳಲ್ಲಿ ಕರೆಯಲ್ಪಡುತ್ತಾನೆ. ತಾನೇ ಪುರುಷನಾಗಿ ಸರ್ವವೆಂಬುದರ ಬೇರೊಂದು ಮುಖವಾದ ಮೂಲಪ್ರಕೃತಿಯನ್ನು ವ್ಯಕ್ತಪಡಿಸುತ್ತಾನೆ. ಪ್ರಕೃತಿಯೆಂದು ಕರೆಯಲ್ಪಟ್ಟಿರುವುದು ರೂಪಸ್ವೀಕಾರ ಮಾಡುವುದಾದುದರಿಂದ ಎಲ್ಲಾ ತೆರದ, ಎಲ್ಲಾ ಆಕಾರದ

ಎಲ್ಲಾ ವಿಧದ ಶರೀರಗಳನ್ನೂ ಕೊಡಬಲ್ಲುದಾಗಿದೆ. ನಾವು ಸ್ಪರ್ಶ ಮಾಡಬಹುದಾದ, ರುಚಿ ನೋಡಬಹುದಾದ, ಆಘ್ರಾಣಿಸಬಹುದಾದ, ಈಕ್ಷಿಸಬಹುದಾದ, ಕೇಳಬಹುದಾದ ಸಕಲವೂ ಪ್ರಕೃತಿಸಂಬಂಧದುವುಗಳಾಗಿರುವುವಲ್ಲದೆ, ಇನ್ನೂ ಅನೇಕ ವಸ್ತುಗಳೂ, ಪ್ರಕೃತಿಗೆ ಸಂಬಂಧಪಟ್ಟುವುಗಳಾಗಿವೆ. ಇವುಗಳನ್ನೆಲ್ಲಾ ತಿಳಿವಷ್ಟು ನಮ್ಮ ಜ್ಞಾನೇಂದ್ರಿಯಗಳಿನ್ನೂ ಬೆಳೆದಿಲ್ಲ. ಪದಾರ್ಥತತ್ತ್ವ ನಿರ್ಣಯಕಾರನ (Chemist) ಘನರೂಪದ ಪದಾರ್ಥಗಳೂ ದ್ರವರೂಪದ ಪದಾರ್ಥಗಳೂ ವಾಯುರೂಪದ ಪದಾರ್ಥಗಳೂ—ಎಲ್ಲವೂ ಪ್ರಕೃತಿಯಿಂದಲೇ ಆಗಿವೆ. ನಮ್ಮ ಸುತ್ತಲೂ ಇರುವ ಪದಾರ್ಥಗಳೆಲ್ಲವೂ—ಕಲ್ಲುಗಳು, ಗಿಡಗಳು, ತಿರ್ಯಗ್ಜಂತುಗಳು, ಮಾನವರು—ಪ್ರಕೃತಿಯಿಂದಾಗಿವೆ. ಆದರೆ ಇವುಗಳಲ್ಲಿರುವುದು ಪ್ರಕೃತ್ಯಂಶವೊಂದೇ ಅಲ್ಲ. ಕಿವಿಗೂ ಗೋಚರವಾಗದ ಕಣ್ಣಿಗೂ ಗೋಚರವಾಗದ ಮೂಗಿಗೂ ಗೋಚರವಾಗದ ರಸನೆಗೂ ಗೋಚರವಾಗದ ತ್ವಕ್ಕಿಗೂ ಗೋಚರವಾಗದ ಪುರುಷಭಾಗವದೊಂದು ಪಡಿಯೊಂದರಲ್ಲಿಯೂ ಇದ್ದೇ ಇರುವುದು. ಈ ಭಾಗವು ಈಶ್ವರಾಂಶ. ಪ್ರಕೃತಿ ಭಾಗವನ್ನು ಶರೀರವೆಂತಲೂ ಕೋಶವೆಂತಲೂ ಉಪಾಧಿಯೆಂತಲೂ ಹೇಳುತ್ತೇವೆ. ಆತ್ಮನಿಗೆ ಅಥವಾ ಪುರುಷನಿಗೆ ಶರೀರಾವರಣವನ್ನು ಕೊಡುವುದಾವುದೋ ಅದು ಪ್ರಕೃತಿ. ಹೀಗಿರುವುದರಿಂದ ಈಶ್ವರನು ಎಲ್ಲದರಲ್ಲಿಯೂ ಇದ್ದೇ ಇರುವನು ; ವಸ್ತುಗಳಿಗೆಲ್ಲಾ ಜೀವನನ್ನೀವವನೂ ಅವನೇ. ಅವನು ಆತ್ಮನಾಗಿಯೂ ಜರಾಮರಣ ವರ್ಜಿತನಾಗಿಯೂ ಅಂತರ್ಯಾಮಕನಾಗಿಯೂ ಸರ್ವಭೂತಸ್ಥನಾಗಿಯೂ ಇರುವನು. ಅವನನ್ನು ಬಿಟ್ಟು ಯಾವುದೂ ಇರಲಾರದು. ಆ ಪರಮಾತ್ಮನ ಅಂಶವು ಪ್ರಕೃತಿಯಲ್ಲಿ ಹುದುಗಿದ್ದಾಗ ಜೀವನೆಂದೂ, ಜೀವಾತ್ಮನೆಂದೂ, ಭಿನ್ನಾತ್ಮನೆಂದೂ ಕರೆಯಲ್ಪಡುವುದು.

ಪ್ರಕೃತಿಗೂ ಪುರುಷನಿಗೂ, ಮೇಲೆಹೇಳಿದಂತೆ ಭೇದಗಳಿರುವುವಲ್ಲದೆ, ಬಹು ಮುಖ್ಯಗಳಾದ ಇನ್ನೂ ಕೆಲವು ಭೇದಗಳವೆ. ಜ್ಞಾನೇಂದ್ರಿಯಗಳು ಪರಿಪೂರ್ಣವಾಗಿ ಬೆಳೆದಾಗ ಪ್ರಕೃತಿಯನ್ನು ಗ್ರಹಿಸಬಲ್ಲುವು ;

ಪುರುಷನನ್ನಾದರೋ ಗ್ರಹಿಸಲೇ ಆರವು. ಪ್ರಕೃತಿ ರೂಪಸಹಿತವಾದುದು ಪುರುಷನು ರೂಪರಹಿತನು. ಪುರುಷನೇ ಚೈತನ್ಯ, ಗ್ರಹಿಸುವವನೂ ಅನುಭವಿಸುವವನೂ ಯೋಚಿಸುವವನೂ ಅವನೇ. ನಮ್ಮೆಲ್ಲರಲ್ಲಿಯೂ ಇರುವ "ಅಹಂ" ಎಂಬುವನೂ ಅವನೇ. ಒರ್ವನಾದ ಆತ್ಮನೇ ಎಲ್ಲದರಲ್ಲಿಯೂ ಎಲ್ಲರಲ್ಲಿಯೂ ಇರುವನು. ಪ್ರಕೃತಿಯು ಗ್ರಹಿಸಲೂ ಆರದು, ಅನುಭವಿಸಲೂ ಆರದು, ಯೋಚಿಸಲೂ ಆರದು. ಪ್ರಕೃತಿ ಜಡ, ತಿಳಿವಿಲ್ಲದುದು. ತನಗೆ ತಾನೇ ವಿಭಾಗವಾಗಿ ರೂಪಾಂತರಗಳನ್ನು ಹೊಂದಿ ಅನೇಕವಾಗಿ ಕಾಣುವ ಗುಣವೂ ಪ್ರಕೃತಿಗುಂಟು. ಪ್ರಕೃತಿ ಪುರುಷ ವೆಂಬುವು ಪರಸ್ಪರ ವಿರುದ್ಧ ಸ್ವಭಾವವುಳ್ಳವುಗಳು. ಗ್ರಹಿಸುವಾತನು ಪುರುಷ ; ಗ್ರಹಣಕ್ಕೆ ವಿಷಯವಾದುದು ಪ್ರಕೃತಿ.

ವಿದ್ಯಾರ್ಥಿಗಳು ಈ ಭೇದಗಳನ್ನು ಗ್ರಹಿಸಲು ಸರ್ವಪ್ರಯತ್ನವನ್ನೂ ಮಾಡಬೇಕು. ಪ್ರಕೃತಿ ಪುರುಷರ ವಿಷಯದಲ್ಲಿ ತಪ್ಪಿಹೋಗಲೇ ಬಾರದು. ಅವು ವಿರುದ್ಧಸ್ವಭಾವವುಳ್ಳವುಗಳಾಗಿವೆ. ಇವರೇ ಪ್ರಥಮ "ದಂಪತಿಗಳು." ಈ ಉಭಯತ್ರರಿಂದಲೇ ಜಗತ್ತೆಂಬುದು ಉದ್ಭವಿಸುವುದು.

ಪುರುಷನಿಗೆ ಸತ್ ಚಿತ್ ಆನಂದ ಎಂಬ ಮೂರೂ ರೂಪಗಳಿರುವಂತೆ, ಪ್ರಕೃತಿಗೆ ಸತ್ವ ರಜಸ್ಸು ತಮಸ್ಸು ಎಂಬ ಮೂರೂ ಗುಣಗಳಿರುವುವು. ಸತ್ ಎಂದರೆ ಇರವು, ಚಿತ್ ಎಂದರೆ ಸ್ಫುರಣಶಕ್ತಿ, ಆನಂದವೆಂದರೆ ನಿರತಿಶಯ ಸುಖ. ತಮಸ್ಸು ಎಂದರೆ ಜಡಭಾವ, ರಜಸ್ಸು ಎಂದರೆ ಚಲನಶಕ್ತಿ, ಸತ್ವವೆಂದರೆ ಸಮೀಕರಣ ಶಕ್ತಿ. ಜಡತ್ವದ ಪ್ರಭಾವದಿಂದ ಪದಾರ್ಥಗಳು ಸಗ್ಗದಂತೆಯೂ ಇದ್ದಂತೆಯೂ ಇರುವುವು. ರಜಸ್ಸಿನ ಪ್ರಭಾವದಿಂದ ಪದಾರ್ಥಗಳಿಗೆ ಚಲನಶಕ್ತಿಯಿರುವುದು; ಸತ್ವದ ಪ್ರಭಾವದಿಂದ ಚಲನವು ಕ್ರಮಾವಸ್ಥೆಯಲ್ಲಿರುವುದು. "ಕಲ್ಲು ತನ್ನಷ್ಟಕ್ಕೆ ತಾನೇ ಚಲಿಸುವುದೇ ಇಲ್ಲವಲ್ಲ ?" ಎಂದು ನೀವು ಹೇಳಲು ಯತ್ನಿಸಬಹುದು. ಭೌತಿಕ ಶಾಸ್ತ್ರವು—"ಹಾಗಿಲ್ಲ. ಕಲ್ಲಿನ ಪ್ರತಿಕಣವೂ—ದೃಗ್ಗೋಚರವಾಗದಷ್ಟು ಸೂಕ್ಷ್ಮವಾಗಿರುವ ಪ್ರತಿಕಣವೂ—ಅತ್ಯಂತ ವೇಗದಿಂದಲೂ

ಕ್ರಮದಿಂದಲೂ ಎಡೆವಿಡದೆ ಪರಿಸ್ಫುರಿಸುತ್ತಲೇ (vibrate) ಇರವುದು" ಎಂದು ಸಿದ್ಧಾಂತಮಾಡಿದೆ.

ಮೊಟ್ಟಮೊದಲಿನಲ್ಲಿ ಪ್ರಕೃತಿಗೆ ರೂಪಗಳು ಹುಟ್ಟುವಂತೆ ಮಾಡಿದ ಈಶ್ವರನ ಆಶಕ್ತಿಯನ್ನು ಮಾಯೆಯೆಂತಲೂ ದೈವೀ ಪ್ರಕೃತಿಯೆಂತಲೂ ಕರೆವುದುಂಟು. "ನನ್ನ ದಿವ್ಯಪ್ರಕೃತಿಯು ನನ್ನ ಪರಪ್ರಕೃತಿಯಾಗಿ ಜೀವಭೂತವಾಗಿ ಜಗತ್ತನ್ನೆಲ್ಲಾ ಧರಿಸುವುದು" ಎಂದು ಶ್ರೀಕೃಷ್ಣಪರಮಾತ್ಮನುಸುರುವನು. (ಭಗವದ್ಗೀತ. ಅ. ೭, ಶ್ಲೋ. ೫)

ಈಶ್ವರನೂ ಮೂಲಪ್ರಕೃತಿಯೂ ಇದಿರಿದಿರಾಗಿ ನಿಲ್ಲಲು, ಈಶ್ವರನ ದಿವ್ಯ ತೇಜಸ್ಸು ಮೂಲಪ್ರಕೃತಿಯಲ್ಲಿ ಪ್ರಸರಿಸಲು, ಗುಣಗಳು ಪರಸ್ಪರವಾಗಿ ಕಲೆತು ರೂಪಗಳುದ್ಭವಿಸಲಾರಂಭಿಸಿದುವು ಎಂದು ವಿದ್ಯಾರ್ಥಿಯು ಭಾವಿಸಿಕೊಳ್ಳಬಹುದು. ಶಕ್ತಿಯೇ ಮಾಯೆ, ಈಶ್ವರನೇ ಮಾಯಾಪತಿ. ಈ ಹೆಸರುಗಳನ್ನೂ ಅವುಗಳ ಅರ್ಥಗಳನ್ನೂ ಬಾಲವಿದ್ಯಾರ್ಥಿಗಳೂ ಕೂಡ ಜ್ಞಾಪಕದಲ್ಲಿಟ್ಟಿರುವುದಕ್ಕೆ ಪ್ರಯತ್ನಪಡಬೇಕು. ಹಾಗೆ ಮಾಡದಿದ್ದರೆ ಭಗವದ್ಗೀತೆಯ ತತ್ವಾರ್ಥವನ್ನು ತಿಳಿಯಲಾಗುವುದಿಲ್ಲ. ಭಗವದ್ಗೀತೆಯನ್ನು ಹಿಂದೂ ಹುಡುಗರೆಲ್ಲರೂ ತಿಳಿದುಕೊಳ್ಳುವುದು ಕರ್ತವ್ಯವಾಗಿದೆ.

ಮೂಲಪ್ರಕೃತಿಯೆನ್ನುವುದಕ್ಕೆ ಬದಲಾಗಿ "ಮೂಲ" ಎಂಬುದನ್ನು ಬಿಟ್ಟು "ಪ್ರಕೃತಿ" ಎಂಬುದನ್ನೇ ವಾಡಿಕೆಯಾಗಿ ಪ್ರಯೋಗಿಸುತ್ತಿರುವುದನ್ನು ಜ್ಞಾಪಕದಲ್ಲಿಡುವುದು ಉತ್ತಮ.

## ಸ್ಮೃತ್ಯಾದಿವಚನಗಳು.

ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯದ್ ಜ್ಞಾತ್ವಾ ಮೃತಮಶ್ನುತೇ ।
ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥
ಸರ್ವತಃಪಾಣಿಪಾದಂ ತತ್ ಸರ್ವತೋಕ್ಷಿಶಿರೋಮುಖಂ ।
ಸರ್ವತಃಶ್ರುತಿಮಲ್ಲೋಕೇ ಸರ್ವಮಾವೃತ್ಯತಿಷ್ಠತಿ ॥

ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ |
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ||
ಬಹಿರಂತಶ್ಚ ಭೂತಾನಾಂ ಅಚರಂ ಚರಮೇವಚ |
ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ||
ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ |
ಭೂತಭರ್ತೃ ಚ ತದ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ||
ಜ್ಯೋತಿಷಾಮಪಿತಜ್ಜ್ಯೋತಿಸ್ತಮಸಃ ಪರಮುಚ್ಯತೇ ||
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಂ !

(ಭಗವದ್ಗೀತೆ ಅ. ೧೩, ಶ್ಲೋ. ೧೨–೧೭).

"ತಿಳಿಯಬೇಕಾದುದನ್ನು, ತಿಳಿವುದರಿಂದ ಅಮೃತತ್ವವು ಲಭಿಸುವುದನ್ನು, ಆದಿರಹಿತನಾದ ಪರಬ್ರಹ್ಮನನ್ನು, ಸತ್ ಎಂದೇ ಆಗಲಿ ಅಸತ್ ಎಂದೇ ಆಗಲಿ ಕರೆಯಲ್ಪಡದವನನ್ನು ನಾನು ಪ್ರವಚನ ಮಾಡುವೆನು.

"ಆ ಪರಬ್ರಹ್ಮನಿಗೆ ಎಲ್ಲೆಡೆಗಳಲ್ಲಿಯೂ ಕೈಕಾಲುಗಳುಂಟು; ಎಲ್ಲೆಡೆಗಳಲ್ಲಿಯೂ ಕಣ್ಣುಗಳೂ ತಲೆಗಳೂ ಬಾಯಿಗಳೂ ಉಂಟು ; ಎಲ್ಲವನ್ನೂ ಕೇಳುವವನಾಗಿ ಜಗತ್ತಿನಲ್ಲಿ ಸಕಲವನ್ನೂ ಆವರಿಸಿಕೊಂಡಿದಾನೆ.

"ಇಂದ್ರಿಯವಾವುದೂ ಇಲ್ಲದೆ ಸರ್ವೇಂದ್ರಿಯ ಗುಣಾಭಾಸನಾಗಿ, ಅಸಕ್ತನಾಗಿದ್ದರೂ ಸರ್ವಾಧಾರಭೂತನಾಗಿ, ನಿರ್ಗುಣನಾದರೂ ಗುಣಭೋಕ್ತೃವಾಗಿ,

"ಎಲ್ಲಾ ಭೂತಗಳೊಳಗೂ ಹೊರಗೂ ಇರುವವನಾಗಿ, ಚರಾಚರನಾಗಿ, ಸೂಕ್ಷ್ಮತ್ವದ ಪ್ರಭಾವದಿಂದ ಅವಿಜ್ಞೇಯನಾಗಿ, ದೂರಸ್ಥನಾಗಿಯೂ ಸಮೀಪಸ್ಥನಾಗಿಯೂ ಆ ಪರಬ್ರಹ್ಮನಿರುವನು.

"ಭೂತಗಳಲ್ಲಿ ಅವಿಭಕ್ತನಾಗಿದ್ದರೂ ಒಂದೊಂದೂ ಭೂತದಲ್ಲಿಯೂ ವಿಭಕ್ತನಂತಿರುವನು ; ತತ್ ಎಂಬಾತನು ಭೂತಗಳಿಗೆಲ್ಲಾ ಆಧಾರಭೂತನಾಗಿಯೇ ಇರುವನೆಂದು ತಿಳಿಯಬೇಕು ; ನುಂಗುವವನೂ ಅವನೇ, ಹುಟ್ಟಿಸುವವನೂ ಅವನೆ.

"ಆ ಪರಬ್ರಹ್ಮನು ಜ್ಯೋತಿಗಳಿಗೆಲ್ಲಾ ಜ್ಯೋತಿಯೆಂದೂ, ತಮಸ್ಸಿಗೆಲ್ಲಾ ದೂರನಾದವನೆಂದೂ ಖ್ಯಾತನಾಗಿರುವನು ; ಜ್ಞಾನನೆನಿಸಿಕೊಂಡೂ ಜ್ಞೇಯನೆನಿಸಿಕೊಂಡೂ ಜ್ಞಾನಗಮ್ಯನೆನಿಸಿಕೊಂಡೂ ಸರ್ವದಲ್ಲಿಯೂ ಹೃದಯಸ್ಥನಾಗಿರುವನು."

ಆಸೀದಿದಂ ತಮೋಭೂತಮಪ್ರಜ್ಞಾತಮಲಕ್ಷಣಮ್ ।
ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ ॥
ತತಃ ಸ್ವಯಮ್ಭೂರ್ಭಗವಾನ್ ಅವ್ಯಕ್ತೋ ವ್ಯಞ್ಜಯನ್ನಿದಮ್ ।
ಮಹಾಭೂತಾದಿ ವೃತ್ತೌಜಾಃ ಪ್ರಾದುರಾಸೀತ್ತಮೋನುದಃ ॥
ಯೋಽಸಾವತೀಂದ್ರಿಯಗ್ರಾಹ್ಯಃ ಸೂಕ್ಷ್ಮೋಽವ್ಯಕ್ತಸ್ಸನಾತನಃ ।
ಸರ್ವಭೂತಮಯೋಽಚಿಂತ್ಯಸ್ಸಏವ ಸ್ವಯಮುದ್ಬಭೌ ॥

(ಮನುಸ್ಮೃತಿ. ಅ. ೧, ಶ್ಲೋ. ೫—೭)

"ಈ ಜಗತ್ತೆಂಬುದು ತಮೋಭೂತವಾಗಿಯೂ, ಯಾರಿಗೂ ಗೊತ್ತಿಲ್ಲದೆಯೂ, ಲಕ್ಷಣವಾವುದೂ ಇಲ್ಲದೆಯೂ, ತರ್ಕಿಸುವುದಕ್ಕೆ ಸಾಧ್ಯವಿಲ್ಲದಂತೆಯೂ, ತಿಳಿಯಲಸಾಧ್ಯವಾಗಿಯೂ ಎಲ್ಲೆಡೆಯಲ್ಲಿಯೂ ಸಂಪೂರ್ಣವಾದ ಪ್ರಸುಪ್ತಿ (ನಿದ್ರೆ) ಯಲ್ಲಿದ್ದಂತೆಯೇ ಇತ್ತು.

"ತದನಂತರದಲ್ಲಿ ಸ್ವಯಂಭುವಾದ ಭಗವಂತನು, ಅವ್ಯಕ್ತನಾಗಿದ್ದವನು, ಈ ಜಗತ್ತನ್ನು—ಮಹಾಭೂತಾದಿಗಳನ್ನು—ವ್ಯಕ್ತಗೊಳಿಸುತ್ತಾ, ತಮೋರಾಶಿಗಳನ್ನು ಓಡಿಸುವವನಾಗಿ, ಮಹಾಶಕ್ತಿಯೊಡನೆ ಕಾಣಿಸಿಕೊಳ್ಳುವವನಾದನು.

"ಇಂದ್ರಿಯಗಳನ್ನು ಮೀರಿಸಿರುವುದಾವುದೋ ಅದರಿಂದ ಗ್ರಹಿಸಲ್ಪಡಬಹುದಾದವನಾಗಿರುವ, ಸೂಕ್ಷ್ಮನಾದ, ಅವ್ಯಕ್ತನಾದ, ಸನಾತನನಾದ, ಸರ್ವಭೂತಮಯನಾದ, ಅಚಿಂತ್ಯನಾದ ಆ ಪರಮಾತ್ಮನೇ ಸ್ವಯಮುದ್ಭವಿಸುವವನಾದನು."

ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತಏವ ಚ ॥

(ಭಗವದ್ಗೀತೆ. ಅ. ೧೦, ಶ್ಲೋ. ೨೦)

"ಓ ಗುಡಾಕೇಶನೇ! ಸರ್ವಭೂತಾಶಯಸ್ಥಿತನಾಗಿರುವ ಆತ್ಮನು ನಾನು; ಸರ್ವಭೂತಗಳಿಗೂ ಆದಿಯಾಗಿಯೂ ಮಧ್ಯನಾಗಿಯೂ ಅಂತನಾಗಿಯೂ ಇರುವವನೂ ನಾನೆ."

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರಏವ ಚ |
ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರಉಚ್ಯತೇ ||
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ |
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯಈಶ್ವರಃ ||
ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ |
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ |
(ಭಗವದ್ಗೀತೆ. ಅ. ೧೫, ಶ್ಲೋ. ೧೬—೧೮),

"ಈ ಲೋಕದಲ್ಲಿ ಪುರುಷರಿಬ್ಬರಿರುವರು. ಕ್ಷರಪುರುಷನೊಬ್ಬ, ಅಕ್ಷರಪುರುಷನೊಬ್ಬ; ಭೂತವೆನಿಸಿಕೊಂಡಿರುವುದೆಲ್ಲಾ ಕ್ಷರ; ನಿರ್ವಿಕಾರನಾಗಿರುವವನು ಅಕ್ಷರನೆನಿಸಿಕೊಂಡಿದಾನೆ.

"ಉತ್ತಮಪುರುಷನಾಗಿರುವವನು ಬೇರೊಬ್ಬನು; ಅವನನ್ನು ಪರಮಾತ್ಮನೆನ್ನುತ್ತಾರೆ; ಲೋಕತ್ರಯವನ್ನೂ ಆವರಿಸಿ, ಹೊತ್ತುಕೊಂಡು ಅವ್ಯಯನಾಗಿರುವ ಈಶ್ವರನು ಆತನು.

"ನಾನು ಕ್ಷರಾತೀತನಾಗಿರುವುದರಿಂದಲೂ, ಅಕ್ಷರರಿಗಿಂತಲೂ ಉತ್ತಮನಾಗಿರುವುದರಿಂದಲೂ, ಲೋಕದಲ್ಲಿಯೂ ವೇದದಲ್ಲಿಯೂ ಪುರುಷೋತ್ತಮನೆಂದು ನನ್ನನ್ನು ಹೊಗಳಿದಾರೆ."

ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ |
ಮನಷ್ಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ||
(ಭಗವದ್ಗೀತೆ. ಅ. ೧೫, ಶ್ಲೋ. ೭).

"ಚ್ಯುತಿರಹಿತನಾದ ನನ್ನ ಅಂಶವೊಂದು ಜೀವಲೋಕದಲ್ಲಿ ಜೀವಭೂತವಾಗಿ ಪ್ರಕೃತಿಸ್ಥವಾದ ಇಂದ್ರಿಯಗಳನ್ನು ತನ್ನ ಸುತ್ತಲೂ ಆಕರ್ಷಿಸಿಕೊಳ್ಳುವುದು. ಈ ಯಿಂದ್ರಿಯಗಳಲ್ಲಿ ಮನಸ್ಸು ಆರನೆಯದು."

ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ |
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸಪಶ್ಯತಿ ||
ಯದಾಭೂತಪೃಥಗ್ಭಾವಮೇಕಸ್ಥಮನುಪಶ್ಯತಿ |
ತತ ಏವಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ||
ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ |
ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ||
(ಭಗವದ್ಗೀತೆ. ಅ. ೧೩, ಶ್ಲೋ. ೨೭, ೩೦, ೩೩).

"ಸರ್ವಭೂತಗಳಲ್ಲಿಯೂ ಸಮನಾಗಿ ಪರಮೇಶ್ವರನು ಇರುವನು ; ನಾಶವಾಗುವುದರೊಳಗೆ ನಾಶವಾಗದವನಾಗಿರುತ್ತಾನೆ ; ಹೀಗೆ ನೋಡುವವನೇ ನೋಡುವವನು.

ಭೂತಗಳ ವಿವಿಧ ಸ್ವಭಾವಗಳೆಲ್ಲವೂ ಆ ಏಕನಲ್ಲಿ ಬೇರನ್ನುಳ್ಳವುಗಳಾಗಿ ಆ ಪರಮೇಶ್ವರನಿಂದ ಉದ್ಭವಿಸಿವೆಯೆಂದು ತಿಳದಾಗ ಬ್ರಹ್ಮವನ್ನೈದುವನಾಗುವನು.

"ಒರ್ವನಾದಿ ಸೂರ್ಯನು ಈ ಲೋಕವನ್ನೆಲ್ಲಾ ಬೆಳಗುವಂತೆ ಕ್ಷೇತ್ರಾಧಿಪತಿಯು ಕ್ಷೇತ್ರವನ್ನೆಲ್ಲಾ ಬೆಳಗುವನಯ್ಯಾ ಭಾರತ!"

ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ |
ಅಹಂಕಾರಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ||
ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ |
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ||
(ಭಗವದ್ಗೀತೆ. ಅ. ೭, ಶ್ಲೋ. ೪—೫).

"ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ—ಇವು ನನ್ನ ಅಷ್ಟವಿಧ ಪ್ರಕೃತಿಗಳು.

"ಇವು ನನ್ನ ಅಪರಪ್ರಕೃತಿಯ ಭಾಗಗಳು. ಜೀವಭೂತವಾದ ನನ್ನ ಪರಪ್ರಕೃತಿಯನ್ನೂ ತಿಳಿಯುವನಾಗು. ಮಹಾಬಾಹುವೇ, ಈ ಪರಪ್ರಕೃತಿಯು ಜಗದಾಧಾರವಾಗಿರುವುದು."

ಸತ್ವಂ ರಜಸ್ತಮಇತಿ ಗುಣಾಃ ಪ್ರಕೃತಿಸಂಭವಾಃ |
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ||

(ಭಗವದ್ಗೀತೆ. ಅ. ೧೪, ಶ್ಲೋ. ೫).

"ಸತ್ವ ರಜಸ್ಸು ತಮಸ್ಸು—ಇವು ಮೂರೂ ಗುಣಗಳು ಪ್ರಕೃತಿ ಸಂಭವಗಳು; ಎಲೈ ಮಹಾ ಬಾಹುವೇ, ಅವ್ಯಯನಾದ ದೇಹಿಯನ್ನು ದೇಹದಲ್ಲಿ ಇವು ಬಂಧಿಸುತ್ತವೆ."

---

ಇದು ಸನಾತನ ಧರ್ಮದೀಪಿಕೆಯಲ್ಲಿ ತತ್ವಪ್ರಕಾಶಿಕೆಯೆಂಬ ಪ್ರಥಮಭಾಗದಲ್ಲಿ ಬ್ರಹ್ಮಸ್ವರೂಪ ನಿರೂಪಣವೆಂಬ ಹೆಸರಿನ ಪ್ರಥಮಾಧ್ಯಾಯ.



# ಪ್ರಥಮ ಭಾಗ.

## ದ್ವಿತೀಯಾಧ್ಯಾಯ.

---

## ಜಗತ್ಸೃಷ್ಟಿ.



ಈಶ್ವರನು ಪ್ರಕೃತಿಯಲ್ಲಿ ತನ್ನ ಪ್ರಭೆಯನ್ನು ಪ್ರಸರಿಸುವನಾಗಿ, ಆ ಪ್ರಕೃತಿಯು ರೂಪಗಳನ್ನು ತಳೆಯುವಂತೆ ಮಾಡಲು, ಪ್ರಪ್ರಥಮದ ರೂಪತ್ರಯಗಳುದ್ಭವಿಸಿದುವು. ಈ ರೂಪಗಳು ತ್ರಿಮೂರ್ತಿಗಳು, ಈಶ್ವರನ ಮಹಿಮೆಯ ರೂಪತ್ರಯಗಳಾಗಿವೆ. ಈ ರೂಪತ್ರಯಗಳನ್ನು ಈಶ್ವರನು ಬ್ರಹ್ಮಾಂಡದ ರಚನೆಗಾಗಿ ಸ್ವೀಕರಿಸುವನಾದನು. ಬ್ರಹ್ಮಾಂಡವೆಂದರೆ ಬ್ರಹ್ಮನ ಅಂಡ, ಜಗತ್ತು, ಲೋಕವ್ಯೂಹ. ಲೋಕಗಳನ್ನು ಈಶ್ವರನು ಸೃಷ್ಟಿಸುವ ಅವಸ್ಥೆಯನ್ನು ತೋರಿಸಲು ಬ್ರಹ್ಮ ಎಂಬ ಪದವನ್ನು ಪ್ರಯೋಗಿಸುವರು. ಬ್ರಹ್ಮನು ಸೃಷ್ಟಿಕರ್ತ. ಲೋಕಗಳನ್ನು ಈಶ್ವರನು ರಕ್ಷಿಸುವ—ಎಂದರೆ ಪೋಷಿಸುವ, ನೋಡಿಕೊಳ್ಳುವ, ಮತ್ತು ವಿಪತ್ತುಗಳನ್ನು ಪರಿಹರಿಸುವ—ಅವಸ್ಥೆಯನ್ನು ತೋರಿಸಲು ವಿಷ್ಣು ಎಂಬ ಪದವನ್ನು ಪ್ರಯೋಗಿಸುತ್ತಾರೆ. ವಿಷ್ಣು ಜಗದ್ರಕ್ಷಕ. ಲೋಕಗಳು ಸವೆದುಹೋಗಿ ಪ್ರಯೋಜನಕ್ಕೆ ಬಾರದಂತೆ ಆದಹಾಗೆಲ್ಲಾ ಅವುಗಳನ್ನು ಲಯಮಾಡುವ ಅವಸ್ಥೆಯನ್ನು ತೋರಿಸಲು ಶಿವ ಅಥವಾ ಮಹಾದೇವ ಎಂಬ ಪದಗಳನ್ನು ಪ್ರಯೋಗಿಸುತ್ತಾರೆ. ಶಿವನು ಲೋಕಸಂಹಾರಕನು. ಇವು ಮೂರೂ ಈಶ್ವರನ ಪ್ರಥಮವ್ಯಕ್ತಾವಸ್ಥೆಗಳು, ಸರ್ವೋತ್ತಮರೂಪಗಳು, ಮಹಿಮೆಯ ರೂಪತ್ರಯಗಳು, ಅಥವಾ ಮುಖತ್ರಯ. ಏಕನು, ಸಗುಣಬ್ರಹ್ಮನು, ಪರಮೇಶ್ವರನು ತ್ರಿಮೂರ್ತಿಯಾಗಿಯೇ ವ್ಯಕ್ತನಾಗುವನು.

ಸೃಷ್ಟಿಕರ್ತನಾದ ಬ್ರಹ್ಮನು ಪ್ರಕೃತ್ಯಂಶವನ್ನು ಸಪ್ತತತ್ವಗಳಾಗಿಮಾಡುತ್ತಾನೆ.* ಮೊದಲೆರಡನೆಯ ತತ್ವಗಳಿಗೆ ವಿವಿಧನಾಮಗಳನ್ನಿತ್ತಿರುವರು. ಮಹತ್ ಮತ್ತು ಅಹಂಕಾರ ಎಂಬ ಹೆಸರುಗಳನ್ನು ಈ ಮೊದಲೆರಡನೆಯ ತತ್ವಗಳಿಗೆ ನಾವು ಪ್ರಯೋಗಿಸಬಹುದಾಗಿದೆ. ಮಹತ್ ಎಂದರೆ ನಿಷ್ಕಲ್ಮಷಬುದ್ಧಿ (Pure Reason). ಅಹಂಕಾರವು ವಿಭಾಜಕತತ್ವ (Principle of Separation) ; ಪದಾರ್ಥಗಳನ್ನು ಪರಮಾಣುವಾಗಿ (Atoms) ವಿಂಗಡಿಸುವುದು. ಇವೆರಡಾದಮೇಲೆ ಪಂಚತತ್ವಗಳು ಬರುವುವು:—ಆಕಾಶ (Ether), ವಾಯು (Air), ಅಗ್ನಿ (Fire), ಅಪ್ಪು (Water) ಪೃಥ್ವಿ (Earth). ಇವುಗಳ ಸೃಷ್ಟಿಗೆ ಭೂತಾದಿ ಸೃಷ್ಟಿಯೆಂದು ಹೆಸರು. ಲೋಕದಲ್ಲಿ ಎಲ್ಲಾ ವಸ್ತುಗಳಾಗುವುದಕ್ಕೂ ಇವು ಅಂಶತಃ ಸೇರುವುವು. ಈ ಭೂತಗಳಲ್ಲಿ ರಜೋಗುಣಸತ್ವಗುಣಗಳಿಗಿಂತ ತಮೋಗುಣವೇ ಪ್ರಧಾನವಾಗಿರುವುದು ; ಮತ್ತು ಈ ಭೂತಗಳೇ ಹೆಚ್ಚಾಗಿ ಸೇರಿ ಆಗುವ ವಸ್ತುಗಳು ಮಂದವಾಗಿಯೂ ಜಡವಾಗಿಯೂ ಇರುವುವು ; ಇವುಗಳೊಳಗಿರುವ ಜೀವವು ತನ್ನ ಶಕ್ತಿಯನ್ನು ಹೊರಪಡಿಸಲಾರದೆ ಇದೆ ; ಏಕೆಂದರೆ ಇದಕ್ಕಿರುವ ಉಪಾಧಿಯ ಕವಚವು ಬಹಳ ದಪ್ಪನಾಗಿಯೂ ಭಾರವಾಗಿಯೂ ಇರುವುದು.

ಭೂತಗಳ ಸೃಷ್ಟಿಯಾದನಂತರದಲ್ಲಿ ದಶೇಂದ್ರಿಯಗಳು ಸೃಷ್ಟಿಯಾದುವು. ಮೊದಲು ಈ ಇಂದ್ರಿಯಗಳು ಬ್ರಹ್ಮನ ಮನಸ್ಸಿನಲ್ಲಿ ಭಾವಮಾತ್ರಗಳಾಗಿಯೇ ಇದ್ದು, ಅನಂತರದಲ್ಲಿ ಭೂತಾವರಣವನ್ನು ಹೊಂದಿದುವು. ಇವು ಪಂಚಜ್ಞಾನೇಂದ್ರಿಯಗಳು. ಆಘ್ರಾಣಕ್ಕೆ ಸ್ಥಾನ ಮೂಗು, ರುಚಿಗೆ ಸ್ಥಾನ ನಾಲಗೆ, ನೋಟಕ್ಕೆ ಸ್ಥಾನ ಕಣ್ಣು, ಸ್ಪರ್ಶಕ್ಕೆ ಸ್ಥಾನ ತ್ವಕ್ಕು, ಕೇಳ್ವೆಗೆ ಸ್ಥಾನ ಕಿವಿ. ಕರ್ಮೇಂದ್ರಿಯಗಳೂ ಐದಿವೆ. ಕೈಗಳು, ಕಾಲುಗಳು, ವಾಗಿಂದ್ರಿಯಕ್ಕೆ ಸಂಬಂಧಪಡುವ ಅವಯವಗಳು,

* ತತ್ವ ಎಂಬುದನ್ನು Element ಎಂದು ಇಂಗ್ಲೀಷಿನಲ್ಲಿ ಕರೆದಿದಾರೆ. ಆದರೆ ಪಾಶ್ಚಿಮಾತ್ಯ ಪದಾರ್ಥತತ್ವನಿರ್ಣಯಕಾರನು (Chemist) ಈ ಶಬ್ದಕ್ಕೆ ಬೇರೆ ಅರ್ಥವನ್ನು ಇಟ್ಟುಕೊಂಡಿರುವನು. ಇಲ್ಲಿ ತತ್ವವೆಂಬ ಪದಕ್ಕೆ ಹಳೆಯ ಅರ್ಥವನ್ನೇ ಇಟ್ಟುಕೊಂಡಿದೆ.

ಪ್ರಜೋತ್ಪತ್ತಿಗೆ ಸಂಬಂಧಪಡುವ ಅವಯವಗಳು, ಮಲವಿಸರ್ಜನೆಗೆ ಸಂಬಂಧಪಡುವ ಅವಯವಗಳು—ಇವುಗಳೆಲ್ಲಾ ಕರ್ಮೇಂದ್ರಿಯ ಸ್ಥಾನಗಳು. ಈ ದಶೇಂದ್ರಿಯಗಳಲ್ಲಿ ತಮೋಗುಣಸತ್ವಗುಣಗಳಿಗಿಂತ ರಜೋಗುಣವೇ ಪ್ರಧಾನವಾಗಿರುವುದರಿಂದ ಇಂದ್ರಿಯಗಳು ಬಹು ಚಟವಟಿಕೆಯುಳ್ಳವುಗಳಾಗಿವೆ. ಇವುಗಳೊಳಗಿರುವ ಜೀವನು ತನ್ನ ಶಕ್ತಿಗಳನ್ನು ಹೊರಪಡಿಸಲು ಹೆಚ್ಚಾಗಿ ಸಮರ್ಥನಾಗಿರುವನು.

ಇಂದ್ರಿಯ ಸೃಷ್ಟಿಯಾದಮೇಲೆ ಬ್ರಹ್ಮನು ಇಂದ್ರಿಯಾಧಿದೇವತೆಗಳನ್ನೂ ಮನಸ್ಸನ್ನೂ ತನ್ನ ಮನಸ್ಸಿನಲ್ಲಿ ಭಾವಿಸಿದನು. ಮೊದಲೈದು ಇಂದ್ರಿಯಗಳನ್ನು ಕುರಿತು ಮಾತನಾಡುವಾಗ ಮನಸ್ಸನ್ನು ಷಷ್ಟೇಂದ್ರಿಯವೆಂದು, ದಶೇಂದ್ರಿಯಗಳನ್ನು ವಿಚಾರಮಾಡುವಾಗ ಏಕಾದಶೇಂದ್ರಿಯವೆಂದೂ ಹೇಳುವುದುಂಟು ; ಏಕೆಂದರೆ ಮನಸ್ಸು ಇಂದ್ರಿಯಗಳಿಂದ ಬಹಿಃಪ್ರಪಂಚದಲ್ಲಿ ಶೇಖರಿಸಲ್ಪಟ್ಟ ವಿಷಯಗಳನ್ನೆಲ್ಲಾ ತನ್ನೊಳಕ್ಕೆಳೆದುಕೊಂಡು, ಅವುಗಳನ್ನು ವಿಂಗಡಿಸಿ, ಅವುಗಳನ್ನು ಕುರಿತು ಚಿಂತಿಸುವುದು. ಈ ಇಂದ್ರಿಯಾಧಿದೇವತೆಗಳಲ್ಲಿಯೂ ಮನಸ್ಸಿನಲ್ಲಿಯೂ ತಮೋಗುಣ ರಜೋಗುಣಗಳಿಗಿಂತ ಸತ್ವಗುಣವೇ ಪ್ರಧಾನವಾಗಿರುವುದು.

ಈ ಗುಣಗಳು ಬಿಡಿಬಿಡಿಯಾಗೆಂದಿಗೂ ಇರುವುದಿಲ್ಲ ; ಒಂದೊಂದು ವಸ್ತುವಿನಲ್ಲಿ ಒಂದೊಂದು ಗುಣವು ಉಳಿದುವುಗಳಿಗಿಂತ ಹೆಚ್ಚಾಗಿರುತ್ತದೆ; ಈ ಸಂಗತಿಯನ್ನು ವಿದ್ಯಾರ್ಥಿಯು ಜ್ಞಾಪಕದಲ್ಲಿಟ್ಟಿರಬೇಕು. ತಮೋಗುಣವೇ ಪ್ರಧಾನವಾಗಿದ್ದಾಗ ವಸ್ತುವಿಗೆ ತಾಮಸವೆಂದು ಹೆಸರು ಬರುತ್ತದೆ ; ಹೀಗೆಯೇ, ರಜೋಗುಣವೇ ಪ್ರಧಾನವಾಗಿದ್ದಾಗ ರಾಜಸವೆಂದು, ಸತ್ವಗುಣವೇ ಪ್ರಧಾನವಾಗಿದ್ದಾಗ ಸಾತ್ವಿಕವೆಂದು ವಸ್ತುವು ಹೆಸರನ್ನು ಪಡೆಯುವುದು. ಸಾತ್ವಿಕ ರಾಜಸ ತಾಮಸಗಳೆಂಬ ಪ್ರಭೇದಗಳಿಂದ ಸಮಸ್ತ ವಸ್ತುಗಳನ್ನೂ ವಿಂಗಡಿಸಿಕೊಳ್ಳಬಹುದು.

(ಭಗವದ್ಗೀತೆ. ಅ. ೧೪, ೧೭, ೧೮.)

ಬ್ರಹ್ಮನು ಇಷ್ಟಾದಮೇಲೆ ದೇವಗಣಗಳನ್ನು ತನ್ನ ಮನಸ್ಸಿನಲ್ಲಿ ಸೃಷ್ಟಿಸುವನಾದನು. ಈ ದೇವತೆಗಳು ಈಶ್ವರ ಶಾಸನಗಳನ್ನು ನೆರವೇರಿಸುತ್ತಾ ಲೋಕದ ಆಡಳಿತಗಳು ಕ್ರಮವಾಗಿ ನಡೆವಂತೆ ನೋಡಿಕೊಳ್ಳ

ವರು. ಈಶ್ವರನು ಪ್ರಭು, ಏಕಾಧಿಪತಿ ; ಪೃಥ್ವಿಯ ರಾಜನಿಗೆ ಮಂತ್ರಿಗಳೂ ಭೃತ್ಯರೂ ಇರುವಂತೆ, ದೇವತೆಗಳೂ ಆ ಭಗವಂತನ ಮಂತ್ರಿಗಳಾಗಿದ್ದಾರೆ. ಬ್ರಹ್ಮ ಪರಮೇಶ್ವರರ ಸಂಗಡ ದೇವಗಣಗಳನ್ನು ಸಮಭಾವದಿಂದ ಸೇರಿಸುವ ತಪ್ಪನ್ನು ವಿದ್ಯಾರ್ಥಿಗಳು ಮಾಡಕೂಡದು. ಈ ಮರ್ತ್ಯಲೋಕದಲ್ಲಿ ಮಾನವರಾದ ನಾವು ಹೇಗೆ ಭಗವಂತನಲ್ಲಿ ಅಲ್ಪಾಧಿಕಾರಿಗಳಾಗಿದ್ದೇವೆಯೋ ಹಾಗೆಯೇ ದೇವತೆಗಳೂ ಬ್ರಹ್ಮಾಂಡದ ಆಡಳಿತಗಳಲ್ಲಿ ಭಗವಂತನ ಕೈಕೆಳಗೆ ಮಹಾಮಹಾಧಿಕಾರಿಗಳಾಗಿದ್ದಾರೆ.

ದೇವತೆಗಳು ಕೆಲಕೆಲವೇಳೆಗಳಲ್ಲಿ ಸುರರೆಂದೂ ಕರೆಯಲ್ಪಟ್ಟಿರುವರು. ಪ್ರತಿ ಮನುಷ್ಯನಿಗೂ ಅವನವನ ಕರ್ಮಕ್ಕೆ ತಕ್ಕಂತೆ ಫಲಪ್ರಾಪ್ತಿಯಾಗುವುದನ್ನು ನೋಡಿಕೊಳ್ಳುವುದು ಇವರ ಕೆಲಸ. ಐಹಿಕ ವಿಷಯಗಳಲ್ಲಿ ಜಯವನ್ನೋ ಅಪಜಯವನ್ನೋ ಅವನವನ ಕರ್ಮಾನುಸಾರವಾಗಿ ಮಾನವನಿಗೆ ದೇವತೆಗಳು ಕೊಡುವರು. ಮಾನವರು ದೇವತೆಗಳನ್ನು ಸೇವಿಸಿ, ಅವರಿಗೆ ಅನುಕೂಲರಾದಾಗ, ದೇವತೆಗಳು ಮಾನವರಿಗೆ ನಾನಾವಿಧಗಳಲ್ಲಿ ಸಹಾಯಮಾಡುವರು. ಅತ್ಯನಾವೃಷ್ಟಿಗಳು, ಸಾಂಕ್ರಾಮಿಕಾದಿ ರೋಗಗಳು, ಕ್ಷಾಮಡಾಮರಗಳು, ಮತ್ತು ದೇಶದೇಶಗಳಲ್ಲಿ ಆಗಾಗ ಸಂಭವಿಸುವ ಅನಾಹುತಗಳು—ಇವುಗಳೆಲ್ಲಾ ಮಾನವರು ದೇವತಾರಾಧನೆಗಳನ್ನು ಸಂಪೂರ್ಣವಾಗಿ ಬಿಟ್ಟು, ಈಶ್ವರ ಶಾಸನಗಳಿಗೆ ವಿರೋಧಿಗಳಾಗುವುದರಿಂದ ಬಹುಮಟ್ಟಿಗೆ ಪ್ರಾಪ್ತಗಳಾಗುತ್ತವೆ. ದೇವತೆಗಳ ಗುಂಪು ಬಹಳ ದೊಡ್ಡದು, ಇಂದ್ರ, ವಾಯು, ಅಗ್ನಿ, ವರುಣ, ಮತ್ತು ಕುಬೇರ —ಈ ಐದುಮಂದಿ ಅಧಿಪತಿಗಳ ಆಜ್ಞಾನುಸಾರಿಗಳಾಗಿ ದೇವತೆಗಳಿದ್ದಾರೆ. ಇಂದ್ರನ ರಾಜ್ಯ ಆಕಾಶ ತತ್ವ, ವಾಯುವಿನ ರಾಜ್ಯ ವಾಯುತತ್ವ, ಅಗ್ನಿಯ ರಾಜ್ಯ ಅಗ್ನಿತತ್ವ, ವರುಣನ ರಾಜ್ಯ ಅಪ್ತತ್ವ, ಕುಬೇರನ ರಾಜ್ಯ ಪೃಥ್ವೀತತ್ವ. ಪುರಾಣೇತಿಹಾಸಗಳಿಂದ ತಿಳಿಯಬರುವಂತೆ ಈ ಐದುಮಂದಿ ಅಧಿಪತಿಗಳ ಕೈಕೆಳಗೆ ಇರುವ ದೇವತೆಗಳಿಗೆ ಬೇರೆಬೇರೆ ಹೆಸರುಗಳಿರುವುವು. ಕುಬೇರನಭೃತ್ಯರಾದ ಯಕ್ಷರೊಡನೆ ಭೀಮಸೇನನು ಕಾದಿದ ಸಂಗತಿಯನ್ನು ವಿದ್ಯಾರ್ಥಿಗಳು ಉದಾಹರಣೆಗಾಗಿ ಜ್ಞಾಪಕದಲ್ಲಿಟ್ಟುಕೊಳ್ಳಬಹುದು.

ಈ ದೇವತೆಗಳಲ್ಲಿ ರಜೋಗುಣವೇ ಪ್ರಧಾನವಾಗಿರುವುದು. ಈ ದೇವತೆಗಳ ಪ್ರಕೃತಿ ರಜಃಪ್ರಕೃತಿಯೆಂದು ಮನುವು ಹೇಳಿರುವನು. ದೇವತೆಗಳು ಕರ್ಮಸ್ವಭಾವದವರು.

ದೇವರಿಪುಗಳಾದ ಅಸುರರು ತಾಮಸಗುಣವುಳ್ಳವರು ; ಇವರು ಪ್ರಕೃತಿಯ ಜಡಶಕ್ತಿಯ ಮೂರ್ತಿಗಳಾಗಿದಾರೆ.

ಅನಂತರದಲ್ಲಿ ಬ್ರಹ್ಮನು ತನ್ನ ಮನಸ್ಸಿನಲ್ಲಿ ಖನಿಜವರ್ಗವನ್ನೂ ಸಸ್ಯವರ್ಗವನ್ನೂ ತಿರ್ಯಗ್ವರ್ಗವನ್ನೂ ಮಾನುಷವರ್ಗವನ್ನೂ ಕ್ರಮವಾಗಿ ಸೃಷ್ಟಿಸುವನಾದನು ; ಜೀವನಲ್ಲಿರುವ ಶಕ್ತಿಗಳು ಎಲ್ಲಿ ವಿಕಸನವಾಗಬೇಕೋ ಅಂತಹ ಲೋಕಗಳ ಚಿತ್ರಗಳನ್ನು ಚಿತ್ರಿಸಿ ಪೂರಯಿಸಿದನು. ಈಗ ಇಂಗ್ಲೀಷಿನಲ್ಲಿ ಹೇಳುವ Evolution ಎಂಬುದು ಆಗುವಂತಾಯಿತು. ಸಂಸ್ಕೃತದಲ್ಲಿ ಈ ಲೋಕ ವಿಕಸನಕ್ಕೆ, ಲೋಕಗಳು ಬಳೆವ ಈ ತೆರಕ್ಕೆ "ಸಂಸಾರ" ಎಂಬ ಹೆಸರನ್ನು ಕೊಟ್ಟಿರುತ್ತಾರೆ. ಈ "ಸಂಸಾರವು" ಚಕ್ರವಂತೆ ಇರುವುದಾಗಿಯೂ, ಈ ಚಕ್ರವು ಸದಾ ತಿರುಗುತ್ತಿರುವಂತೆಯೂ, ಈ ಚಕ್ರದಲ್ಲಿ ಜೀವಗಳು ಬಂಧಿಸಲ್ಪಟ್ಟಿರುವಂತೆಯೂ ವರ್ಣಿತವಾಗಿದೆ.

ಈ ರೀತಿಯಲ್ಲಿ ಬ್ರಹ್ಮನು ಜಗತ್ಸೃಷ್ಟಿಯ ಕಾರ್ಯದಲ್ಲಿ ತನ್ನ ಭಾಗಕ್ಕೆ ಬಂದುದನ್ನು ಪೂರಯಿಸಿದನು. ಭಾವರೂಪಗಳಾದ ಈ ಸೃಷ್ಟಿಗಳು ದೇಹವುಳ್ಳ ಪ್ರಾಣಿಗಳಾಗುವುದಕ್ಕೂ ಕರ್ಮಸಾಧನಕ್ಕೂ ಪೃಥ್ವಿಯ ಅಂಶದಿಂದ ರಚಿತಗಳಾದ ಆವರಣಗಳು ಇವುಗಳಿಗೆ ಅವಶ್ಯಕಗಳಾಗಿದ್ದುವು. ಈ ಕೆಲಸವು ವಿಷ್ಣುವಿನ ಭಾಗಕ್ಕೆ ಬಂತು. ಸಕಲವನ್ನೂ ವ್ಯಾಪಿಸುವುದು, ಲೋಕಗಳನ್ನು ಪೋಷಿಸುವುದು, ಲೋಕಗಳನ್ನು ರಕ್ಷಿಸುವುದು—ಇವೆಲ್ಲಾ ವಿಷ್ಣುವಿನ ಕೆಲಸ. ವಿಷ್ಣುವು ತನ್ನ ಚೈತನ್ಯವನ್ನು ಈ ರೂಪ್ಗಗಳಿಗೆ ತುಂಬಿದನು. ಬಂದ್ಹಾನೊಂದು ಪುರಾಣವು ಹೇಳುವಂತೆ ಈ ರೂಪಗಳಿಗೆಲ್ಲಾ ತಾನೇ ಪ್ರಾಣನಾಗಿ ಅವುಗಳಿಗೆ ತಿಳಿವನ್ನುಂಟುಮಾಡಿದನು. ಆಗ, ಬ್ರಹ್ಮಾಂಡವೆಲ್ಲಾ ಪ್ರಾಣಮಯವಾಯಿತು, ಜ್ಞಾನಮಯವಾಯಿತು. ಈ ರಂಗಸ್ಥಳಕ್ಕೆ ಮಾನವನು ಬಂದಾಗ, ಇಷ್ಟಾಗಿದ್ದರೂ ಸಾಲದೆ ಹೋಯಿ

ತು. ಈಶ್ವರನ ಮೂರ್ತಿಗಳೆರಡೂ ತಮ್ಮ ಕಳೆಗಳನ್ನಿತ್ತಿದ್ದುವು. ಮೂರನೆಯ ಮೂರ್ತಿಯು ತನ್ನ ಕೆಲಸವನ್ನು ಮಾಡಿರಲಿಲ್ಲ. ರೂಪಗಳನ್ನು ಸಂಹಾರಮಾಡಿ, ಪರಮಾನಂದ ಪದವಿಗೆ ಕರೆದು, ಜೀವಗಳಿಗೆ ಮೋಕ್ಷವನ್ನು ಕೊಡುವ ಶಿವನ ಕೆಲಸವು ಉಳಿದಿತ್ತು. ಮಾನವ ಜೀವವು ತ್ರಿಪುಟಿಯಾಗಿ, ಮಾನವನು ತ್ರಿಮೂರ್ತಿಯಾದ ಈಶ್ವರನ ಸಂಪೂರ್ಣ ಪ್ರತಿಬಿಂಬವಾಗುವುದಕ್ಕೆ ಬೇಕಾಗಿದ್ದ ಭಾಗವು ಮಹಾದೇವನಿಂದಾಗಬೇಕಾಗಿತ್ತು. ಶಿವನು ತನ್ನ ಅಂಶವನ್ನಿತ್ತನು. ಮಾನವನು ತ್ರಿಪುಟಿಯಾದನು. ಪೂರ್ವಕಲ್ಪಗಳಲ್ಲಿ ಖನಿಜವರ್ಗದಲ್ಲಿಯೂ ಸಸ್ಯವರ್ಗದಲ್ಲಿಯೂ ಪಶ್ವಾದಿವರ್ಗದಲ್ಲಿಯೂ ಬಳೆದು ಬಳೆದು ಬಂದ ಮಾನವ ಜೀವದ ದೀರ್ಘ ಸಂಸಾರವು ಪ್ರಾರಂಭವಾಯಿತು. ಜೀವವು ಸಸ್ಯವರ್ಗದಲ್ಲಿಯೂ ಪಶ್ವಾದಿವರ್ಗದಲ್ಲಿಯೂ ಜನ್ಮಜನ್ಮಗಳನ್ನೆತ್ತಿ ಮಾನವ ಜನ್ಮಕ್ಕೆ ಬಂದು, "ಮಾನವನಲ್ಲಿ ಆತ್ಮನು ವ್ಯಕ್ತನಾಗುವಂತೆಯೂ," "ಮರ್ತ್ಯವಾದುದರ ಮೂಲಕವಾಗಿ ಅಮರ್ತ್ಯತೆಯನ್ನು ಸಾಧಿಸುವುದಕ್ಕೂ ಮನಸ್ಸು ಮಾಡಿದ ತೆರದ" ಶೋಭಾಯಮಾನವಾದ ವರ್ಣನೆಯನ್ನು ಪ್ರಾಪ್ತವಯಸ್ಕರಾದ ವಿದ್ಯಾರ್ಥಿಗಳು ಐತರೇಯಾರಣ್ಯಕದಲ್ಲಿ (II. iii-2) ಓದಬಹುದು. ಈಯಂಶವನ್ನು ಸನಾತನ ಧರ್ಮದ ಪ್ರೌಢಪಾಠದ ಪುಸ್ತಕದಲ್ಲಿ ಕೊಟ್ಟಿದೆ.

ಜಗದುದ್ಧಾರಕ್ಕಾಗಿ ವಿಷ್ಣುವು ಮಾಡಿದ ಅವತಾರಗಳನ್ನು ಮರೆಯಕೂಡದು. "ತೃ" ಎಂಬ ಧಾತುವಿನಿಂದಲೂ "ಅವ" ಎಂಬ ಉಪಸರ್ಗದಿಂದಲೂ "ಅವತಾರ" ಎಂಬ ಪದವು ಆಗಿದೆ. ಅವತಾರವೆಂದರೆ ಇಳಿದು ಬರುವುದೆಂದರ್ಥ. ದೇವತೆಗಳು ರೂಪಸ್ವೀಕಾರ ಮಾಡಿ ಕೆಳಗಣ ಲೋಕಕ್ಕೆ ಕಾರ್ಯಾರ್ಥಿಗಳಾಗಿ ಇಳಿದು ಬರುವುದನ್ನು ಅವತಾರವೆನ್ನುತ್ತಾರೆ. ಲೋಕದಲ್ಲಿ ಧರ್ಮವು ಕೆಟ್ಟು ತನ್ನ ಸಹಾಯವು ವಿಶೇಷವಾಗಿ ಬೇಕಾದಾಗ ವಿಷ್ಣುವು ಸಮಯೋಚಿತವಾದ ರೂಪವನ್ನು ಸ್ವೀಕರಿಸಿ, ಕೆಟ್ಟುದನ್ನು ಸರಿಮಾಡುವುದಕ್ಕಾಗಿ ಕೆಳಕ್ಕಿಳಿದು ಬರುವನು.

ಭಗವಂತನು ಅನೇಕ ಸಂದರ್ಭಗಳಲ್ಲಿ ಅವತಾರಮಾಡಿರುವನು. ಅವುಗಳಲ್ಲಿ ಮುಖ್ಯಗಳಾದ ಹತ್ತನ್ನು ದಶಾವತಾರವೆಂದು ಕರೆದಿರುವರು. ಅವುಯಾವುವೆಂದರೆ :—

(೧). ಮತ್ಸ್ಯಾವತಾರ.—ವೈವಸ್ವತಮನುವು ಬಂದಾನೊಂದು ದಿವಸ ನೀರಿಗಾಗಿ ಬಾಯಿಬಾಯಿ ಬಿಡುತ್ತಿದ್ದ ಪುಟ್ಟ ಮೀನೊಂದನ್ನು ಕಂಡು, ಅದನ್ನು ನೀರಿರುವ ತನ್ನ ಅರ್ಘ್ಯಪಾತ್ರೆಯೊಳಕ್ಕೆ ಬಿಟ್ಟನು. ಆ ಪಾತ್ರೆಯು ತುಂಬಾ ಅದು ಬೆಳೆಯಲು, ಒಂದು ದೊಡ್ಡ ಪಾತ್ರೆಯೊಳಕ್ಕೆ ಬಿಟ್ಟನು; ಅದೂ ತುಂಬಿಹೋಗಲು, ಇನ್ನೂ ದೊಡ್ಡದಾದ ಪಾತ್ರೆಯೊಳಕ್ಕೆ ಬಿಡಿಸಿದನು. ಕೊಳ, ಕೆರೆ, ನದಿ, ಸಮುದ್ರ—ಎಲ್ಲೆಲ್ಲಿ ಬಿಟ್ಟರೂ ಅಷ್ಟಷ್ಟು ಬೆಳೆಯುತ್ತಾಹೋಯಿತು. ಈ ವಿಚಿತ್ರವನ್ನು ನೋಡಿ, ಮನುವು ತಾನಾವ ಮಹಾಕಾರ್ಯಕ್ಕಾಗಿ ಹುಟ್ಟಿದನೋ ಆ ಮಹಾಕಾರ್ಯಕ್ಕೀಮೀನೊದಗುವುದೆಂದು ತಿಳಿದನು. ಜೀವರಾಶಿಗಳ ಬೀಜಗಳನ್ನು ಮತ್ತೊಂದು ಲೋಕಕ್ಕನುಕೂಲವಾಗುವುದಕ್ಕಾಗಿ ಮಹಾ ಪ್ರಳಯ ಜಲದಿಂದ ಉಳಿಸಬೇಕಾಗಿ ಬರಲು, ದೊಡ್ಡದಾದ ಹಡಗೊಂದರೊಳಕ್ಕೆ ಋಷಿಗಳೊಡನೆಯೂ ಅವಶ್ಯಕಗಳಾಗಿದ್ದ ಜೀವರಾಶಿಗಳ ಬೀಜಗಳೊಡನೆಯೂ ವೈವಸ್ವತಮನುವು ಪ್ರವೇಶಿಸಲು, ಆ ಮಹಾಮೀನು ಪ್ರತ್ಯಕ್ಷವಾಗಿ, ಮನುವಿನ ಮಹಾಕಾರ್ಯವು ನಡೆಯಬೇಕಾಗಿದ್ದ ಲೋಕಕ್ಕೆ ಆ ಹಡಗನ್ನೆಳೆದುಕೊಂಡು ಬಂದು ಬಿಟ್ಟಿತು ಮತ್ಸ್ಯಾವತಾರದೊಡನೆ ಈ ಲೋಕದಲ್ಲಿ ಚರಪ್ರಾಣಿಗಳ ಸಂಸಾರವು ಪ್ರಾರಂಭವಾಯಿತು.

(೨). ಕೂರ್ಮಾವತಾರ.—ಕೂರ್ಮಾವತಾರದಲ್ಲಿ ವಿಷ್ಣುವು ಆವಶ್ಯಕಗಳಾದ ರೂಪಸಮುದಾಯಗಳನ್ನು ಹುಟ್ಟಿಸುವುದಕ್ಕಾಗಿ ಪ್ರಕೃತಿಯೆಂಬ ಮಹಾಸಾಗರವನ್ನು ಮಥಿಸಬೇಕಾಗಿ ಬರಲು, ಮಂದರವೆಂಬ ಕಡೆಗೋಲಿಗೆ ಆಧಾರವಾಗಿರುವುದಕ್ಕಾಗಿ ಅವತಾರವನ್ನು ಮಾಡಿದನು. ತಿರ್ಯಕ್ ಸ್ರೋತೋವರ್ಗದ ಸಂಸಾರ ಕ್ರಮದಲ್ಲಿ ನೀರಿನಲ್ಲಿಯೂ ನೆಲದಮೇಲೆಯೂ ಜೀವಿಸಬಲ್ಲ ಕೂರ್ಮವು ಎರಡನೆಯ ಅಂತಸ್ತನ್ನು ನಿರ್ದೇಶಿಸುವುದಾಗಿದೆ.

(೩). ವರಾಹಾವತಾರ.—ಪ್ರಳಯ ಜಲದ ಕೆಳಗೆ ಭೂಮಿಯು ಮುಳುಗಿ ಹೋಯಿತು. ವಿಷ್ಣುವು ಅದನ್ನು ಮೇಲಕ್ಕೆತ್ತಿಟ್ಟನು. ಒಣನೆಲದ ಮೇಲೆ ಬಾಳಬೇಕಾಗಿದ್ದ ಸಸ್ತನಿಪ್ರಾಣಿವರ್ಗದ ಸಂಸಾರವನ್ನು ಈ ವರಾಹಾವತಾರವು ನಿರ್ದೇಶಿಸುವುದು.

ಯೂರೋಪಿನವರ ನವೀನ ಶಾಸ್ತ್ರವು ಚರಪ್ರಾಣಿಗಳ ಸಂಸಾರ ಕ್ರಮದ ಈ ಮೂರು ದೊಡ್ಡ ಮೆಟ್ಟಲುಗಳನ್ನೂ ಸ್ವೀಕರಿಸಿರುತ್ತದೆ. ಈ ಒಂದೊಂದಂತಸ್ತಿಗೂ ಒಂದೊಂದವತಾರವಿತ್ತೆಂದು ಸನಾತನ ಧರ್ಮವು ತಿಳಿಸುತ್ತದೆ.

(೪). ನರಸಿಂಹಾವತಾರ.—ದೈತ್ಯರ ಹಿಂಸೆಯಿಂದ ಈ ಲೋಕ ವನ್ನು ಬಿಡಿಸುವುದಕ್ಕಾಗಿ ಈ ಅವತಾರವಾಯಿತು. ದೈತ್ಯ ಕುಲದಲ್ಲಿ ಪ್ರಹ್ಲಾದನೆಂಬ ಬಾಲಕನು ಜನಿಸಿದನು. ದೈತ್ಯನಾದ ತಂದೆಯು, ವಿಷ್ಣು ಭಕ್ತನಾಗಿರಬೇಡವೆಂದು ಎಷ್ಟೆಷ್ಟು ಬೆದರಿಸಿದರೂ ಹಿಂಸಿಸಿದರೂ, ಆ ಬಾ ಲನು ವಿಷ್ಣುಭಕ್ತನಾಗಿಯೇ ಬೆಳೆದನು. ಮಗನನ್ನು ಕೊಲ್ಲಬೇಕೆಂದು ದೈತ್ಯನು ಎಷ್ಟೆಷ್ಟೋ ಸಾರಿ ಪ್ರಯತ್ನಪಟ್ಟರೂ, ವಿಷ್ಣುವು ತನ್ನ ಭಕ್ತನನ್ನು ಕಾಪಾಡುತ್ತಾ ಹೋದನು. ಕೊನೆಗೆ ವಿಷ್ಣುವು ನರಸಿಂಹಾವತಾರವನ್ನು ತಳೆದು, ಒಂದು ಸ್ತಂಭದಿಂದುದ್ಭವಿಸಿ, ದೈತ್ಯನಾದ ತಂದೆಯನ್ನು ಕೊಂದು ತನ್ನ ಭಕ್ತನಾದ ಪ್ರಹ್ಲಾದನನ್ನು ಸಲಹಿದನು.

(೫). ವಾಮನಾವತಾರ.—ಮಾನವಕುಲ ಸಂಸಾರೋದ್ಧಾರಾರ್ಥ ವಾಗಿ ವಿಷ್ಣುವು ವಾಮನರೂಪದಲ್ಲಿ ಅವತರಿಸಿ, ಬಲಿಚಕ್ರವರ್ತಿಯಿಂದ ಮೂರು ಹೆಜ್ಜೆಯಷ್ಟು ಪ್ರದೇಶವನ್ನು ಬೇಡಿದನು. ಒಂದು ಹೆಜ್ಜೆಯೇ ಭೂಲೋಕವನ್ನು ತುಂಬಿತು. ಈ ರೀತಿಯಲ್ಲಿ ಮಾನವಕುಲ ಸಂಸಾ ರೋದ್ಧಾರ ಕ್ಷೇತ್ರವು ವಿಷ್ಣುವಿನಿಂದ ಮಾನವನಿಗೆ ಅನುಕೂಲವಾಯಿತು.

(೬). ಪರಶುರಾಮಾವತಾರ.-ಇದು ಪರಶುವನ್ನು ಧರಿಸಿದ ರಾಮನ ಅವತಾರ. ಪ್ರಜಾರಕ್ಷಕರಾಗಿರುವುದಕ್ಕೆ ಬದಲಾಗಿ ಪ್ರಜಾಹಿಂಸಕರಾಗಿದ್ದ ಕ್ಷತ್ರಿಯ ಕುಲಗಳನ್ನು ಶಿಕ್ಷಿಸುವುದಕ್ಕಾಗಿ ಮಾಡಿದ ಅವತಾರ. ಕ್ಷತ್ರಿ ಯರು ತಮಗಿರುವ ಅಧಿಕಾರವನ್ನು ಪ್ರಜಾರಕ್ಷಣೆಗೆ ಬದಲಾಗಿ, ಸ್ವಪ್ರ ಯೋಜನಾರ್ಥಿಗಳಾಗಿ, ಪ್ರಜಾಹಿಂಸೆಗೆ ಉಪಯೋಗಿಸುವುದರಿಂದ ಮಹಾ ವಿಪತ್ತುಗಳಿಗೊಳಗಾಗುವರು ಎಂಬುದನ್ನು ತೋರಿಸಿಕೊಡುವುದಕ್ಕಾಗಿ ವಿಷ್ಣುವು ಈ ಅವತಾರವನ್ನು ಮಾಡಿದನು.

(೭). ಶ್ರೀರಾಮಾವತಾರ.—ರಾಮನು ದಶರಥಪುತ್ರನು. ವಿಷ್ಣುವು ರಾಮಾವತಾರವನ್ನು ತಳೆದು, ಮೂರು ಮಂದಿ ತಮ್ಮಂದಿರೊಡಗೂಡಿದವ

ನಾಗಿ, ಸರ್ವೋತ್ಕೃಷ್ಟವೆನಿಸಿದ ಕ್ಷಾತ್ರಧರ್ಮ ವಿಂತಿರುವುದು, ರಾಜೋತ್ತಮನ ತೆರವಿಂತು, ಉತ್ತಮೋತ್ತಮ ಮಾನವ ಸಂಸಾರದ ರೀತಿಯು ಹೀಗೆ ಎಂಬುದನ್ನು ಲೋಕಕ್ಕೆ ಪ್ರಕಟಿಸಿದನು. ಪಿತೃವಾಕ್ಯಪರಿಪಾಲಕನಾದ ಸುಪುತ್ರನಾಗಿಯೂ, ಪ್ರೀತಿಪೂರಿತ ಪತಿಯಾಗಿಯೂ, ವಿಶ್ವಾಸಭರಿತ ಭ್ರಾತೃವಾಗಿಯೂ, ವೀರೋತ್ತಮನಾದ ಪರಾಕ್ರಮಿಯಾಗಿಯೂ, ವಿವೇಕದಿಂದೊಡಗೂಡಿದ ಭೂಪತಿಯಾಗಿಯೂ, ಪ್ರಜಾಪರಿಪಾಲನ ನಿರತನಾಗಿಯೂ ರಾಮನು ಕಂಗೊಳಿಸಿ, ಸುಗುಣಗಣ ಪರಿಪೂರ್ಣನಾದ ಮಾನವನೀತೆರದವನು ಎಂಬುದನ್ನು ಲೋಕಕ್ಕೆಲ್ಲಾ ಬೀರಿರುವನು. ವಾಲ್ಮೀಕಿರಾಮಾಯಣದಲ್ಲಿ ಈ ದಿವ್ಯವಾದ ಕಥೆಯು ವರ್ಣಿತವಾಗಿದೆ. ಉತ್ತರದೇಶದಲ್ಲಿ ತುಲಸೀದಾಸನ ರಾಮಾಯಣವು ಪ್ರತಿ ಗೃಹದಲ್ಲಿಯೂ ಸಿಕ್ಕುವುದು.

(೮). ಶ್ರೀಕೃಷ್ಣಾವತಾರ.—ಭಕ್ತವತ್ಸಲತೆಯನ್ನೂ ದಿವ್ಯ ಜ್ಞಾನವನ್ನೂ ಲೋಕಕ್ಕೆ ಪ್ರಕಟಿಸುವುದಕ್ಕಾಗಿ ಈ ಅವತಾರವು ಆಯಿತು. ಪರಮ ಭಕ್ತಿಯಿಂದ ಕೋಟ್ಯನುಕೋಟಿ ಜನರು ಶ್ರೀಕೃಷ್ಣಪರಮಾತ್ಮನನ್ನು ಪೂಜಿಸುತ್ತಲೂ ಭಜಿಸುತ್ತಲೂ ಇರುವರು. ವ್ರಜ ವೃಂದಾವನಗಳ ಚಿತ್ರತರ ಲೀಲಾಜಾಲದ ಬಾಲನನ್ನು, ಪಾರ್ಥಸಖನನ್ನು, ಭಗವದ್ಗೀತೋಪದೇಶಕನನ್ನು, ಪಾಂಡವ ಮಹಾಮಂತ್ರಿಯನ್ನು; ಭೀಷ್ಮನುತ ಮುಕುಂದನನ್ನು ಶ್ರೀಕೃಷ್ಣಮೂರ್ತಿಯನ್ನು ಆರ್ಯಕುಲಸಂಜಾತ ಬಾಲನಾವನು ತಾನೇ ತಿಳಿಯನು? ಶ್ರೀಕೃಷ್ಣನು ಮಹಾಭಾರತದ ನಾಯಕ ರತ್ನ. ಕೃಷ್ಣಲೀಲೆ ಅನೇಕ ಪುರಾಣಗಳಲ್ಲಿ ವರ್ಣಿತವಾಗಿದೆ.

(೯). ಬೌದ್ಧಾವತಾರ.—ವಿಷ್ಣುವು ತತ್ವೋಪದೇಶಾರ್ಥಕ್ಕಾಗಿ ಈ ಅವತಾರವನ್ನು ಮಾಡಿದನು. ದೊರೆತನವನ್ನೂ ರಾಜವೈಭವಗಳನ್ನೂ ನಿಕೃಷ್ಟಮಾಡಿ ತ್ಯಜಿಸಿ, ಅಲೆಯುವ ಭಿಕ್ಷುಕನಾಗಿ, ಸದ್ಧರ್ಮೋಪದೇಶಕ ಗುರುವಾಗಿ, ಬುದ್ಧನು ಮೆರೆದನು. ಶಾಕ್ಯಮುನಿಯೆಂತಲೂ ಗೌತಮಬುದ್ಧನೆಂತಲೂ ಸಿದ್ಧಾರ್ಥನೆಂತಲೂ ಪ್ರಸಿದ್ಧಿಪಡೆದು, ಬುದ್ಧನು ಕೋಟ್ಯನುಕೋಟಿ ಮಾನವರಿಂದ ಸ್ವೀಕೃತವಾಗಿರುವ ಬೌದ್ಧಮತ ಸ್ಥಾಪಕನಾಗಿ ಮೆರೆದನು. ವಿಷ್ಣುವು ಬೌದ್ಧಾವತಾರವನ್ನೆತ್ತಿ, ಆರ್ಯೇತರ ಕುಲದ ಜನಸಮುದಾಯಗಳಿಗೆ ತತ್ವೋಪದೇಶಕನಾದನು.

(೧೦). ಕಲ್ಕ್ಯವತಾರ.—ಕಲಿಯುಗಾಂತ್ಯದಲ್ಲೀಯವತಾರವಾಗುವುದು. ಕಲ್ಕಿಯು ಅವತರಿಸಿದಾಗ ಸತ್ಯಯುಗವು ಭೂಲೋಕದಲ್ಲಿ ಮತ್ತೊಮ್ಮೆ ಬರುವುದು. ನವೀನ ಯುಗಾರಂಭವಾಗುವುದು.

ಮಾನವಕುಲವು ಪ್ರವರ್ಧಮಾನದಶೆಯನ್ನೈದಿ ಗುಣಪರಿಪೂರ್ಣವಾಗುವ ತೆರವು ಈ ಯವತಾರಗಳಿಂದ ಸೂಚಿತವಾಗಿದೆ.

ಶ್ರುತ್ಯಾದಿ ವಚನಗಳು

ಪಶ್ಯಾಮಿ ದೇವಾಂಸ್ತವ ದೇವ ದೇಹೇ
ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।
ಬ್ರಹ್ಮಾಣಮೀಶಂ ಕಮಲಾಸನಸ್ಥಂ
ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥
ರುದ್ರಾದಿತ್ಯಾವಸವೋ ಯೇಚ ಸಾಧ್ಯಾಃ
ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।
ಗಂಧರ್ವಯಕ್ಷಾಸುರಸಿದ್ಧಸಂಘಾಃ
ವೀಕ್ಷನ್ತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥

(ಭಗವದ್ಗೀತೆ. ಅ. ೧೧, ಶ್ಲೋ. ೧೫,೨೨).

"ಓ ದೇವನೇ, ನಿನ್ನ ದೇಹದಲ್ಲಿ ದೇವತೆಗಳು ನನಗೆ ಕಾಣುತ್ತಿದಾರೆ ; ಭೂತ ವಿಶೇಷ ಸರ್ವಸಂಘವೂ ಕಾಣುತ್ತಿದೆ ; ಕಮಲಾಸನಸ್ಥನೂ ಲೋಕೇಶ್ವರನೂ ಆದ ಬ್ರಹ್ಮನೂ ಋಷಿಗಳೂ ದಿವ್ಯೋರಗರೂ ಕಾಣುತ್ತಿರುವರು. ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇದೇವತೆಗಳು, ಅಶ್ವಿನೀದೇವತೆಗಳು, ಮರುತ್ತುಗಳು, ಊಷ್ಮಪರು, ಗಂಧರ್ವರು, ಯಕ್ಷರು, ಸಿದ್ಧರು, ಅಸುರರು—ಎಲ್ಲರೂ ಗುಂಪುಗುಂಪಾಗಿ ವಿಸ್ಮಯದಿಂದ ನಿನ್ನನೀಕ್ಷಿಸುತ್ತಿರುವರು."

ಇನ್ದ್ರಂ ಮಿತ್ರಂ ವರುಣಮಗ್ನಿಮಾಹು ।
ರಥೋದಿವ್ಯಃ ಸಸುಪರ್ಣೋ ಗರುತ್ಮಾನ್ ॥
ಏಕಂ ಸದ್ವಿಪ್ರಾಬಹುಧಾ ವದನ್ತಿ
ಅಗ್ನಿಂ ಯಮಂ ಮಾತರಿಶ್ವಾನಮಾಹುಃ ॥

(ಋಗ್ವೇದ. I. clxiv. 46)

"ಇಂದ್ರನೆಂದೂ ಮಿತ್ರನೆಂದೂ ವರುಣನೆಂದೂ ಅಗ್ನಿಯೆಂದೂ ಕರೆವರು ; ಸುಪರ್ಣನಾದ ದೇದೀಪ್ಯಮಾನನಾದ ಗರುತ್ಮಂತನೂ ಅವನೇ. ಏಕನಾದ ಅವನನ್ನು ವಿಪ್ರರು ಬಹುವಾಗಿ ಕರೆವರು ; ಅಗ್ನಿಯೆಂದೂ ಯಮನೆಂದೂ ಮಾತರಿಶ್ವನೆಂದೂ ಕರೆವರು."

ಆತ್ಮೈವ ದೇವತಾಃ ಸರ್ವಾಃ ಸರ್ವಮಾತ್ಮನ್ಯವಸ್ಥಿತಮ್ ||
(ಮನುಸ್ಮೃತಿ. ಅ. ೧೨, ಶ್ಲೋಕ. ೧೧೯).

"ಸರ್ವ ದೇವತೆಗಳೂ ಆತ್ಮನೇ ; ಸರ್ವವೂ ಆತ್ಮನಲ್ಲಿಯೇ ನಿಂತಿರುವುದು."

ಏತಮೇಕೇ ವದನ್ತ್ಯಗ್ನಿಂ ಮನುಮನ್ಯೇ ಪ್ರಜಾಪತಿಮ್ |
ಇನ್ದ್ರಮೇಕೇಽಪರೇ ಪ್ರಾಣಮಪರೇ ಬ್ರಹ್ಮ ಶಾಶ್ವತಮ್ ||
(ಮನುಸ್ಮೃತಿ. ಅ. ೧೨, ಶ್ಲೋ. ೧೨೩).

"ಕೆಲವರು ಆತನನ್ನು ಅಗ್ನಿಯೆಂದು, ಕೆಲವರು ಮನುವೆಂದು, ಕೆಲವರು ಪ್ರಜಾಪತಿಯೆಂದು, ಕೆಲವರು ಇಂದ್ರನೆಂದು, ಕೆಲವರು ಪ್ರಾಣನೆಂದು, ಕೆಲವರು ಶಾಶ್ವಾತ ಬ್ರಹ್ಮನೆಂದು ಕರೆಯುತ್ತಾರೆ."

ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಙ್ಗಾಃ
ಸಹಸ್ರಶಃ ಪ್ರಭವನ್ತೇ ಸರೂಪಾಃ |
ತಥಾಕ್ಷರಾದ್ವಿವಿಧಾಃ ಸೋಮ್ಯ ಭಾವಾಃ
ಪ್ರಜಾಯನ್ತೇ ತತ್ರ ಚೈವಾಪಿಯನ್ತಿ ||
ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇನ್ದ್ರಿಯಾಣಿ ಚ |
ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ||
ತಸ್ಮಾಚ್ಚ ದೇವಾಬಹುಧಾ ಸಂಪ್ರಸೂತಾಃ
ಸಾಧ್ಯಾಮನುಷ್ಯಾಃ ಪಶವೋ ವಯಾಂಸಿ ||
(ಮುಂಡಕೋಪನಿಷತ್ತು. ಖಂ. ೩, ಬ್ರಾ. ೧, ಖು. ೧, ೩, ೧೦,)

"ಸುದೀಪ್ತನಾಗಿರುವ ಪಾವಕನಿಂದ ಸ್ಫುಲಿಂಗಗಳು ಸಹಸ್ರ ಸಹಸ್ರಗಳಾಗಿ ಸರೂಪದಲ್ಲಿಯೇ ಹಾರಿಹಾರಿ ಬರುವಂತೆ, ಎಲೈಪ್ರಿಯನೇ, ಅಕ್ಷರನಾದ ಪರಮಾತ್ಮನಿಂದ ಬಗೆಬಗೆಯ ಪ್ರಾಣಿವರ್ಗಗಳು ಉದ್ಭವಿಸಿ ಆ ಪರಮಾತ್ಮನಲ್ಲಿಯೇ ಲಯವನ್ನು ಹೊಂದುವುವು.

"ಆತನಿಂದ ಪ್ರಾಣವೂ, ಮನಸ್ಸೂ, ಸರ್ವೇಂದ್ರಿಯಗಳೂ, ಆಕಾಶ, ವಾಯು, ಅಗ್ನಿ, ಅಪ್ಪು, ಸರ್ವಕ್ಕೂ ಆಧಾರವಾಗಿರುವ ಪೃಥ್ವಿ—ಸಕಲವೂ ಉದ್ಭವಿಸಿವೆ.

"ಆತನಿಂದಲೇ ಬಹುವಿಧವಾಗಿ ದೇವತೆಗಳೂ ಸಾಧ್ಯರೂ ಮಾನವರೂ ಪಶುಗಳೂ ಪಕ್ಷಿಗಳೂ ಉದ್ಭವಿಸಿವೆ."

ಸತ್ತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭಏವ ಚ |
ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ||
ಊರ್ಧ್ವಂ ಗಚ್ಛನ್ತಿ ಸತ್ತ್ವಸ್ಥಾ ಮಧ್ಯೇ ತಿಷ್ಠನ್ತಿ ರಾಜಸಾಃ |
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ||
(ಭಗವದ್ಗೀತೆ. ಅ. ೧೪, ಶ್ಲೋ. ೧೭, ೧೮.)

"ಸತ್ತ್ವದಿಂದ ಜ್ಞಾನವು ಹುಟ್ಟುವುದು ; ರಜಸ್ಸಿನಿಂದ ಲೋಭವು ಹುಟ್ಟುವುದು ; ತಮಸ್ಸಿನಿಂದ ಪ್ರಮಾದವೂ ಮೋಹವೂ ಅಜ್ಞಾನವೂ ಹುಟ್ಟುವುವು.

"ಸತ್ತ್ವಸ್ಥರಾದವರು ಊರ್ಧ್ವಗಾಮಿಗಳಾಗುವರು; ರಾಜಸಪ್ರಕೃತಿಯವರು ಮಧ್ಯದಲ್ಲಿರುವರು ; ತಾಮಸ ಪ್ರಕೃತಿಯವರು ನೀಚ ಗುಣಗಳಿಂದ ಮುಚ್ಚಲ್ಪಟ್ಟವರಾಗಿ ಅಧೋಗತಿಗೆ ಬೀಳುವರು "

ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ |
ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ||
ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ |
ರಜಸ್ಸತ್ತ್ವಂ ತಮಶ್ಚೈವ ತಮಸ್ಸತ್ತ್ವಂ ರಜಸ್ತಥಾ ||
ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶಉಪಜಾಯತೇ |
ಜ್ಞಾನಂ ಯದಾ ತದಾ ವಿದ್ಯಾತ್ ವಿವೃದ್ಧಂ ಸತ್ತ್ವಮಿತ್ಯುತ ||
ಲೋಭಃ ಪ್ರವೃತ್ತಿರಾರಮ್ಭಃ ಕರ್ಮಣಾಮಶಮಃ ಸ್ಪೃಹಾ |
ರಜಸ್ಯೇತಾನಿ ಜಾಯನ್ತೇ ವಿವೃದ್ಧೇ ಭರತರ್ಷಭ ||
ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹಏವ ಚ |
ತಮಸ್ಯೇತಾನಿ ಜಾಯನ್ತೇ ವಿವೃದ್ಧೇ ಕುರುನನ್ದನ ||
(ಭಗವದ್ಗೀತೆ. ಅ. ೧೪, ಶ್ಲೋ. ೯—೧೩).

"ಸತ್ವವು ಸುಖದಲ್ಲಿ, ರಜಸ್ಸು ಕರ್ಮದಲ್ಲಿ ಆಸಕ್ತಿಯನ್ನು ಹುಟ್ಟಿಸುವುದು ; ಅಯ್ಯಾ ಭಾರತ, ತಮಸ್ಸು ಜ್ಞಾನವನ್ನಾಚ್ಛಾದಿಸಿರುವುದಲ್ಲದೆ ನಿಜವಾಗಿ ಪ್ರಮಾದಕ್ಕೆ ಸಂಗವನ್ನುಂಟುಮಾಡುವುದು.

"ಓ ಭಾರತ, ಒಂದೊಂದು ವೇಳೆ ರಜಸ್ಸನ್ನೂ ತಮಸ್ಸನ್ನೂ ಅಡಗಿಸಿ ಸತ್ವವೇ ಏರುವುದು ; ಒಂದೊಂದು ವೇಳೆ ರಜಸ್ಸನ್ನೂ ಸತ್ವವನ್ನೂ ಅಡಗಿಸಿ ತಮಸ್ಸೇ ಹೆಚ್ಚುವುದು ; ಒಂದೊಂದು ವೇಳೆ ತಮಸ್ಸಿಗಿಂತಲೂ ಸತ್ವಕ್ಕಿಂತಲೂ ರಜಸ್ಸೇ ಮೇಲಾಗಿರುವುದು.

"ದೇಹದ ಸರ್ವದ್ವಾರದಿಂದಲೂ ಜ್ಞಾನವು ಪ್ರವಹಿಸುವುದಾದರೆ, ಸತ್ವವು ವೃದ್ಧಿಗೊಳ್ಳುತ್ತಿರುವುದೆಂದು ತಿಳಿಯುವನಾಗು.

"ಲೋಭ, ಉಕ್ಕಿಯುಕ್ಕಿ ಬರುವ ಶಕ್ತಿ, ಕರ್ಮಾರಂಭ, ಅಶಮ, ಸ್ಪೃಹೆ—ಇವೆಲ್ಲವೂ ರಜೋವೃದ್ಧಿಯಿಂದ ಹುಟ್ಟುವುವೆಂದು, ಭಾರತಶ್ರೇಷ್ಠನೇ, ತಿಳಿ.

"ಅಪ್ರಕಾಶ, ಅಪ್ರವೃತ್ತಿ, ಪ್ರಮಾದ, ಮೋಹ—ಇವೆಲ್ಲವೂ, ಕುರುನಂದನನೇ, ತಮೋವೃದ್ಧಿಯಿಂದ ಜನಿಸುವುವು."

ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ |
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ‖
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ |
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ‖

(ಭಗವದ್ಗೀತೆ. ಅ. ೪, ಶ್ಲೋ. ೭, ೮).

"ಯಾವಾಗ ಯಾವಾಗ ಧರ್ಮವು ಖಿಲವಾಗುವುದೋ, ಯಾವಾಗ ಯಾವಾಗ ಅಧರ್ಮವು ಪ್ರಬಲವಾಗುವುದೋ, ಆಗಾಗ ನಾನೇ ಉದ್ಭವಿಸುವೆನು.

"ಸಾಧುಗಳ ರಕ್ಷಣೆಗೂ ದುಷ್ಟರ ವಿನಾಶಕ್ಕೂ ಧರ್ಮಸಂಸ್ಥಾಪನೆಗೂ ಯುಗಯುಗಕ್ಕೂ ನಾನವತರಿಸುವೆನು."

---

ಇದು ಸನಾತನ ಧರ್ಮದೀಪಿಕೆಯಲ್ಲಿ ತತ್ವಪ್ರಕಾಶಿಕೆಯೆಂಬ ಪ್ರಥಮಭಾಗದಲ್ಲಿ ಜಗತ್ಸೃಷ್ಟಿಯೆಂಬ ಹೆಸರಿನ ದ್ವಿತೀಯಾಧ್ಯಾಯ.

# ಪ್ರಥಮ ಭಾಗ.

## ತೃತೀಯಾಧ್ಯಾಯ.

### ಪುನರ್ಜನ್ಮವಿಚಾರ.



ಹಿಂದಿನ ಅಧ್ಯಾಯದಲ್ಲಿ ಸೂಚಿಸಿದ ಸಂಸಾರವು, ಶರೀರದಿಂದ ಶರೀರಕ್ಕೆ ಜೀವನು ತೆರಳುವನಾದುದರಿಂದ, ನಡೆಯುತ್ತಿರುವುದು ; ಜೀವಾತ್ಮನ ಶಕ್ತಿಗಳು ವಿಕಸಿತವಾದಹಾಗೆಲ್ಲಾ ಶರೀರಗಳು ಶೋಭಾಯಮಾನವಾಗುತ್ತಾ ಹೋಗುವುವು. ಇದನ್ನು ಪುನರ್ಜನ್ಮ, ಪುನರವತಾರ, ಜೀವಾತ್ಮನ ಪರ್ಯಟನ ಎನ್ನುತ್ತಾರೆ. ಪುನರ್ಜನ್ಮವೆಂದರೆ ಮತ್ತೊಮ್ಮೆ ಹುಟ್ಟುವುದು ; ಎಂದರೆ ಮತ್ತೊಮ್ಮೆ ಮತ್ತೊಂದು ಶರೀರದೊಡನೆ ಸೇರುವುದು. ಅವತಾರವೆಂದರೆ ಊರ್ಧ್ವ ಲೋಕವೊಂದರಿಂದ ಅಧೋಲೋಕಕ್ಕೆ ಜೀವಾತ್ಮನು ಶರೀರ ರಚನೆಯನ್ನು ಮಾಡಿಕೊಂಡು ಬರುವುದು. ಪುನರವತಾರವೆಂದರೆ ಮತ್ತೊಮ್ಮೆ ಶರೀರ ಧಾರಣೆಯನ್ನು ಮಾಡುವುದು. ಜೀವಾತ್ಮನ ಪರ್ಯಟನವೆಂದರೆ ಜೀವನು ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ಹೋಗುವುದು. ಈ ಮೂರು ಮಾತುಗಳೂ ಒಂದೇ ಭಾವವನ್ನು ಸೂಚಿಸುವುವು. ಈ ಪುನರ್ಜನ್ಮದ ತೆರವನ್ನು ವಿಚಾರ ಮಾಡೋಣ.

ಜೀವನು ಬ್ರಹ್ಮನ ಅಂಶವೆಂಬುದನ್ನು ನಾವರಿತಿರುತ್ತೇವೆ. "ಜೀವನು ನನ್ನ ಅಂಶ" ಎಂದು ಶ್ರೀಕೃಷ್ಣನು ಹೇಳಿರುವನು. ಜೀವನು ಬ್ರಹ್ಮನ ಶಕ್ತಿಗಳನ್ನೊಳಕೊಂಡಿರುವನು ; ಜೀವನು ಬ್ರಹ್ಮ. "ತತ್ವಮಸಿ" ಎಂದು ಶ್ರುತಿಯುಸುರುವುದು. ಆದರೂ ಕಾಲದೇಶಗಳ ಭೇದವುಂಟು. ಗಿಡಕ್ಕೂ ಬೀಜಕ್ಕೂ ಭೇದವಿರುವಂತೆ ಇಲ್ಲಿಯೂ ಭೇದ

ವಿದೆ. ಮರವು ಬೀಜಕ್ಕೆ ತನ್ನ ಸಹಜಗುಣವನ್ನೇ ಇತ್ತು, ಅದನ್ನು ಹೊರಪಡಿಸುವುದು ; ನೆಲದಮೇಲೆ ಬೀಜವನ್ನು ಕೆಡವುವುದು. ಬೀಜವು ತನ್ನಲ್ಲಡಗಿರುವ ಶಕ್ತಿಗಳನ್ನು ಹೊರಪಡಿಸುತ್ತಾ, ತನ್ನ ಜನಕನಂತೆ ತಾನೂ ಮರವಾಗುವವರೆಗೂ ನಿದಾನವಾಗಿ ಬೆಳೆಯುವುದು ; ಈ ಬೀಜವು ಮತ್ತೇನೂ ಆಗಲೇ ಆರದು ; ಏಕೆಂದರೆ ಇದರ ಸ್ವಭಾವವೂ ಇದರ ಜನಕನ ಸ್ವಭಾವವೂ ಒಂದೆ. ಜೀವಾತ್ಮನ ವಿಷಯವೂ ಇಂತೆಯೇ ; ಬೀಜದಂತೆಯೇ ಜೀವನೂ ಈಶ್ವರನಿಂದ ಪ್ರಾಕೃತೋಪಾಧಿಯೊಳಕ್ಕೆ ಕೆಡವಲ್ಪಡುವನು. ತನ್ನಲ್ಲಿ ಅಡಗಿರುವ ಶಕ್ತಿಗಳನ್ನು ಹೊರಪಡಿಸುತ್ತಾ, ತಾನೂ ಈಶ್ವರನಾಗುವವರೆಗೂ ನಿದಾನವಾಗಿ ಬಳೆವನು. ಜೀವನು ಮತ್ತೇನೂ ಆಗಲೇ ಆರನು ; ಏಕೆಂದರೆ ಇವನ ಸ್ವರೂಪವೂ ಇವನ ಜನಕನಾದ ಈಶ್ವರನ ಸ್ವರೂಪವೂ ಒಂದೇ ಆಗಿರುತ್ತದೆ.

ಈಶ್ವರನು ಜ್ಞನೆಂತಲೂ ಈಶನೆಂತಲೂ, ಜೀವನಾದರೋ ಅಜ್ಞನೆಂತಲೂ ಅನೀಶನೆಂತಲೂ ಹೇಳಿದೆ. (ಶ್ವೇತಾಶ್ವತರೋಪನಿಷತ್ತು. I. 9.) ಆದರೆ ಜೀವನು ಜ್ಞಾನಿಯಾಗಿಯೂ ಈಶನಾಗಿಯೂ ಬಳೆವನು ; ಈ ಬಳೆವಿಗೆ "ಸಂಸಾರ" ವೆಂಬ ಹೆಸರನ್ನು ಕೊಟ್ಟಿದೆ.

ಜೀವನು ತನ್ನ ದೀರ್ಘಯಾತ್ರೆಯನ್ನು ಪಂಚಭೂತಾತ್ಮಕವಾದೀ ಲೋಕದಲ್ಲಿ ಖನಿಜವರ್ಗದಲ್ಲಿ ಪ್ರಾರಂಭಿಸುವನು. ಈ ಪ್ರಸ್ಥಾನದಲ್ಲಿ ಜೀವನಿಗೆ ಬಹಿಃಪ್ರಪಂಚದ ಅರಿವಿಲ್ಲ. ಬಹಿಃಪ್ರಪಂಚವುಂಟೆಂಬ ವಿಷಯವು ಅವನ ಅರಿವಿಗೆ ಬರುವುದಕ್ಕೆ ಕ್ರೂರವಾದ ಕಂಪನವೂ ಹೊರಗಿನಿಂದ ಹೊಡೆಯುವ ಪೆಟ್ಟುಗಳೂ ಅವಶ್ಯಕಗಳಾಗಿವೆ ; ಭೂಕಂಪಗಳೂ ಜ್ವಾಲಾಮುಖಿಗಳೂ ನೆಲಜಾರುಗಳೂ (land slips), ಪ್ರಕೋಪಪೂರಿತಗಳಾದ ತರಂಗಾಘಾತ ಮುಂತಾದುವುಗಳು, ಜೀವನಾದ ತಾನು ಒಂಟಿಗನಾಗಿಲ್ಲ, ಬಹಿಃಪ್ರಪಂಚದಲ್ಲಿ ತಾನಲ್ಲದ ಇತರ ವಸ್ತುಗಳುಂಟು ಎಂಬ ಅಂಶವು ಆ ಜೀವಾತ್ಮನ ಅರಿವಿನಲ್ಲಿ ಹುಟ್ಟುವಂತೆ ಆಗುವುದಕ್ಕೆ ಅವಶ್ಯಕಗಳಾಗಿವೆ. ಪೃಥ್ವಿಯ ಚರಿತ್ರೆಯ ಬಹು ಬಹು ಪುರಾತನಕಾಲದ ಭಾಗಗಳನ್ನು ವಿದ್ಯಾರ್ಥಿಯು ಪಠನ ಮಾಡಿದಲ್ಲಿ, ಆಗ ಸಂಭವಿಸುತ್ತಿದ್ದ ಘೋರತರ ಕ್ಷೋಭನ

ಗಳ ಸಂಖ್ಯೆಯು ಅವನ ಮನಸ್ಸಿಗೆ ವಿಸ್ಮಯವನ್ನುಂಟುಮಾಡುವುದು. ಜೀವಾತ್ಮನ ಅರಿವನ್ನು ಬೆಳಸುವುದಕ್ಕೆ ಇವೆಲ್ಲಾ ಅವಶ್ಯಕಗಳಾಗಿದ್ದುವು. ಬಹು ಬಹು ಕಾಲವು ಕಳೆದ ಮೇಲೆ ಜೀವಗಳ ಅರಿವು ಸ್ವಲ್ಪ ಪ್ರಕಾಶವಾಗಲು, ಜೀವಗಳು ಮೃದುಪದಾರ್ಥಗಳೊಳಗೆ ನಿಲ್ಲುವುದಕ್ಕೆ ಅರ್ಹಗಳಾದುವು. ಪ್ರವರ್ಧಮಾನಕ್ಕೆ ಬಂದ ಜೀವಗಳು ಸಸ್ಯವರ್ಗವನ್ನು ಹೊಕ್ಕುವು; ಈಶ್ವರನಿಂದ ಹೊಸದಾಗಿ ಹೊರಟ ಜೀವಗಳು ಖನಿಜವರ್ಗದಲ್ಲಿ ಬಂದು ನಿಂತುವು.

ಸಸ್ಯವರ್ಗದಲ್ಲಿ ಬಂದು ನೆಲೆಗೊಂಡ ಜೀವಗಳಿಗೆ ಬಹಿಃಪ್ರಪಂಚದ ಅರಿವು ಸ್ವಲ್ಪ ಹೆಚ್ಚಾಗಿತ್ತು; ಶೀತಾಪಹಾರಿಯಾದ ಸೂರ್ಯನ, ಮಂದಮಾರುತನ, ಪ್ರಾಣವನ್ನೀವ ಮಳೆಯ ಪ್ರಭಾವಗಳನ್ನು ಅರಿಯಬಲ್ಲವಾಗಿದ್ದುವು. ಬೆಳೆಬೆಳೆದು ಅರಿವು ಹೆಚ್ಚಲು, ಅನೇಕ ವರ್ಷಗಳ್ಳಿ ಬದುಕಿರುವ ಪೊದೆಗಳಲ್ಲಿಯೂ ವೃಕ್ಷಗಳಲ್ಲಿಯೂ ಸೇರುವಂತಾಯಿತು. ಈ ದೊಡ್ಡ ಮರಗಳ ರೂಪದಲ್ಲಿ ಸಂಸಾರ ನಡೆದಾಗ, ಅಂತರ್ಭೂತಗಳಾದ ಶಕ್ತಿಗಳೂ ಬೆಳೆದು ಬೆಳೆದು, ಚರಪ್ರಾಣಿವರ್ಗದಲ್ಲಿ ಸಂಸಾರವು ನಡೆವಂತಾಯಿತು. ಬೆಳೆದ ಜೀವಗಳಿಗೆ ಪಶ್ವಾದಿವರ್ಗದ ಶರೀರಗಳು ವಾಹನವಾದುವು. ಇಷ್ಟು ಬೆಳೆಯದಿದ್ದ ಜೀವಗಳು ಸಸ್ಯವರ್ಗಕ್ಕೆ ಬಂದುವು; ಇನ್ನೂ ಕಡಮೆಯಾಗಿ ಬೆಳೆದಿದ್ದುವುಗಳು ಖನಿಜವರ್ಗದ ರೂಪಗಳಲ್ಲಿಯೇ ನಿಂತುವು.

ಪಶ್ವಾದಿವರ್ಗದ ಶರೀರಗಳಿಗೆ ಜೀವಗಳು ತೆರಳಿದಮೇಲೆ, ಆ ಜೀವಗಳ ಬೆಳವಳಿಗೆಯು ವೇಗವಾಗಿ ನಡೆಯಿತು. ಆಹಾರಾರ್ಥವಾಗಿ ಬೇಟೆಯಾಡುವುದರಿಂದಲೂ ಪರಸ್ಪರ ಕದನ ಮಾಡುವುದರಿಂದಲೂ ಸ್ಪರ್ಧೆಯಿಂದ ಬಂದನ್ನೊಂದು ಹಿಂದಕ್ಕೆ ಹಾಕುವುದರಿಂದಲೂ, ಇಂದ್ರಿಯಗಳೂ ಸರಳಗಳಾದ ಮನೋವ್ಯಾಪಾರಗಳೂ ಅಭ್ಯಾಸದ ಬಲದಿಂದ ಬಲಿತುವು. ಹೀಗೆ ಜೀವಗಳ ಶಕ್ತಿಗಳು ಬಲಿತಮೇಲೆ ತಿರ್ಯಗ್ಜಂತುಗಳ ಶರೀರಗಳು ತಕ್ಕವುಗಳಾಗದೆ ಹೋದುವು. ಜೀವಾತ್ಮನ ಕಾಯಶಕ್ತಿಯ ಮತ್ತು ಮನೋವ್ಯಾಪಾರಗಳ ವಿಕಸನಕ್ಕೆ ಮಾನವರೂಪಗಳು ಅವಶ್ಯಕಗಳಾದುವು.

"ಜೀವನಿಗೆ ಅನುಕೂಲಗಳಾಗುವಂತೆ ಕೋಶರಚನೆಯೂ ಶರೀರರಚನೆಯೂ ಏತರಿಂದಾಗುವುವು? ಎಂದು ವಿದ್ಯಾರ್ಥಿಯು ಪ್ರಶ್ನೆಮಾಡ

ಬಹುದು. "ಜೀವಾತ್ಮನ ಸ್ವಪ್ರಯತ್ನದಿಂದಲೇ" ಎಂಬುದುತ್ತರ. ತನ್ನನ್ನು ಆವರಿಸಿರುವ ಉಪಾಧಿಯೆಂಬ ಗೋಡೆಯನ್ನು ಭೇದಿಸಿಕೊಂಡು ಹೊರಗೆ ನೋಡಲು ಜೀವನು ಇಚ್ಛಯಿಸುವನು. ಜೀವನು ನೋಡುವುದಕ್ಕೆ ಯತ್ನಿಸುವನು, ಮತ್ತು ಹೊರಹೊರಕ್ಕೋಡೋಡಿ ಬರಬೇಕೆಂದು ಯತ್ನಿಸುತ್ತಿರುವ ಆ ಜೀವಾತ್ಮನ ಶಕ್ತಿಯು ಆ ಗೋಡೆಯನ್ನು ತಾಡಿಸುವುದು. ನಿದಾನವಾಗಿ, ಬಹುಬಹು ನಿದಾನವಾಗಿ ಗೋಡೆಯೊಳಗೆ ಕಂಡಿಯೊಂದಾಗಿ, ಕಣ್ಣೊಂದುದ್ಭವಿಸುವುದು. ಇದೇರೀತಿಯಲ್ಲಿ ಇಂದ್ರಿಯಗಳೂ ಸಕಲಾವಯವಗಳೂ ಕ್ರಮಕ್ರಮವಾಗಿ ಆಗುವುವು. ಇಂದ್ರಿಯಗಳು ಒಳಗಡೆಯಿಂದ ಹೊರಗಡೆಗೆ ಮಾಡಿದ ಕಂಡಿಗಳೆಂದು ನಾವು ತಿಳಿಯಬೇಕಾಗಿದೆ. ಬಾಹ್ಯ ಪ್ರಾಪಂಚಿಕ ಜ್ಞಾನಾರ್ಜನೆಗೆ ಉಪಯೋಗವಾಗುವಂತೆ ಇಂದ್ರಿಯಗಳನ್ನು ತನ್ನ ಶಕ್ತಿಯಿಂದ ಜೀವನು ತನಗೆ ಅನುಕೂಲವಾಗುವ ತೆರದಲ್ಲಿ ಸರಿಮಾಡಿಕೊಳ್ಳುವನು ; ಜೀವನು ರಚಿಸಿಕೊಳ್ಳಬೇಕೆಂದು ಪ್ರಯತ್ನಪಡುತ್ತಿರುವ ಅವಯವಕ್ಕೆ ಅನುಕೂಲವಾಗುವ ಸಾಮಗ್ರಿಗಳನ್ನು ಜೀವನಿಗೆ ದೇವತೆಗಳು ಒದಗಿಸಿಕೊಡುತ್ತಾ ಸಹಾಯ ಮಾಡುವರಾಗುತ್ತಾರೆ. ಚಕ್ಷುರಿಂದ್ರಿಯವನ್ನು ಮಾಡಿಕೊಂಡು ನೋಡಬೇಕೆಂದು ಜೀವನು ಪ್ರಯತ್ನಪಡುತ್ತಿರುವಾಗ, ಅಗ್ನಿಯು ತನ್ನ ತೇಜೋಮಯ ಸಾಮಗ್ರಿಯನ್ನು ತಕ್ಕಷ್ಟು ಕೊಡುವನು ; ಜ್ಯೋತಿಷ್ಕಿರಣಗಳು ಸಂಪರ್ಕವಾದಾಗೆಲ್ಲಾ ಈ ಪದಾರ್ಥವು ತಕ್ಕಷ್ಟು ವೇಗವಾಗಿ ಪರಿಸ್ಫುರಿಸುವುದು (vibrates). ರುಚಿನೋಡಬೇಕೆಂದು ಅಪೇಕ್ಷಿಸಿದಾಗ, ವರುಣನು ತನ್ನ ಅಪ್ತತ್ವದ ಪದಾರ್ಥದಲ್ಲಿ ಕೊಂಚವನ್ನು ಕೊಡುವನು. ಇದರಿಂದ ರುಚಿನೋಡುವುದು ಸಾಧ್ಯವಾಗುತ್ತದೆ. ಸಕಲೇಂದ್ರಿಯ ವ್ಯಾಪಾರಗಳಲ್ಲಿಯೂ ಹೀಗೆಯೇ ಎಂದು ಭಾವಿಸಿಕೊಳ್ಳಿರಿ. ಈ ರೀತಿಯಲ್ಲಿ ಜೀವನು ತನ್ನ ಶರೀರಗಳನ್ನು ರಚಿಸಿಕೊಳ್ಳುತ್ತಾ ಹೋಗುವನು. ತನಗೆ ಸಾಧ್ಯವಾಗುವ ಮಟ್ಟಿಗೂ ಸರಿಯಾಗಿ ರಚಿಸಿಕೊಂಡಿದ್ದ ಶರೀರವು ಕಾಲಕ್ರಮದಲ್ಲಿ ಬೆಳೆಯುವ ತನ್ನ ವ್ಯಾಪಾರಗಳಿಗೆ ತಕ್ಕುದಾಗಿಲ್ಲದೆ ಹೋದಾಗ, ಆ ಶರೀರವನ್ನು ಬಿಸುಟು, ಅನುಕೂಲವಾದ ಮತ್ತೊಂದು ಶರೀರವನ್ನು ರಚಿಸಿಕೊಳ್ಳುವನು. ಹೀಗೆ ಮಾಡುತ್ತಾ ಹೋದಹಾಗೆಲ್ಲಾ ಜೀವಾತ್ಮನ ಶಕ್ತಿಗಳು ಜಾಗ್ರತ

ಜಾಗ್ರತೆಯಲ್ಲಿ ಬಳೆಯುತ್ತಾ ಹೋಗುವುವು ; ಏಕೆಂದರೆ ಜೀವಾತ್ಮನ ಶಕ್ತಿಗಳು ಆತಂಕ ಕಡಮೆಯಾಗಿ ಕೆಲಸ ಮಾಡಿದಹಾಗೆಲ್ಲಾ, ಪೂರ್ವತರ ಪ್ರಸ್ಥಾನಗಳಲ್ಲಿ ಫಲಪ್ರಾಪ್ತಿ ಎಷ್ಟು ಕಾಲದಲ್ಲಿ ಆಗುತ್ತಿತ್ತೋ ಅದಕ್ಕಿಂತಲೂ ಕಡಮೆಯಾದ ಕಾಲದಲ್ಲಿಯೇ ಜೀವಾತ್ಮನು ತನ್ನಭೀಷ್ಟವನ್ನು ಪಡೆಯಲು ಸಮರ್ಥನಾಗುತ್ತಾ ಹೋಗುವನು.

ಜೀವಾತ್ಮನ ಬಳೆವು ಸಾಮಾನ್ಯವಾಗಿ ಈ ತೆರದಲ್ಲಿ ನಡೆಯುವುದು. ವಿದ್ಯಾರ್ಥಿಯು ಸಾರಾಂಶವನ್ನು ಸರಳವಾಗಿ ಗ್ರಹಿಸಲಿಯೆಂದು ಜನ್ಮಪರಂಪರೆಯು ವಿಚ್ಛಿತ್ತಿಯಿಲ್ಲದೆ ಸರಳವಾಗಿ ಮುಂದುಮುಂದಕ್ಕೆ ತೆರಳುವಂತೆ ವರ್ಣಿಸಿದೇವೆ. ಆದರೆ ಪ್ರಪಂಚದಲ್ಲಿ ಸಂಸಾರ ಪ್ರವಾಹವು ಸಾಮಾನ್ಯವಾಗಿ ಸರಳವಾಗಿಯೇ ಮುಂದುಮುಂದಕ್ಕೆ ಹರಿವುದಾದರೂ, ಕೆಲಕೆಲವು ಸಂದರ್ಭಗಳಲ್ಲಿ ಕೊಂಕುಗಳೂ ತಿರುಚುಗಳೂ ಕವಲುಗಳೂ ಕಾಣಬರುವುವು. ಕಿಂಚಿತ್ಕಾಲದವರೆಗೆ ಜೀವಾತ್ಮನು ಹಿಮ್ಮೆಟ್ಟಿ, ತಾನು ಬಹುಕಾಲಕ್ಕೆ ಮುಂಚೆ ಹಿಂದೆಬಿಟ್ಟದ್ದ ಪ್ರಸ್ಥಾನಕ್ಕೇ ಹೋಗುವಂತಾಗಬಹುದು. ಅವನು ಸಂಪೂರ್ಣವಾಗಿ ಅನುಭವಕ್ಕೆ ತಂದುಕೊಂಡಿಲ್ಲದುದು ಏನೋ ಇರುವುದು ; ಪರಿಪೂರ್ಣವಾಗಿ ಬಳೆಯದಿರುವ ಶಕ್ತಿವಿಶೇಷವೇನೋ ಇರುವುದು ; ಅದರಾರ್ಜನೆಗಾಗಿ ಕೆಳಗಣ ಪ್ರಸ್ಥಾನಕ್ಕೆ ಜೀವನು, ಮೈಗಳ್ಳನಾದ ವಿದ್ಯಾರ್ಥಿಯೊರ್ವನು ಮೇಲಣ ತರಗತಿಯಿಂದ ಕೀಳುತರಗತಿಗೆ ಹಿಂದಿರುಗಿ ಕಿಂಚಿತ್ಕಾಲದವರೆಗೆ ಹೋಗುವ ತೆರದಲ್ಲಿ, ಹೋಗಿ ಬೀಳಬಹುದು. ಮಾನವಪ್ರಸ್ಥಾನಕ್ಕೆ ಬಂದು ಸೇರಿರುವ ಜೀವನು, ತಿರ್ಯಗ್ಜಂತುವಿನ ಶರೀರವೊಂದಕ್ಕೋ, ಸಸ್ಯಾವರಣಕ್ಕೋ, ಬಹುತಾಮಸಗುಣದವನಾಗಿದ್ದಪಕ್ಷದಲ್ಲಿ, ಬಂದು ಕಲ್ಲಿಗೋ, ಹಿಂದಿರುಗಿಹೋಗಿ ಬೀಳುವಂತಾಗಬಹುದು. ಮಾನವಶರೀರವನ್ನು ಸಂಪೂರ್ಣ ಫಲಾವಾಪ್ತಿಯಾಗುವ ತೆರದಲ್ಲಿ ಉಪಯೋಗಿಸುವ ಮಾರ್ಗವನ್ನು ಆ ಜೀವನು ಅಲ್ಲಿ ಕಲಿಯಬೇಕಾಗಬಹುದು. ಆ ಕಾಲದಲ್ಲಿ ಜೀವಾತ್ಮನು, ಸ್ವಾತಂತ್ರ್ಯವು ಕಡಮೆಯಾದುದರಿಂದ ತನ್ನ ಮಾನವಶಕ್ತಿಯನ್ನು ಉಪಯೋಗಿಸುವುದಕ್ಕೆ ಅವಕಾಶವಿಲ್ಲದೆ, ಮಾನವವ್ಯವಹಾರಗಳಿಂದ ಬಹಿಷ್ಕೃತನಾಗಿ, ಕಾರಾಗೃಹದಲ್ಲಿ ತಳ್ಳಲ್ಪಟ್ಟ ಮಾನವನ ತೆರದಲ್ಲಿ, ಆ ಕೋಶದಲ್ಲಿ ಬಿದ್ದಿರುವನು.

ಆದರೆ ಜೀವನು ಸಂಸಾರವೆಂಬ ಜನನಮರಣ ಚಕ್ರಕ್ಕೆ ಅವಧಿಯಿಲ್ಲದೆ ಕಟ್ಟಲ್ಪಟ್ಟವನಾಗಿಲ್ಲ. ಈ ಚಕ್ರಕ್ಕೆ ಅವನನ್ನು ಬಿಗಿದು ಕಟ್ಟಿರುವ ಪಾಶಗಳು ಅವನಾಶೆಗಳು. ಎಲ್ಲಿಯುವರೆಗೆ ಅವನು ಐಹಿಕಸುಖಗಳನ್ನು ಅಪೇಕ್ಷಿಸುವನೋ ಅಲ್ಲಿಯುವರೆಗೂ ಆಯಾಶೆಗಳನ್ನು ತೀರಿಸಿಕೊಳ್ಳುವುದಕ್ಕಾಗಿ ಈ ಮರ್ತ್ಯಲೋಕಕ್ಕೆ ಬಂದು ಬಂದು ಜನ್ಮವನ್ನೆತ್ತುತ್ತಿರಲೇಬೇಕು. ವಿಷಯಾನುರಾಗವನ್ನು ಅವನು ಸಂಪೂರ್ಣವಾಗಿ ತ್ಯಜಿಸಿದವನಾದಕೂಡಲೆ ಅವನನ್ನು ಬಿಗಿದು ಕಟ್ಟಿರುವ ಪಾಶಗಳು ತಾವೇ ಹರಿದುಹೋಗುವುವು ; ಮತ್ತು ಅವನು ಬಿಡುಗಡೆಯನ್ನು ಹೊಂದುವನಾಗುವನು. ಪುನಃ ಹುಟ್ಟಬೇಕಾದ ಆವಶ್ಯಕತೆ ಅವನಿಗಿಲ್ಲ, ಮೋಕ್ಷವನ್ನೈದುವನು. ಅವನಿಗೆ ಬಂಧರಹಿತನಾದ ಜೀವ, ಜೀವನ್ಮುಕ್ತ ಎಂಬ ಹೆಸರು ಬರುವುದು.

ಮರ್ತ್ಯಲೋಕವು ಬೇಗನೆ ಅಭಿವೃದ್ಧಿಗೆ ಬರಲಿ, ಜೀವಾತ್ಮರುಗಳು ಬೇಗಬೇಗನೆ ಬಿಡುಗಡೆಯನ್ನು ಹೊಂದಲಿ ಎಂದು ಜೀವನ್ಮುಕ್ತರನೇಕರು ಈ ನಮ್ಮ ಲೋಕದಲ್ಲಿಯೇ ಉಳಿಯುವರು. ಇಂತಹ ಜೀವನ್ಮುಕ್ತರ ಚರಿತ್ರೆಗಳನ್ನು ನಾವು ವೇದಗಳಲ್ಲಿಯೂ ಪುರಾಣಗಳಲ್ಲಿಯೂ ಇತಿಹಾಸಗಳಲ್ಲಿಯೂ ಓದುತ್ತೇವೆ. ಕೆಲರು ಮಹರ್ಷಿಗಳಾಗಿಯೂ ಮಹಾರಾಜರಾಗಿಯೂ ಇರುವರು, ಮತ್ತೆ ಕೆಲರು ಆಡಂಬರವೇನೂ ಇಲ್ಲದ ಬಡಮನುಜರಾಗಿರುವರು. ಬಾಹ್ಯರೂಪದಲ್ಲಿಂತಿದ್ದರೂ ಅಂತರದಲ್ಲಿ ಅವರು ಪರಿಶುದ್ಧಾತ್ಮರಾಗಿಯೂ ಸ್ವಾರ್ಥಪರರಲ್ಲದವರಾಗಿಯೂ ಶಾಂತಾತ್ಮರಾಗಿಯೂ ಪರಹಿತೈಕರತರಾಗಿಯೂ ಇರುವರು. ಈಶ್ವರನನ್ನೊಡಗೂಡಿದ ಭಾವವು ಅವರಿಗಿರುತ್ತದೆ; ಲೋಕಹಿತಾರ್ಥಕ್ಕಾಗಿ ದುಡಿಯುವುದೇ ಅವರ ತೃಪ್ತಿ.

## ಶ್ರುತ್ಯಾದಿ ವಚನಗಳು.

ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ |
ತಥಾ ದೇಹಾನ್ತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ‖

(ಭಗವದ್ಗೀತೆ. ,ಅ ೨, ಶ್ಲೋ. ೧೩).

"ದೇಹದಲ್ಲಿ ವಾಸಮಾಡುವಾಜೀವಾತ್ಮನು ಒಂದೇ ದೇಹದಲ್ಲಿ ಕೌಮಾರ, ಯೌವನ, ಜರೆ ಎಂಬ ಅವಸ್ಥೆಗಳನ್ನು ಹೇಗೆ ದಾಟ ದಾಟ ಹೋಗುವನೋ ಹಾಗೆಯೇ ಬೇರೊಂದು ದೇಹಕ್ಕೂ ದಾಟ ಹೋಗುವನು. ಧೀರಪ್ರಕೃತಿಯುಳ್ಳಾತನು ಅದಕ್ಕೋಸ್ಕರವಾಗಿ ವ್ಯಸನಪಡುವುದಿಲ್ಲ."

ಅನ್ತವನ್ತ ಇಮೇ ದೇಹಾನಿತ್ಯಸ್ಯೋಕ್ತಾಃ ಶರೀರಿಣಃ ।
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥
ಯಏನಂ ವೇತ್ತಿ ಹನ್ತಾರಂ ಯಶ್ಚೈನಂ ಮನ್ಯತೇ ಹತಮ್ ।
ಉಭೌ ತೌ ನ ವಿಜಾನೀತೋ ನಾಽಯಂ ಹನ್ತಿ ನ ಹನ್ಯತೇ ॥
ನ ಜಾಯತೇ ಮ್ರಿಯತೇ ವಾ ಕದಾಚಿತ್
ನಾಽಯಂ ಭೂತ್ವಾ ಭವಿತಾ ವಾ ನ ಭೂಯಃ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ ॥
ವೇದಾಽವಿನಾಶಿನಂ ನಿತ್ಯಂ ಯಏನಮಜಮವ್ಯಯಮ್ ।
ಕಥಂ ಸಪುರುಷಃ ಪಾರ್ಥ ಕಂ ಘಾತಯತಿ ಹನ್ತಿ ಕಮ್ ॥
ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ ।
ತಥಾ ಶರೀರಾಣಿ ವಿಹಾಯ ಜೀರ್ಣಾ
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥
ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।
ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥

(ಭಗವದ್ಗೀತೆ. ಅ. ೨, ಶ್ಲೋ. ೧೮—೨೨ ಮತ್ತು ೩೦).

"ಶರೀರದಲ್ಲಿ ವಾಸವಾಗಿರುವ ಜೀವಾತ್ಮನು ನಿತ್ಯನಾಗಿಯೂ ನಾಶರಹಿತನಾಗಿಯೂ ಅಪ್ರಮೇಯನಾಗಿಯೂ ಇರುವನು; ಅವನಿರುವ ಶರೀರಗಳು ಮಾತ್ರ ಅಂತವನ್ನುಳ್ಳವುಗಳಾಗಿವೆ; ಆದ್ದುದರಿಂದ ಯುದ್ಧವನ್ನು ಮಾಡಯ್ಯಾ ಭಾರತ.

"ಕೊಲ್ಲುವಾತನೆಂದು ಈ ಜೀವನನ್ನು ಭಾವಿಸುವವನೂ, ಕೊಲ್ಲ

ಲ್ಪಡುವಾತನೆಂದು ಈ ಜೀವನನ್ನು ಭಾವಿಸುವವನೂ—ಇಬ್ಬರೂ ಅಜ್ಞಾನಿಗಳು. ಜೀವನು ಕೊಲ್ಲುವುದೂ ಇಲ್ಲ, ಕೊಲ್ಲಲ್ಪಡುವುದೂ ಇಲ್ಲ.

"ಆವನು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ ; ಇರುವವನಾಗಿ ಇಲ್ಲದವನಾಗಿಯೂ ಆಗುವುದಿಲ್ಲ ; ಅವನು ಅಜನು, ನಿತ್ಯನು, ಶಾಶ್ವತನು, ಮತ್ತು ಪುರಾಣನು ; ಈ ಶರೀರವು ಹತವಾದಾಗ ಅವನು ಹತನಾಗುವುದಿಲ್ಲ.

"ಅವನನ್ನು ನಾಶರಹಿತನೆಂದೂ ನಿತ್ಯನೆಂದೂ ಹುಟ್ಟದವನಲ್ಲವೆಂದೂ ವ್ಯಯವಿಲ್ಲದವನೆಂದೂ ತಿಳಿವಾತನು, ಓ ಪಾರ್ಥ, ಹೇಗೆತಾನೇ ಕೊಲ್ಲುವನು, ಕೊಲ್ಲಿಸುವನು ?

"ಮಾನವನು ಜೀರ್ಣವಸ್ತ್ರವನ್ನು ಬಿಸುಟು ನವೀನವಸ್ತ್ರಗಳನ್ನು ಹೇಗೆ ಧರಿಸುವನೋ ಹಾಗೆಯೇ ಶರೀರವಾಸಿಯಾದ ಜೀವಾತ್ಮನೂ ಜೀರ್ಣದೇಹಗಳನ್ನು ಬಿಟ್ಟು ನವೀನದೇಹಗಳನ್ನು ಹೊಗುವನು.

"ಪ್ರತಿ ಶರೀರದಲ್ಲಿಯೂ ಇರುವವನಾದ ಜೀವನು ಎಂದಿಗೂ ವಧ್ಯನಾಗನಯ್ಯಾ ಭಾರತ ; ಆದುದರಿಂದ ಯಾವ ಪ್ರಾಣಿಗೂ ನೀನು ದುಃಖಿಸಬೇಕಾಗಿಲ್ಲ."

ತದ್ಯಥಾ ಪೇಶಸ್ಕಾರೀ ಪೇಶಸೋಮಾತ್ರಾಮುಪಾ
ದಾಯ, ಅನ್ಯನ್ನವತರಂ ಕಲ್ಯಾಣತರಂ ರೂಪಂ ತನುತೇ ; ||
ಏವಮೇವಾಽಯಮಾತ್ಮೇದಂ ಶರೀರಂ ನಿಹತ್ಯಾಽವಿದ್ಯಾಂ
ಗಮಯಿತ್ವಾ ಅನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ ||
(ಬೃಹದಾರಣ್ಯಕೋಪನಿಷತ್ತು. ಅ. ೬, ಬ್ರಾ. ೪, ಋ. ೪).

"ಚಿನ್ನಗೆಲಸದವನು ಚಿನ್ನದ ತುಂಡೊಂದನ್ನು ತೆಗೆದುಕೊಂಡು ಹೊಸದಾಗಿಯೂ ಸುಂದರತರವಾಗಿಯೂ ಇರುವ ರೂಪವನ್ನು ಹೇಗೆ ಮಾಡುವವನಾಗುವನೋ ಹಾಗೆಯೇ ಆತ್ಮನೂ ಈ ಶರೀರವನ್ನು ಬಿಸುಟು, ಅವಿದ್ಯೆಯನ್ನೊತ್ತರಿಸಿ, ಹೊಸದಾಗಿಯೂ ಸುಂದರತರವಾಗಿಯೂ ಇರುವ ರೂಪವನ್ನು ಮಾಡಿಕೊಳ್ಳುವನಾಗುತ್ತಾನೆ."

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಮ್ಭಸಾ ॥
ಕಾಯೇನ ಮನಸಾ ಬುದ್ಧ್ಯಾ ಕೇವಲೈರಿನ್ದ್ರಿಯೈರಪಿ ।
ಯೋಗಿನಃ ಕರ್ಮ ಕುರ್ವನ್ತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥
ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾನ್ತಿಮಾಪ್ನೋತಿ ನೈಷ್ಠಿಕೀಮ್ ।
ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥

(ಭಗವದ್ಗೀತೆ. ಅ. ೫, ಶ್ಲೋ. ೧೦—೧೨).

"ತಾನು ಮಾಡುವುದನ್ನೆಲ್ಲಾ ಬ್ರಹ್ಮಾರ್ಪಣವಮಾಡಿ ಸಂಗವನ್ನು ಇಟ್ಟುಕೊಳ್ಳದೆ ಯಾವನು ಕಾರ್ಯನಿರತನಾಗುವನೋ ಅವನು ಜಲದಿಂದ ನಿರ್ಲಿಪ್ತವಾಗಿರುವ ಪದ್ಮಪತ್ರದಂತೆ ಪಾಪನಿರ್ಲಿಪ್ತನಾಗಿರುವನು.

"ಸಂಗವೆಲ್ಲವನ್ನು ತೊರೆದು ಯೋಗಿಗಳು ಆತ್ಮಶುದ್ಧಿಗಾಗಿ ಕಾಯದಿಂದಲೂ ಮನಸ್ಸಿನಿಂದಲೂ ಬುದ್ಧಿಯಿಂದಲೂ ಕೇವಲವಾಗಿಂದ್ರಿಯಗಳಿಂದಲೂ ಕರ್ಮಗಳನ್ನೆಸಗುತ್ತಲೇ ಇರುವರು.

"ಕರ್ಮಫಲವನ್ನಪೇಕ್ಷಿಸದ ಯೋಗಸಹಿತನು ಶಾಶ್ವತ ಶಾಂತಿಯನ್ನೈದುವನು; ಕರ್ಮಫಲವನ್ನಪೇಕ್ಷಿಸುವ ಯೋಗರಹಿತನು ಪಾಪಬದ್ಧನಾಗಿಯೇ ಇರುವನು."

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಣ್ಡಿತಾಸ್ಸಮದರ್ಶಿನಃ ॥
ಇಹೈವ ತೈರ್ಜಿತಸ್ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥
ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾ
ಽಪ್ರಿಯಮ್ ।
ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥
ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿನ್ದತ್ಯಾತ್ಮನಿ ಯತ್ಸುಖಮ್ ।
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥

(ಭಗವದ್ಗೀತೆ. ಅ. ೫. ಶ್ಲೋ. ೧೮—೨೧).

"ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣನನ್ನೂ ಗೋವನ್ನೂ ಆನೆಯನ್ನೂ ನಾಯಿಯನ್ನೂ ಶ್ವಪಾಕನನ್ನೂ ಪಂಡಿತನು ಸಮದೃಷ್ಟಿಯಿಂದೀಕ್ಷಿಸುವನು.

"ಯಾರ ಮನಸ್ಸು ಸಮಸ್ಥಿತಿಯನ್ನೈದಿರುವುದೋ ಅಂತಹರು ಇಹದಲ್ಲಿಯೇ ಸಂಸಾರವನ್ನು ಗೆದ್ದಿರುವರು. ಬ್ರಹ್ಮನು ನಿರ್ದೋಷಸಮನೆಂದೆನಿಸಿಕೊಂಡಿರುವುದರಿಂದ ಅವರು ಬ್ರಹ್ಮನಲ್ಲಿ ಸ್ಥಿರಚಿತ್ತರಾಗಿರುವರು.

"ಪ್ರಿಯವಾದುದನ್ನು ಪಡೆದಾಗ ಹರ್ಷಿಸುವನಾಗಬಾರದು ; ಅಪ್ರಿಯವನ್ನು ಪಡೆದಾಗ ದುಃಖಿಸುವನಾಗಬಾರದು ; ಬ್ರಹ್ಮವನ್ನು ತಿಳಿದವನು ಸ್ಥಿರಬುದ್ಧಿಯುಳ್ಳವನಾಗಿಯೂ ಅಸಂಮೂಢನಾಗಿಯೂ ಬ್ರಹ್ಮನಲ್ಲಿಯೇ ಸ್ಥಿರನಾಗಿರುವನು.

'ಬಾಹ್ಯಸ್ಪರ್ಶಗಳಲ್ಲಿ ಅಸಕ್ತವಾದ ಚಿತ್ತವುಳ್ಳವನು ಆತ್ಮನ ಸುಖವನ್ನು ಅನುಭವಿಸುವನು ; ಯೋಗದಿಂದ ಬ್ರಹ್ಮನಲ್ಲಿ ಸೇರಿರುವ ಚಿತ್ತವನ್ನುಂಟಾಗಿರುವುದರಿಂದ ಅವನು ಅಕ್ಷಯ್ಯ ಸುಖವನ್ನು ಅನುಭವಿಸುವನು."

ಯೋಽನ್ತಸ್ಸುಖೋಽನ್ತರಾರಾಮಸ್ತಥಾನ್ತರ್ಜ್ಯೋತಿರೇವ ಯಃ।
ಸಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥
ಲಭನ್ತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।
ಛಿನ್ನದ್ವೈಧಾಯತಾತ್ಮಾನಃ ಸರ್ವಭೂತಹಿತೇ ರತಾಃ ॥
ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।
ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥

(ಭಗವದ್ಗೀತೆ. ಅ. ೫, ಶ್ಲೋ. ೨೪—೨೬).

"ಅಂತಸ್ಸುಖನಾಗಿಯೂ ಅಂತರಾರಾಮನಾಗಿಯೂ ಅಂತರ್ಜ್ಯೋತಿಯವನಾಗಿಯೂ ಇರುವ ಯೋಗಿಯು ಬ್ರಹ್ಮನಿರ್ವಾಣವನ್ನೈದಿ ಬ್ರಹ್ಮನಾಗುವನು.

"ಕ್ಷೀಣಕಲ್ಮಷರಾಗಿಯೂ, ಸಂದೇಹರಹಿತರಾಗಿಯೂ, ವಶವರ್ತಿಯಾದ ಚಿತ್ತವನ್ನುಳ್ಳವರಾಗಿಯೂ, ಸರ್ವಭೂತಹಿತರತರಾಗಿಯೂ ಇರುವ ಋಷಿಗಳು ಬ್ರಹ್ಮನಿರ್ವಾಣವನ್ನು ಪಡೆವರು.

"ವಿದಿತಾತ್ಮರಾಗಿಯೂ, ಕಾಮಕ್ರೋಧವಿಯುಕ್ತರಾಗಿಯೂ, ಚಿತ್ತವನ್ನು ನಿರೋಧಿಸಿದವರಾಗಿಯೂ ಇರುವ ಯತಿಗಳಿಗೆ ಬ್ರಹ್ಮನಿರ್ವಾಣವು ಸಮೀಪಸ್ಥವಾಗಿಯೇ ಇರುವುದು."



ಇದು ಸನಾತನಧರ್ಮ ದೀಪಿಕೆಯಲ್ಲಿ ತತ್ವಪ್ರಕಾಶಿಕೆಯೆಂಬ
ಪ್ರಥಮ ಭಾಗದಲ್ಲಿ ಪುನರ್ಜನ್ಮವೆಂಬ ಹೆಸರಿನ ತೃತೀಯಾಧ್ಯಾಯ.



# ಪ್ರಥಮ ಭಾಗ.

## ಚತುರ್ಥಾಧ್ಯಾಯ.

### ಕರ್ಮ ವಿಚಾರ.



ಕರ್ಮವೆಂಬುದು ಸಂಸ್ಕೃತಪದ; ಮಾಡಿದುದೆಂದದರರ್ಥ. ಆದರೆ ಈಗ ಮಾಡಲ್ಪಡುತ್ತಿರುವ ಕಾರ್ಯಕ್ಕೂ ಮುಂದಕ್ಕೆ ಅದರಿಂದಾಗುವ ಫಲಕ್ಕೂ ಇರುವ ನಿರ್ಧಾರವಾದ ಅದೊಂದು ಸಂಬಂಧವನ್ನು ತಿಳಿಸುವುದಕ್ಕೆ ಈ ಕರ್ಮವೆಂಬ ಪದವನ್ನು ಸಾಮಾನ್ಯವಾಗಿ ಪ್ರಯೋಗಿಸುತ್ತೇವೆ. ಕಾರಣವಿಲ್ಲದೆಯೇ, ಆಕಸ್ಮಿಕವಾಗಿ, ಕ್ರಮವಾವುದೂ ಇಲ್ಲದೆ ಯಾವುದೂ ಸಂಭವಿಸುವುದಿಲ್ಲ. ಕ್ರಮಾನುಸಾರವಾಗಿ ಸಂಭವಗಳು ತೋರಬರುವುವು; ಸಂಭವಗಳು ನಿರ್ಧಾರವಾದದೊಂದು ಕ್ರಮದಲ್ಲಿ ಒಂದನ್ನೊಂದು ಅನುಸರಿಸಿಕೊಂಡೇ ಬರುವುವು.

ಒಂದು ಬೀಜವನ್ನು ನೆಲದಲ್ಲಿ ನೆಟ್ಟರೆ, ಆ ಬೀಜವು ಪುಟ್ಟದಾದೊಂದು ಮೊಳಕೆಯನ್ನು ಮೇಲಕ್ಕೆ ತರುವುದು, ಎಲೆಗಳು ಆ ಬುಡದ ಮೇಲ್ಗಡೆಯಲ್ಲಿ ತೋರಿಸಿಕೊಳ್ಳುವುವು, ಆಮೇಲೆ ಹೂಗಳು ಹೊರಡುವುವು, ಆಮೇಲೆ ಹಣ್ಣುಗಳಾಗುವುವು, ಮತ್ತು ಆ ಹಣ್ಣುಗಳಲ್ಲಿ ಬೀಜಗಳು ಮತ್ತೊಮ್ಮೆ ಸಿಕ್ಕುವುವು. ಆ ಬೀಜಗಳಲ್ಲಿ ಒಂದನ್ನು ನೆಟ್ಟರೆ, ಬುಡ, ಎಲೆ, ಹೂವು, ಹಣ್ಣು, ಬೀಜ—ಹೀಗೆ ಕ್ರಮವಾಗಿ ಹೊರಟು ಹೊರಟು ಬರುವುವು. ಒಂದೇ ಬಗೆಯ ಬೀಜದಿಂದ ಒಂದೇ ಬಗೆಯ ಗಿಡವು ಹುಟ್ಟುವುದು. ಭತ್ತವು ಭತ್ತವನ್ನೇ ಹುಟ್ಟಿಸುವುದು; ಜವೆ ಗೋಧಿಯು ಜವೆ ಗೋಧಿಯನ್ನೇ ಹುಟ್ಟಿಸುವುದು; ಗೋಧಿಯು ಗೋಧಿಯನ್ನೇ ಹುಟ್ಟಿಸು

ವುದು ; ಮುಳ್ಳುಗಿಡವು ಮುಳ್ಳುಗಿಡವನ್ನೇ ಹುಟ್ಟಿಸುವುದು ; ಕಳ್ಳಿಯು ಕಳ್ಳಿಯನ್ನೇ ಹುಟ್ಟಿಸುವುದು. ಮುಳ್ಳುಗಿಡವನ್ನು ನೆಟ್ಟು ಮಧುರತರ ದ್ರಾಕ್ಷಿಯ ಹಣ್ಣನ್ನು ನಿರೀಕ್ಷಿಸಕೂಡದಾಗಿದೆ ; ಪಾಪಾಸುಕಳ್ಳಿಯನ್ನು ನೆಟ್ಟವನು ರಸಪೂರಿತವಾದ ಸೇಬಿನಹಣ್ಣನ್ನು ನಿರೀಕ್ಷಿಸಬಾರದಾಗಿದೆ. ಇದು ಕರ್ಮ ; ಕರ್ಮಜ್ಞಾನವುಳ್ಳ ಮಾನವನು ತಾನು ಕೊಯ್ಯಲೆಳಸುವ ಹಣ್ಣಿನ ಬೀಜವನ್ನೇ ಬಿತ್ತುವನು. ಇದು ಮೊದಲು ಜ್ಞಾಪಕವಿಡತಕ್ಕ ವಿಷಯ.

ಕರ್ಮವೆಂಬುದು ಹೊರಕ್ಕೆ ಒಂಟಿಯಾಗಿ ತೋರುವಷ್ಟು ಒಂಟಿಯಾಗಿಲ್ಲ. "ಊರೊಳಕ್ಕೇಕೆ ಹೋಗುತ್ತೀಯೆ ?" ಎಂದು ನಾನೊಬ್ಬನನ್ನು ಕೇಳಿದರೆ, ಅವನು—"ನನಗೊಂದು ಜತೆ ಪಾದರಕ್ಷೆ ಬೇಕಾಗಿತ್ತು. ಅದು ಅಲ್ಲಿ ದೊರೆಯುವುದೆಂದು ಯೋಚಿಸಿದೆನು" ಎಂದು ಉತ್ತರವನ್ನು ಕೊಡುವನು. ಹಾಗಿಲ್ಲದಿದ್ದರೆ, "ಸ್ನೇಹಿತನೊಬ್ಬನನ್ನು ನೋಡಬೇಕೆಂದು ಆಸೆಯಾಯಿತು, ಆತನು ಊರಿನೊಳಗಿರುವನೆಂದು ತೋರಿತು" ಎನ್ನುವನು. ಎಷ್ಟೋವಿಧದುತ್ತರವನ್ನು ಕೊಡಬಹುದು. ಏನುತ್ತರವನ್ನು ಕೊಟ್ಟರೂ, "ಆಸೆಯಾಯಿತು, ಮನಸ್ಸಿಗೆ ತೋರಿತು, ಆದುದರಿಂದ ಮಾಡಿದೆ" ಎಂಬುವು ಎಲ್ಲಾ ಉತ್ತರಗಳಲ್ಲಿಯೂ ತೋರಬರುವುವು. ಇವು ಮೂರೂ ಒಟ್ಟಿಗೆ ಇದ್ದೇ ಇರುವುವು.

ಆಸೆಯೆಂಬುದು ಕಾಮ ; ಏನೋ ಒಂದನ್ನು ಕಾಮಿಸುವೆವು—ಇದು ಮೊದಲನೆಯ ಪ್ರಸ್ಥಾನ ; ಅದನ್ನು ಹೇಗೆ ಪಡೆಯಬೇಕೆಂದು ಚಿಂತಿಸುವೆವು—ಇದು ಎರಡನೆಯ ಪ್ರಸ್ಥಾನ ; ಪಡೆಯುವುದಕ್ಕೆ ಕ್ರಿಯೆಯನ್ನೆಸಗುವೆವು—ಇದು ಮೂರನೆಯ ಪ್ರಸ್ಥಾನ. ಇದು ಕ್ರಮಾನುಬಂಧ ; ಕ್ರಿಯೆಯೆಂಬುದರ ಹಿಂದುಗಡೆಯಲ್ಲಿ ಚಿಂತೆಯೆಂಬುದೊಂದು ಇದ್ದೇ ಇರುವುದು ; ಚಿಂತೆಯ ಹಿಂದುಗಡೆಯಲ್ಲಿ ಕಾಮವೊಂದು ಇದ್ದೇ ಇರುವುದು. ಈ ಮೂರೂ ವಸ್ತುಗಳು—ಕ್ರಿಯೆ, ಜ್ಞಾನ, ಇಚ್ಛೆ ಎಂಬುವು—ಕರ್ಮವೆಂಬ ಹುರಿಯಲ್ಲಿ ಹೊಸೆದಿರುವ ಮೂರು ಎಳೆಗಳಾಗಿವೆ. ನಾವು ಮಾಡುವ ಕೆಲಸಗಳು ನಮ್ಮ ಸುತ್ತಲೂ ಇರುವ ಪ್ರಾಣಿಗಳಿಗೆ ಸುಖವನ್ನೋ ಅಸುಖವನ್ನೋ ಉಂಟುಮಾಡುವುವು. ನಾವು ಅವರಿಗೆ ಸುಖವನ್ನುಂಟುಮಾಡಿದರೆ, ಬೀಜದಂತೆ ಸುಖವನ್ನು ಬಿತ್ತುತ್ತೇವೆ, ಅದು ನಮಗೆ ಸುಖವನ್ನುಂಟು

ಮಾಡುವ ಗಿಡವಾಗಿ ಬೆಳೆಯುವುದು. ಅಸುಖವನ್ನುಂಟುಮಾಡಿದರೆ, ಬೀಜದಂತೆ ಅಸುಖವನ್ನು ಬಿತ್ತುತ್ತೇವೆ, ಅದು ನಮಗೆ ಅಸುಖವನ್ನುಂಟುಮಾಡುವ ಗಿಡವಾಗಿ ಬೆಳೆಯುತ್ತದೆ. ಕ್ರೂರ ಕ್ರಿಯೆಗಳನ್ನೆಸಗಿದರೆ, ಬೀಜದಂತೆ ಕ್ರೌರ್ಯವನ್ನು ಬಿತ್ತುತ್ತೇವೆ ; ನಮಗೆ ಕ್ರೂರವಾಗುವಂತೆ ಅದು ಗಿಡವಾಗಿ ಬೆಳೆಯುವುದು. ಉಪಕಾರಗಳನ್ನು ಮಾಡಿದರೆ, ಬೀಜದಂತೆ ಉಪಕಾರವನ್ನು ಬಿತ್ತುವರಾಗುತ್ತೇವೆ ; ಅದು ನಮಗೆ ಉಪಕಾರವನ್ನುಂಟುಮಾಡುವ ಗಿಡವಾಗಿ ಬೆಳೆಯುವುದು. ಕ್ರಿಯೆಗಳ ಮೂಲಕವಾಗಿ ನಾವು ಬಿತ್ತಿದುದು ಹಿಂದಿರುಗಿ ನಮಗೇ ಬರುವುದು. ಇದೂ ಕರ್ಮ.

ಆದರೆ ಕ್ರಿಯೆಯ ಬೆನ್ನಿನ ಹಿಂದೆ ಚಿಂತೆಯಿದೆ. ಚಿಂತನೆಯು ನಮ್ಮ ಶೀಲವನ್ನು, ನಮ್ಮ ಮನಸ್ಸಿನ ಜಾತಿಯನ್ನೂ ರೀತಿಯನ್ನೂ ನಿರ್ಣಯಿಸುವುದು. ಒಂದನ್ನು ನಾವು ಹೆಚ್ಚಾಗಿ ಚಿಂತಿಸಿದರೆ, ನಮ್ಮ ಮನಸ್ಸು ಅದರಂತೆಯೇ ಆಗುವುದು. ದಯಾಳುತ್ವವನ್ನು ಚಿಂತಿಸಿದರೆ, ದಯಾಳುಗಳಾಗುತ್ತೇವೆ ; ಕ್ರೌರ್ಯವನ್ನು ಚಿಂತಿಸಿದರೆ, ಕ್ರೂರರಾಗುತ್ತೇವೆ ; ಮೋಸವನ್ನು ಚಿಂತಿಸಿದರೆ, ಮೋಸಗಾರರಾಗುತ್ತೇವೆ ; ಸತ್ಯಸಂಧತೆಯನ್ನು ಚಿಂತಿಸಿದರೆ, ಸತ್ಯಸಂಧರಾಗುತ್ತೇವೆ. ಈ ರೀತಿಯಲ್ಲಿ ನಮ್ಮ ಚಿಂತನೆಗಳು ನಮ್ಮ ಶೀಲವನ್ನು ರಚಿಸುವುವು ; ಮತ್ತು ಮತ್ತೊಮ್ಮೆ ನಾವು ಹುಟ್ಟಿದಾಗ, ನಮ್ಮ ಚಿಂತನೆಗಳು ಈಗ ರಚಿಸುತ್ತಲಿರುವ ಶೀಲದೊಡನೆ ನಾವು ಹುಟ್ಟುವೆವು. ನಮ್ಮ ಶೀಲಕ್ಕನುಸಾರವಾಗಿ ನಾವು ಕಾರ್ಯಗಳನ್ನು ಮಾಡುವುದರಿಂದ—ದಯಾಳುವು ದಯಾಳುವಾಗಿ, ಕ್ರೌರ್ಯವಂತನು ಕ್ರೂರವಾಗಿ ನಡೆಯುವುದರಿಂದ—ಬರುವ ಜನ್ಮದಲ್ಲಿ ನಾವು ಮಾಡುವ ಕಾರ್ಯಗಳು ಈ ಜನ್ಮದಲ್ಲಿ ನಮಗಿರುವ ಚಿಂತನಾನುಗುಣವಾಗಿಯೇ ಇರುವುವೆಂಬುದನ್ನು ಗ್ರಹಿಸುವುದು ಸುಲಭವಾಗಿಯೇ ಇದೆ. ಇದೂ ಕರ್ಮ.

ಚಿಂತೆಯ ಹಿಂದೆ ಕಾಮವು ಇದ್ದೇ ಇದೆ. ಕಾಮವು ನಾವು ಬಯಸುವುದನ್ನು ನಮಗೆ ತರುವುದು. ಅಯಸ್ಕಾಂತವು ಸೂಜಿಯನ್ನು ಆಕರ್ಷಿಸುವಂತೆ, ಕಾಮವು ಕಾಮಿತವಸ್ತುವನ್ನು ಆಕರ್ಷಿಸುವುದು. ಧನದಾಸೆಯುಳ್ಳವರಾದರೆ, ಮುಂದಣ ಜನ್ಮದಲ್ಲಿ ಧನಾರ್ಜನೆಯ ಸಂಭವವು ನಮಗುಂಟಾಗುವುದು ; ವಿದ್ಯಾಕಾಂಕ್ಷಿಗಳಾಗಿದ್ದರೆ, ಮುಂದಣ ಜನ್ಮದಲ್ಲಿ ವಿದ್ಯಾಲಾಭವಾ

ಗುವ ಸಂಭವವು ನಮಗುಂಟಾಗುವುದು ; ಪ್ರೀತಿಯನ್ನು ಬಯಸುವವರಾಗಿದ್ದರೆ, ಪ್ರೇಮಾಸ್ಪದರಾಗುವ ಸಂಭವವು ನಮಗುಂಟಾಗುವುದು ; ಅಧಿಕಾರವನ್ನು ಬಯಸುವವರಾಗಿದ್ದರೆ, ಅಧಿಕಾರಿಗಳಾಗುವ ಸಂಭವವು ನಮಗುಂಟಾಗುವುದು. ಇದುವೆ ಕರ್ಮ.

ಇವುಗಳನ್ನೆಲ್ಲಾ ಸಂಪೂರ್ಣವಾಗಿ ಗ್ರಹಿಸುವವರೆಗೂ ವಿದ್ಯಾರ್ಥಿಯು ಇವುಗಳನ್ನು ಮನನ ಮಾಡಲೇ ಬೇಕು. ಇವುಗಳನ್ನು ತಿಳಿದವನಾದ ಮೇಲೆಯೇ ಕರ್ಮ ಭಾಗದ ಕ್ಲಿಷ್ಟವಿಷಯಗಳನ್ನು ಗ್ರಹಿಸಲು ಸಮರ್ಥನಾಗುವನು. ಕರ್ಮ ವಿಷಯವನ್ನು ಒಂದು ವಾಕ್ಯದಲ್ಲಿಯೇ ಅಡಗಿಸಿ ಬರೆಯಬಹುದು. "ಬಿತ್ತಿದಂತೆಯೇ ಬಾಚಿಕೊಳ್ಳುವನು", ಅಥವಾ, "ಅಟ್ಟಂತೆಯೇ ಉಣ್ಣುವನು" ಎಂಬುದು ಕರ್ಮತತ್ವದ ಸಾರ.

ಆದರೆ ವಿದ್ಯಾರ್ಥಿಯು—"ನನ್ನ ಈಗಿನ ಕ್ರಿಯೆಗಳು ನನ್ನ ಪೂರ್ವದ ಚಿಂತನೆಗಳ ಫಲವಾಗಿಯೂ, ನನ್ನ ಪೂರ್ವದ ಚಿಂತನೆಗಳು ತತ್ಪೂರ್ವದ ಕಾಮಗಳ ಫಲವಾಗಿಯೂ ಇರುವುದಾದರೆ, ನಾನು ಸ್ವತಂತ್ರನಲ್ಲದ ಕಾಮ ಚಿಂತಾ ಸನ್ನಿಬದ್ಧ ಪ್ರಾಣಿಯಾಗುವುದಿಲ್ಲವೆ ? ಚಿಂತಿಸಿದ್ದಂತೆಯೇ ಕ್ರಿಯೆಯನ್ನೆಸಗುವನಾಗಬೇಕು ; ಕಾಮಿಸಿದ್ದಂತೆಯೇ ಚಿಂತಿಸುವನಾಗಬೇಕು !" ಎಂದು ಆಕ್ಷೇಪಿಸಬಹುದು. ಆಕ್ಷೇಪಣೆಯೇನೋ ನಿಜವೇ ಅಹುದು ಆದರೆ ಕೊಂಚದೂರದ ಮಟ್ಟಿಗೇ ನಿಜ ; ಹೇಗೆಂದರೆ, ಹೊಸಹೊಸವಾದ ಅನುಭವಗಳು ಬಂದಹಾಗೆಲ್ಲಾ ನಾವು ಹೊಸಬರಾಗುತ್ತಲೇ ಇರುತ್ತೇವೆಯಾದುದರಿಂದ, ಜೀವನು ಹೆಚ್ಚುಹೆಚ್ಚಾಗಿ ಜ್ಞಾನ ಸಂಪಾದನೆಯನ್ನು ಮಾಡಿಕೊಳ್ಳುವವನಾಗಿ, ಆ ಜ್ಞಾನಬಲದಿಂದ ತನ್ನ ಕಾಮಗಳನ್ನು ಬದಲಾಯಿಸಿಕೊಳ್ಳುವನು. ಮಾತನ್ನು ಬದಲಾಯಿಸಿ ಬೇರೆ ವಿಧದಲ್ಲಿಯೂ ಇದನ್ನು ಹೇಳಬಹುದಾಗಿದೆ. ಪೂರ್ವದಲ್ಲಿ ನಾವದೊಂದು ಬಗೆಯಲ್ಲಿ ಕಾಮಿಸಿ, ಚಿಂತಿಸಿ, ಕ್ರಿಯೆಯನ್ನೆಸಗುತ್ತಿರುವಾಗಲೂ,ಅದೇ ಪೂರ್ವದಲ್ಲಿ ಬೇರೊಂದು ಬಗೆಯಲ್ಲಿ ಕಾಮಿಸುವ, ಮತ್ತು ಚಿಂತಿಸುವ ಸಂಭವವೂ ಸಾಧ್ಯವಾಗಿಯೇ ಇತ್ತು ; ಮತ್ತು ಸಾಧ್ಯವಾದೀ ಸಂಭವವು, ನಾವು ಪೂರ್ವದಲ್ಲೆಸಗುತ್ತಿದ್ದ ತೆರದಿಂದ ಹುಟ್ಟುವ ದುಃಖಗಳನ್ನು ನವೀನಾನುಭವಗಳ ಮೂಲಕವಾಗಿ ಮನಸ್ಸಿಗೇಚೆನ್ನಾಗಿ ತಂದುಕೊಂಡೊಡನೆಯೇ, ಸಾಧಿತವಾಗಬಹುದಾಗಿಯೂ ಇರುವುದು.

ತಾನು ಕ್ರೂರವಾಗಿ ನಡೆದೆನು ಎಂಬುದು ಅಬ್ಬನಿಗೆ ತಿಳಿಯ ಬರುವುದೆಂದು ಇಟ್ಟುಕೊಳ್ಳಿರಿ. ಪೂರ್ವದಲ್ಲಿ ತನಗಿದ್ದ ಕ್ರೂರಚಿಂತೆಗಳಿಂದ ತನ್ನ ಕ್ರೂರ ಕೃತ್ಯಗಳುಂಟಾದುವೆಂದೂ, ಕ್ರೌರ್ಯವೊಂದರಿಂದಲೇ ಸಾಧ್ಯವಾಗಿದ್ದ ಅದೊಂದು ವಸ್ತುವನ್ನು ತಾನು ಕಾಮಿಸಿದ್ದುದರಿಂದ ಆ ಕ್ರೂರ ಚಿಂತನೆಗಳು ತನ್ನಲ್ಲಿ ಹುಟ್ಟಿದುವೆಂದೂ ಕಲಿಯುವನು. ತನ್ನ ಕ್ರೂರ ಕೃತ್ಯಗಳು ಜನರಿಗೆ ವ್ಯಥೆಯನ್ನುಂಟುಮಾಡುತ್ತವೆಯೆಂಬುದನ್ನೂ, ಈ ಜನರು ತನ್ನಲ್ಲಿ ಭಯವಿಟ್ಟು ದ್ವೇಷಿಸುವರು ಎಂಬುದನ್ನೂ, ತತ್ಕಾರಣದ ದೆಸೆಯಿಂದ ತನ್ನನ್ನು ಬಹಿಷ್ಕರಿಸಿ ತನಗೆ ಸುಖವಿಲ್ಲದಂತೆ ಮಾಡುವರೆಂಬುದನ್ನೂ ತಾನೇ ತಿಳಿಯುವನಾಗುವನು. ಇದನ್ನೆಲ್ಲಾ ಯೋಚಿಸುವವನಾಗಿ, ತನ್ನ ನಡತೆಯನ್ನು ಬದಲಾಯಿಸಬೇಕೆಂದು ಮನಸ್ಸನ್ನು ನಿರ್ಧಾರ ಮಾಡಿಕೊಳ್ಳಲೆತ್ನಿಸುವನು; ಆದರೆ ತನ್ನ ಪೂರ್ವದ ಚಿಂತೆಗಳ ಮತ್ತು ಕಾಮಗಳ ಬಾಕಾಟವನ್ನು ಜಯಿಸುವುದು ಅವನಿಗೆ ಬಹು ಕಷ್ಟವಾಗುವುದು. ಕ್ರೌರ್ಯವಿಲ್ಲದೆ ತನಗೆ ಲಭಿಸದಿರುವ ಪದಾರ್ಥಗಳನ್ನು ತಾನು ಕಾಮಿಸುವುದೇ ತನ್ನ ವ್ಯಥೆಗೆಲ್ಲಾ ಮೂಲವೆಂಬುದನ್ನು ಅರಿತವನಾಗಿ, ಅವನು—ಜೀವಾತ್ಮನಾಗಿರುವ ಅವನು—“ಆ ವಸ್ತುಗಳನ್ನು ಕಾಮಿಸುವಂತೆ ನನ್ನ ಮನಸ್ಸನ್ನು ನಾನು ಬಿಡುವುದೇ ಇಲ್ಲ, ಅವುಗಳ ಕಾಮವು ತೋರಿದಾಗೆಲ್ಲಾ, ಆ ಕಾಮವು ದುಃಖಜನಕವಾಗಿರುವುದೆಂದು ನಾನು ಜ್ಞಾಪಿಸಿಕೊಳ್ಳುವನಾಗುತ್ತೇನೆ” ಎಂದು ತನಗೆ ತಾನೇ ಹೇಳಿಕೊಳ್ಳುವನು. ಕಾಮವು ಜ್ಞಾನವನ್ನಾಳುವಂತೆ ಬಿಡದೆ, ಜ್ಞಾನವು ಕಾಮವನ್ನಡಗಿಸುವಂತೆ ಮಾಡಿಕೊಳ್ಳುವನು. ತುಂಟಗುದುರೆಗಳಂತೆ ಕಾಮಗಳು ತನ್ನನ್ನು ಹೊತ್ತುಕೊಂಡೇ ಹೋಗುತ್ತಿದ್ದುದನ್ನು ನಿಲ್ಲಿಸಿ, ಜ್ಞಾನವೆಂಬುದನ್ನು ಕ್ರಮಕ್ರಮವಾಗಿ ಲಗಾಮಿನಂತೆಯುಪಯೋಗಿಸಿ, ತನ್ನ ಕಾಮಗಳನ್ನು ತನ್ನ ಹಿಡಿತದಲ್ಲಿ ನಿಲ್ಲಿಸುವನು. ಲಭಿಸಿದಾಗ ತನಗೆ ಸುಖವನ್ನುಂಟುಮಾಡುವ ವಸ್ತುಗಳಲ್ಲಿ ಮಾತ್ರ ತನ್ನ ಕಾಮಗಳು ನೆಲೆಗೊಳ್ಳುವಂತೆ ಮಾಡುವವನಾಗುವನು.

ಬಾಲಜೀವಗಳು ತಮ್ಮ ಕಾಮಗಳನ್ನು ನಿರೋಧಿಸದೆ, ಅವೇ ತಮ್ಮನ್ನು ಎತ್ತಿಕೊಂಡು ಹೋಗುವಂತೆ ಬಿಟ್ಟು, ತಮಗೆ ತಾವೇ ಬಹು ದುಃಖವನ್ನು ತಂದುಕೊಳ್ಳುವುವು. ವೃದ್ಧಜೀವಗಳಾದರೋ ವಿವೇಕಿಗಳಾಗಿರು

ವುವು. ತಮ್ಮ ಪೂರ್ವಾನುಭವದಲ್ಲಿ ಕಾಣಬರುವಂತೆ ದುಃಖವನ್ನೇ ಉಂಟು ಮಾಡುವ ವಸ್ತುವಿಗಾಗಿ ತಮ್ಮ ಕಾಮವು ಓಡಿಹೋಗುವುದನ್ನು ಕಂಡ ಕೂಡಲೆ ಪೂರ್ವದ ಅಸುಖವನ್ನು ಜ್ಞಾಪಿಸಿಕೊಂಡು, ತಮ್ಮ ಜ್ಞಾನದ ಪ್ರಭಾವದಿಂದ ಕಾಮವನ್ನು ನಿರೋಧಿಸಿ ಹಿಂದಕ್ಕೆಳೆದುಕೊಳ್ಳುವುವು.

ಹೀಗಿರುವುದರಿಂದ ವಿದ್ಯಾರ್ಥಿಯು, ಇತರರೂ ತಾನೂ ಸುಖವಾಗಿರ ಬೇಕಾದರೆ, ತನ್ನ ಕಾಮಗಳನ್ನು ಜಾಗರೂಕತೆಯಿಂದ ನೋಡಿಕೊಳ್ಳುವ ವನಾಗಬೇಕು; ಯಾವಯಾವ ಪದಾರ್ಥಗಳು ಕೊನೆಗೆ ಸುಖವನ್ನು ತರು ವುವೋ, ಯಾವಯಾವ ಪದಾರ್ಥಗಳು ಕೊನೆಗೆ ಅಸುಖವನ್ನು ತರುವುವೊ, ಅದನ್ನು ಪರೀಕ್ಷೆಯಿಂದಲೂ ವ್ಯಾಸಂಗದಿಂದಲೂ ಕಂಡುಹಿಡಿಯುವವನಾಗ ಬೇಕು ; ಮತ್ತು ಉತ್ತರೋತ್ತರದಲ್ಲಿ ಸುಖದಾಯಕಗಳಾಗುವ ವಸ್ತುಗ ಳನ್ನು ಮಾತ್ರ ಕಾಮಿಸುವಂತೆ ತನ್ನ ಮನಸ್ಸನ್ನು ನಿರೋಧಿಸುವುದಕ್ಕೆ ತನ್ನ ಶಕ್ತಿಯನ್ನೆಲ್ಲಾ ವ್ಯಯಮಾಡುವವನಾಗಬೇಕು.

"ಯಾವ ಯೋಗಿಯು ಏಕಭಾವವನ್ನಿಟ್ಟುಕೊಂಡು, ಸರ್ವಭೂತ ಸ್ಥನಾದ ನನ್ನನ್ನು ಭಜಿಸುತ್ತಾನೆಯೋ, ಅಂತಹ ಯೋಗಿಯು, ಯಾವ ವೃತ್ತಿಯಲ್ಲಿದ್ದರೂ, ನನ್ನಲ್ಲಿಯೇ ಜೀವಿಸುವನು" ಎಂದು ಶ್ರೀ ಕೃಷ್ಣನು ಹೇಳುವನು. (ಭಗವದ್ಗೀತೆ. ಅ. ೬, ಶ್ಲೋ. ೩೧). ಜೀವನೋಪಾಯ ವೊಂದರಿಂದಲೇ ಯಾರೂ ಜನನ ಮರಣಗಳೆಂಬ ಪಾಶಗಳಿಂದ ವಿಮುಕ್ತ ರಾಗುವುದಿಲ್ಲ. ಇದನ್ನು ಮನಸ್ಸಿಗೆ ಚೆನ್ನಾಗಿ ತಂದುಕೊಳ್ಳಬೇಕು. ಕ್ಷತ್ರಿ ಯರಾಜನಾದ ಜನಕನೂ ವೈಶ್ಯವಾಣಿಜ್ಯನಾದ ತುಲಾಧರನೂ ಸಮನಾಗಿ ಮೋಕ್ಷವನ್ನೈದಿದರು. ಆ ಮೋಕ್ಷವನ್ನು ಅವರು ಕಾಡಿಗೆ ಓಡಿಹೋಗಿ ಪಡೆಯಲಿಲ್ಲ ; ಐಹಿಕ ವಸ್ತುಗಳನ್ನು ಕಾಮಿಸದಿರುವಂತೆ ತಮ್ಮ ಮನ ಸ್ಸನ್ನು ನಿರೋಧಿಸಿ ದಿವ್ಯ ಮೋಕ್ಷ ಪದವಿಯನ್ನು ಪಡೆಯುವರಾದರು.

ವಿದೇಹರಾಜ್ಯವನ್ನು ಪರಿಪಾಲಿಸುತ್ತಾ ಮಿಥಿಲಾಪಟ್ಟಣದಲ್ಲಿ ಜನಕ ಮಹಾರಾಜನಿದ್ದನು. ತಪಸ್ಸನ್ನು ಮಾಡಿ ಚಿತ್ತಶಾಂತಿಯನ್ನೈದಿದವನಾಗಿ, "ಮಿತಿಯಿಲ್ಲದ ಭಾಗ್ಯವು ನನಗಿದ್ದರೂ ನನಗೇನೂ ಇಲ್ಲ ; ಮಿಥಿಲಾಪ ಟ್ಟಣವೆಲ್ಲಾ ಬೆಂಕಿಯಿಂದ ಬೆಂದುಹೋದರೂ, ನನ್ನದಾದುದೇನೇನೂ ಹೋ ಗುವುದಿಲ್ಲ" ಎಂದುಸುರಿದನು. (ಮಹಾಭಾರತ. ಶಾಂತಿಪರ್ವ. ಅ. ೧೭೩).

ಮೇಲೆ ಹೇಳಿರುವ ಅರ್ಥವು ಬರುವ ಶ್ಲೋಕವನ್ನು ಹೇಳಿ, ಮಾಂಡವ್ಯ ಮುನಿಗಳಿಗೆ–"ಎಂತೆಂತಹ ಸಂಪತ್ತುಗಳಿದ್ದರೂ ಎಲ್ಲವೂ ಮಾನವನಿಗೆ ದುಃಖಕ್ಕೇಮೂಲ; ಕಾಮಸುಖವು, ಇಲ್ಲಿಯೇ ಆಗಲಿ ಸ್ವರ್ಗದಲ್ಲಿಯೇ ಆಗಲಿ, ನಿಷ್ಕಾಮದಿಂದ ಹುಟ್ಟುವ ಸುಖದಲ್ಲಿ ಬಂದು ವೀಸಪಾಲನ್ನೂ ಕೊಡಲಾರದು" ಎಂದು ಹೇಳುವನಾದನು. ಗೋವಿನೊಡನೆಯೇ ಗೋವಿನ ಕೊಂಬುಗಳೂ ಬಳೆವತೆರದಲ್ಲಿ, ಧನದೊಡನೆಯೇ ಧನದಾಶೆಯೂ ಬಳೆವುದು. ಧನದಿಂದ ಆವಾವ ಒಳ್ಳೆಯ ಕೆಲಸಗಳನ್ನು ಮಾಡಬಹುದೋ ಅಂತಹ ಕೆಲಸಗಳಿಗೇ ಧನವನ್ನುಪಯೋಗಿಸಬೇಕು. ಕಾಮವೆಂತೂ ದುಃಖಕರ. ಸಕಲ ಪ್ರಾಣಿಗಳನ್ನೂ ತನ್ನಂತೆಯೇ ಭಾವಿಸುತ್ತಾ ಜ್ಞಾನಿಯು ಚಿಂತಾರಹಿತನಾಗಿರುವನು. (ಮಹಾಭಾರತ. ಶಾಂತಿಪರ್ವ. ಅ. ೩೨೨). ಯಾಜ್ಞವಲ್ಕ್ಯ ಮಹರ್ಷಿಯುಪದೇಶದ ಪ್ರಭಾವದಿಂದ ಜನಕ ಮಹಾರಾಜನು ಮುಕ್ತನಾದನು. "ದುಃಖಾತೀತನಾಗಿಯೂ ಅಚ್ಯುತನಾಗಿಯೂ ದಿವ್ಯಮಂಗಳ ಮೂರ್ತಿಯಾಗಿಯೂ ಇರುವಾಬ್ರಹ್ಮನನ್ನೈದುವಂತೆ" ಆಯುಪದೇಶವು ಮಾಡಿತು. (ಮಹಾಭಾರತ. ಶಾಂತಿಪರ್ವ. ಅ. ೩೧೧–೩೧೯). ಈ ರೀತಿಯಲ್ಲಿ ಉಪದೇಶವನ್ನು ಹೊಂದಿ, ಆ ಜನಕನೂ ಕಾಲಕ್ರಮದಲ್ಲಿ ಗುರುವಾದನು. ವ್ಯಾಸಮಹರ್ಷಿಯೂ ಕೂಡ ತನ್ನ ಮಗನಾದ ಶುಕಮಹರ್ಷಿಯನ್ನು ಆತನ ಸನ್ನಿಧಿಗೆ ಮೋಕ್ಷಧರ್ಮವನ್ನು ತಿಳಿಯಲು ಕಳುಹಿಸಿದನು. (ಮಹಾಭಾರತ ಶಾಂತಿಪರ್ವ. ಅ. ೩೨೬–೩೨೮).

ಜಾಜಲಿಯೆಂಬ ಋಷಿಯು ಘೋರ ತಪಸ್ಸನ್ನು ಮಾಡಿ ಗರ್ವಪೂರಿತನಾದನು. "ಯಾರುತಾನೇ ವಿಶಾಲವಾದೀ ಸಾಗರದಲ್ಲಿಯೇ ಆಗಲಿ ಭೂಮಂಡಲದಲ್ಲಿಯೇ ಆಗಲಿ, ನನಗೆ ಸಮರು?" ಎಂದುಕೊಂಡನು. "ಅಂತುಸುರಲ್ವೇಡ. ಕೊಳ್ಳುವುದರಲ್ಲಿಯೂ ಮಾರುವುದರಲ್ಲಿಯೂ ಹೊತ್ತನ್ನೆಲ್ಲಾ ಕಳೆಯುವ ತುಲಾಧರನೂ ಇಂತುಸುರನು; ಆತಂಗೆ ನೀನು ಸಾಟಿಯಲ್ಲ" ಎಂದು ಆಕಾಶವಾಣಿಯಾಯಿತು. ಬ್ರಾಹ್ಮಣವರ್ಯನೂ ಋಷಿಶ್ರೇಷ್ಠನೂ ಆದ ತನ್ನಮೇಲೆ ವಾಣಿಜ್ಯ ವೃತ್ತಿಯವನೊಬ್ಬನು ಇರುವನೆಂಬುದನ್ನು ಕೇಳಿ ವಿಸ್ಮಿತನಾಗಿ, ತುಲಾಧರನನ್ನು ನೋಡಿ ತೊಡಕನ್ನು ಬಿಡಿಸಬೇಕೆಂದು ಹೊರಟನು. ಅಸಂತುಷ್ಟನಾಗಿ ಚಿಂತಿಸುತ್ತಾ ವಾರಾಣಸಿ

ಪಟ್ಟಣವನ್ನು ಸೇರಿ, ಬಂದವರಿಗೆಲ್ಲಾ ಬೇಕಬೇಕಾದ ಪದಾರ್ಥಗಳನ್ನು ಮಾರುತ್ತಾ ವಾಣಿಜ್ಯ ವೈಶ್ಯನಾಗಿದ್ದ ಆ ತುಲಾಧರನನ್ನು ಕಾಣುವನಾದನು. ತುಲಾಧರನು ಎದ್ದುನಿಂತು, ಬ್ರಾಹ್ಮಣನನ್ನು ಸಮುಚಿತ ರೀತಿಯಲ್ಲಿ ಸತ್ಕರಿಸಿ, ಆತನು ಮಾಡಿದ ಘೋರ ತಪಸ್ಸನ್ನೂ ಅದರಿಂದ ಆತನು ಗರ್ವಿತನಾಗಿರುವುದನ್ನೂ ತಿಳಿಸಿ,—“ ಎಲೈ ಬ್ರಾಹ್ಮಣನೇ, ಮಹಾ ಕೋಪಯುಕ್ತನಾಗಿ ನೀನು ಬಂದಿರುವೆ ; ನಿನಗೆ ನಾನೇನನ್ನು ಮಾಡಲಾದೀತು ? ” ಎಂದು ಕೇಳಿದನು. ಈ ಬಡಬಣಜಿಗನು ತನ್ನ ಪೂರ್ವ ವೃತ್ತಾಂತವನ್ನು ಅರಿತ ಬಗೆಯನ್ನು ಕಾಣದೆ, ಜಾಜಲಿ ಋಷಿಯು ಇನ್ನೂ ವಿಸ್ಮಿತನಾಗಿ,—“ ನಿನಗೀಯತಿಶಯ ಶಕ್ತಿಯು ಹೇಗೆ ಬಂತೋ ನನಗೆ ತಿಳಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು ” ಎಂದು ಆತುರದಿಂದ ಬೇಡಿದನು. ತುಲಾಧರನು, ಸರ್ವರಿಗೂ ತಿಳಿದ, ಆದರೆ ಬಹು ಸ್ವಲ್ಪ ಮಂದಿಯಿಂದಲೇ ಆಚರಿಸಲ್ಪಟ್ಟಿರುವ, ಸನಾತನ ಧರ್ಮವನ್ನು ಕುರಿತು ಮಾತಾಡತೊಡಗಿದನು. ಬಂದಕ್ಕೂ ನೋವನ್ನುಂಟುಮಾಡದೆ ಬಾಳಬೇಕೆಂತಲೂ, ನೋವನ್ನುಂಟುಮಾಡಬೇಕಾಗಿಯೇ ಬಂದಲ್ಲಿ ಕೂಡಿದ ಮಟ್ಟಿಗೂ ಅದನ್ನು ಕಡಮೆಮಾಡಬೇಕೆಂತಲೂ ತಾನೊಬ್ಬರಿಂದಲೂ ಸಾಲವನ್ನು ತೆಗೆಯುವುದಿಲ್ಲವೆಂತಲೂ, ಒಬ್ಬರ ಸಂಗಡಲೂ ಜಗಳವಾಡುವುದಿಲ್ಲವೆಂತಲೂ, ರಾಗದ್ವೇಷಗಳೆರಡನ್ನೂ ಬಿಟ್ಟಿರುವೆನೆಂತಲೂ, ಸ್ತುತಿಸದೆಯೂ ನಿಂದಿಸದೆಯೂ ಸರ್ವರನ್ನೂ ಸಮದೃಷ್ಟಿಯಿಂದ ನೋಡುವೆನೆಂತಲೂ, ಮಾನವನು ಹೆದರದೆಯೂ ಹೆದರಲ್ಪಡದೆಯೂ ಇರುವಲ್ಲಿ, ರಾಗವಿಲ್ಲದೆಯೂ ದ್ವೇಷವಿಲ್ಲದೆಯೂ ಇರುವಲ್ಲಿ, ಒಬ್ಬರಿಗೂ ಕೇಡನ್ನು ಮಾಡದಿರುವಲ್ಲಿ ಬ್ರಹ್ಮನನ್ನೈದುವನೆಂತಲೂ ತುಲಾಧರನು ಮಾತನಾಡಿದನು. ತಿರ್ಯಗ್ಜಂತುಗಳಿಗೂ ಮಾನವರಿಗೂ ಕ್ರೂರ ಶಿಕ್ಷೆಗಳಿಂದಾಗುವ ಹಿಂಸೆಯನ್ನು ಕುರಿತು, ಯಜ್ಞದ ರೀತಿಯನ್ನು ಕುರಿತು, ನಿಜವಾದ ಯಾತ್ರೆಯನ್ನು ಕುರಿತು ಆ ತುಲಾಧರನು ಪ್ರಸಂಗಿಸುತ್ತಾ, ಅಹಿಂಸಾಪ್ರವೃತ್ತಿಯಿಂದ ಮೋಕ್ಷವನ್ನು ಸಾಧಿಸಿಕೊಳ್ಳುವ ತೆರವನ್ನು ವಿಶದಪಡಿಸಿದನು.



## ಶ್ರುತ್ಯಾದಿ ವಚನಗಳು.

ಕಾಮಮಯಏವಾಽಯಂ ಪುರುಷಇತಿ ; ಸಯಥಾಕಾಮೋಭವತಿ, ತತ್ಕ್ರತುರ್ಭವತಿ ; ಯತ್ಕ್ರತುರ್ಭವತಿ, ತತ್ಕರ್ಮ ಕುರುತೇ ; ಯತ್ಕರ್ಮ ಕುರುತೇ ತದಭಿಸಂಪದ್ಯತೇ ॥

(ಬೃಹದಾರಣ್ಯಕೋಪನಿಷತ್ತು. ಅ. ೬, ಬ್ರಾ. ೪, ಋ. ೫).

"ಮಾನವನಾದರೊ ಕಾಮಮಯನು ; ಕಾಮವಿದ್ದಂತೆ ಧ್ಯಾನ (ಕ್ರತು) ವಿರುವುದು ; ಧ್ಯಾನವಿದ್ದಂತೆ ಕರ್ಮವಿರುವುದು ; ಕರ್ಮವಿದ್ದಂತೆ ಸಂಪಾದನೆ ಯಿರುವುದು."

ತದೇವ ಸಕ್ತಃ ಸಹ ಕರ್ಮಣೈತಿ ಲಿಂಗಂ ಮನೋ ಯತ್ರ ನಿಷಕ್ತಮಸ್ಯ ।

(ಬೃಹದಾರಣ್ಯಕೋಪನಿಷತ್ತು. ಅ. ೬, ಬ್ರಾ. ೪, ಋ. ೬).

"ಯಾವುದರಲ್ಲಿ ಮನಸ್ಸು ನಿಷಕ್ತವಾಗಿರುತ್ತದೆಯೋ, ಅದಕ್ಕೇ ಅದನ್ನು ಕಾಮಿಸುವಾತನು ತನ್ನ ಕರ್ಮಗಳಿಂದ ಹೋಗಿ ಸೇರುವನು"

ಅಥ ಖಲು ಕ್ರತುಮಯಃ ಪುರುಷೋ, ಯಥಾ ಕ್ರತು—
ರಸ್ಮಿಁಲ್ಲೋಕೇ ಪುರುಷೋ ಭವತಿ, ತಥೇತಃ ಪ್ರೇತ್ಯ ಭವತಿ ॥

(ಛಾಂದೋಗ್ಯೋಪನಿಷತ್ತು. ಪ್ರ. ೩, ಖಂ. ೧೪, ಋ. ೧).

"ನಿಜವಾಗಿಯೂ ಮಾನವನು ಚಿಂತಾಮಯನಾಗಿರುವನು. ಇಹ ಲೋಕದಲ್ಲಿ ಯಾವ ಬಗೆಯ ಚಿಂತೆಗಳನ್ನುಳ್ಳವನಾಗಿರುವನೋ, ಈ ಲೋಕವನ್ನು ಬಿಟ್ಟು ಹೋದಮೇಲೆಯೂ, ಅದೇ ಚಿಂತೆಗಳನ್ನುಳ್ಳವನಾಗುವನು."

ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।
ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸಬಧ್ಯತೇ ॥
ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।
ಕುರು ಕರ್ಮೈವ ತಸ್ಮಾತ್ ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥

(ಭಗವದ್ಗೀತೆ. ಅ. ೪, ಶ್ಲೋ. ೧೪, ೧೫).

"ಕರ್ಮಗಳು ನನ್ನನ್ನು ಮಲಿನಗೊಳಿಸುವುದಿಲ್ಲ, ಕರ್ಮಫಲದಲ್ಲಿ ನನಗೆ ಸ್ಪೃಹೆಯೂ ಇಲ್ಲ. ಈ ರೀತಿಯಲ್ಲಿ ನನ್ನನ್ನು ಯಾವನು ತಿಳಿಯುವನಾಗುವನೋ ಅವನು ಕರ್ಮಪಾಶಕ್ಕೊಳಗಾಗುವುದಿಲ್ಲ.

"ಹೀಗೆ ತಿಳಿದವರಾಗಿ ನಮ್ಮ ಪೂರ್ವಿಕರು ಮುಮುಕ್ಷುಗಳಾಗಿ ಕಾರ್ಯಗಳನ್ನೆಸಗಿದರು. ಆದುದರಿಂದ ಪೂರ್ವಕಾಲದಲ್ಲಿ ನಮ್ಮ ಪೂರ್ವಿಕರು ಮಾಡಿದಂತೆ ನೀನೂ ಕರ್ಮಗಳನ್ನೆಸಗುವನಾಗು."

ಯಸ್ಯ ಸರ್ವೇ ಸಮಾರಮ್ಭಾಃ ಕಾಮಸಂಕಲ್ಪವರ್ಜಿತಾಃ |
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಣ್ಡಿತಂ ಬುಧಾಃ ‖
ತ್ಯಕ್ತ್ವಾ ಕರ್ಮಫಲಾಸಙ್ಗಂ ನಿತ್ಯತೃಪ್ತೋ ನಿರಾಶ್ರಯಃ |
ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ ಕರೋತಿ ಸಃ ‖
ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ |
ಶಾರೀರಂ ಕೇವಲಂ ಕರ್ಮ ಕುರ್ವನ್ ನಾಽಽಪ್ನೋತಿ ಕಿಲ್ಬಿಷಮ್‖
ಯದೃಚ್ಛಾಲಾಭಸಂತುಷ್ಟೋ ದ್ವನ್ದ್ವಾತೀತೋ ವಿಮತ್ಸರಃ |
ಸಮಸ್ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ ‖
ಗತಸಙ್ಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ |
ಯಜ್ಞಾಯಾಽಽಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ‖
ಬ್ರಹ್ಮಾರ್ಪಣಂ ಬ್ರಹ್ಮಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ |
ಬ್ರಹ್ಮೈವ ತೇನ ಗನ್ತವ್ಯಂ ಬ್ರಹ್ಮಕರ್ಮಸಮಾಧಿನಾ ‖

(ಭಗವದ್ಗೀತೆ. ಅ. ೪, ಶ್ಲೋ. ೧೯—೨೪).

"ಯಾವನ ಕಾರ್ಯಗಳು ಕಾಮಸಂಕಲ್ಪವರ್ಜಿತಗಳಾಗಿರುತ್ತವೆಯೋ, ಯಾವನ ಕರ್ಮವು ಜ್ಞಾನಾಗ್ನಿ ದಗ್ಧವಾಗಿರುತ್ತದೆಯೋ ಅಂತಹನನ್ನು ಬುಧರು ಪಂಡಿತನೆಂದು ಕರೆದಿರುವರು.

"ಕರ್ಮಫಲಸಂಗವನ್ನು ಬಿಟ್ಟವನಾಗಿಯೂ ನಿತ್ಯ ತೃಪ್ತನಾಗಿಯೂ ನಿರಾಶ್ರಯನಾಗಿಯೂ ಇರುವವನು, ಕರ್ಮದಲ್ಲಿ ಪ್ರವರ್ತಿಸಿದ್ದರೂ, ಯಾವ ಕರ್ಮವನ್ನೂ ಮಾಡದವನಾಗಿರುತ್ತಾನೆ.

"ಆಶಾರಹಿತನಾಗಿಯೂ, ಸ್ವಾಯತ್ತ ಚಿತ್ತನಾಗಿಯೂ, ಚಿತ್ತದಲ್ಲಿ ಆತ್ಮನನ್ನುಳ್ಳವನಾಗಿಯೂ ಆಗಿ, ಯಾವುದರಲ್ಲಿಯೂ ಅಭಿಮಾನವನ್ನಿಟ್ಟುಕೊಳ್ಳದಾತನು ಶಾರೀರ ಕರ್ಮಗಳನ್ನೆಸಗಿದರೂ ಕಿಲ್ಬಿಷ ರಹಿತನಾಗಿಯೇ ಇರುವನು.

"ತನಗೆ ತಾನೇ ದೊರೆತ ಲಾಭದಿಂದಲೇ ಸಂತುಷ್ಟನಾಗುವ, ಸುಖ ದುಃಖಗಳ ಹೊರಗಿರುವ, ವಿಮತ್ಸರನಾದ, ಸಿದ್ಧಿಯಲ್ಲಿಯೂ ಅಸಿದ್ಧಿಯಲ್ಲಿಯೂ ಸಮಭಾವನೆಯುಳ್ಳ ಪುರುಷನು ಕರ್ಮಗಳನ್ನೆಸಗಿದರೂ ಕರ್ಮಬಂಧಕ್ಕೊಳಗಾಗನು.

"ಸಂಗವನ್ನು ಬಿಟ್ಟವನ, ಮುಕ್ತನ, ಜ್ಞಾನದಲ್ಲಿಯೇ ತನ್ನ ಧ್ಯಾನಗಳನ್ನಿಟ್ಟಿರುವವನ, ಯಜ್ಞಕ್ಕಾಗಿಯೇ ಕಾರ್ಯಗಳನ್ನೆಸಗುವವನ ಕರ್ಮವೆಲ್ಲವೂ ಲಯವಾಗಿ ಹೋಗುವುದು.

"ಬ್ರಹ್ಮಹವಿಸ್ಸು ಬ್ರಹ್ಮಾಗ್ನಿಯಲ್ಲಿ ಬಹ್ಮಾರ್ಪಣವಾಗಿ ಬ್ರಹ್ಮನಿಂದ ಆಹುತಿ ಮಾಡಲ್ಪಡುವುದು ; ಬ್ರಹ್ಮನಲ್ಲಿಯೇ ಚಿತ್ತವನ್ನಿಟ್ಟು ಕರ್ಮಗಳನ್ನೆಸಗುವವನು ಬ್ರಹ್ಮನನ್ನೇ ಯೈದುವನು."

ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾಯೇಽಸ್ಯ ಹೃದಿ ಶ್ರಿತಾಃ |
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ||

(ಕಠೋಪನಿಷತ್ತು. II, ವಲ್ಲೀ. ೬, ಋ. ೧೪).

"ಹೃದಯದಲ್ಲಿ ಅಡಗಿರುವ ಕಾಮಗಳೆಲ್ಲಾ ಸಡಿಲವಾದಾಗ ಮರ್ತ್ಯನು ಅಮರ್ತ್ಯನಾಗುವನು, ಇಲ್ಲಿಯೇ ಬ್ರಹ್ಮವನ್ನನುಭವಿಸುವನು."

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು |
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ||
ಇನ್ದ್ರಿಯಾಣಿ ಹಯಾನಾಹುಃ ವಿಷಯಾಂಸ್ತೇಷು ಗೋಚರಾನ್ |
ಆತ್ಮೇನ್ದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ||
ಯಸ್ತ್ವವಿಜ್ಞಾನವಾನ್ ಭವತ್ಯಯುಕ್ತೇನ ಮನಸಾ ಸದಾ |
ತಸ್ಯೇನ್ದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾಇವ ಸಾರಥೇಃ ||
ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸದಾ |
ತಸ್ಯೇನ್ದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ||
ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಸ್ಸದಾಽಶುಚಿಃ |
ನ ಸತತ್ಪದಮಾಪ್ನೋತಿ ಸಂಸಾರಂಚಾಽಧಿಗಚ್ಛತಿ ||

(ಕಠೋಪನಿಷತ್ತು. I. ವಲ್ಲಿ ೩, ಋ. ೩—೭).

"ಆತ್ಮನನ್ನು ರಥಿಕನನ್ನಾಗಿ, ಶರೀರವನ್ನು ರಥವನ್ನಾಗಿ ತಿಳಿ; ಬುದ್ಧಿಯನ್ನು ಸಾರಥಿಯನ್ನಾಗಿ, ಮನಸ್ಸನ್ನು ಪ್ರಗ್ರಹವನ್ನಾಗಿ ತಿಳಿ; ಇಂದ್ರಿಯಗಳನ್ನು ಹಯವೆನ್ನುವರು; ವಿಷಯಗಳನ್ನು ಅವುಗಳ ಅಡುಂಬೊಲವೆನ್ನುತ್ತಾರೆ; ಆತ್ಮನು ಇಂದ್ರಿಯಗಳೊಡನೆಯೂ ಮನಸ್ಸಿನೊಡನೆಯೂ ಕೂಡಿದವನಾಗಿ ಅನುಭವಿಸುವಾತನಾಗಿರುವನು; ಇಂತು ಪ್ರಾಜ್ಞರು ನುಡಿವರು. ಮನಸ್ಸನ್ನು ಸ್ವೇಚ್ಛಾ ವಿಹಾರಕ್ಕೆ ಬಿಟ್ಟು ಅವಿಜ್ಞಾನಿಯಾಗಿ ಯಾವನಿರುವನೋ ಅವನ ಇಂದ್ರಿಯಗಳು, ಸಾರಥಿಯ ದುಷ್ಟಾಶ್ವಗಳಂತೆ ಅವಶವರ್ತಿಗಳಾಗಿರುವುವು. ಮನಸ್ಸನ್ನು ಬಿಗಿ ಹಿಡಿದು ಜ್ಞಾನಿಯಾಗಿ ಯಾವನಿರುವನೋ ಅವನ ಇಂದ್ರಿಯಗಳು, ಸಾರಥಿಯ ಸದಶ್ವಗಳಂತೆ, ವಶವರ್ತಿಗಳಾಗಿರುವುವು. ಅಜ್ಞಾನಿಯಾಗಿಯೂ ಚಿಂತೆಯಿಲ್ಲದವನಾಗಿಯೂ, ಅಶುಚಿಯಾಗಿಯೂ ಯಾವನಿರುವನೋ ಅವನು ತತ್ವಪದವನ್ನು ಹೊಂದದೆ ಸಂಸಾರಕ್ಕೇ ಮತ್ತೊಮ್ಮೆ ಬೀಳುವನು."

---

ಇದು ಸನಾತನ ಧರ್ಮದೀಪಿಕೆಯಲ್ಲಿ ತತ್ವಪ್ರಕಾಶಿಕೆಯೆಂಬ ಪ್ರಥಮ ಭಾಗದಲ್ಲಿ ಕರ್ಮವಿಚಾರವೆಂಬ ಹೆಸರಿನ ಚತುರ್ಥಾಧ್ಯಾಯ.



# ಪ್ರಥಮ ಭಾಗ.

## ಪಂಚಮಾಧ್ಯಾಯ.

### ಯಜ್ಞ.



ಬಲಿಯನ್ನು ಕೊಡುವುದು ಕರ್ತವ್ಯವೆಂಬ ಭಾವವು ಹಿಂದೂ ದೇಶದಲ್ಲಿ ಸರ್ವರಿಗೂ ವಿದಿತವಾಗಿಯೇ ಇದೆ; ಆದರೆ ವಿದ್ಯಾರ್ಥಿಯು ಬಲಿ ಅಥವಾ ಯಜ್ಞ ಎಂಬುದರ ಜೀವಾಳವನ್ನು ಗ್ರಹಿಸುವುದು ಅವಶ್ಯಕವಾಗಿದೆ. ಪರಹಿತಾರ್ಥಕ್ಕಾಗಿ ತನಗೆತಾನೆ ಬಲಿಯಾಗುವುದು ಇದರ ಮುಖ್ಯತತ್ವ. ಕೊಟ್ಟಕೊನೆಗೆ ಮಾನವನು ಪರಹಿತಾರ್ಥಕ್ಕಾಗಿ ಆತ್ಮಾರ್ಪಣ ಮಾಡುವುದನ್ನು ಕಲಿಯುವುದಕ್ಕಾಗಿ, ತಾನಲ್ಲದ ಇತರ ಪದಾರ್ಥಗಳನ್ನು ಮೊದಲು ಮೊದಲಲ್ಲಿ ಬಲಿಯಾಗಿ ಕೊಡಬೇಕೆಂದು ವಿಧಾಯಕವಾಗಿದೆ.

ಜಗತ್ಸೃಷ್ಟಿಯೂ ಒಂದು ಯಜ್ಞವಾಗಿರುವುದನ್ನು ಮೊಟ್ಟಮೊದಲು ಗ್ರಹಿಸಬೇಕು, ಜಗತ್ತನ್ನು ವ್ಯಕ್ತಾವಸ್ಥೆಗೆ ತರುವುದಕ್ಕಾಗಿ ಈಶ್ವರನು ಉಪಾಧಿಯೆಂಬ ಸೆರೆಗೆ ಬಿದ್ದನು, ಪ್ರಕೃತಿಪರಿಚ್ಛಿನ್ನನಾದನು. ಶ್ರುತಿಯೂ ಸ್ಮೃತಿಯೂ ಸಮವಾಗಿ ಈ ತತ್ವವನ್ನು ಘೋಷಿಸುತ್ತಲಿದೆ. ಋಗ್ವೇದ ಪುರುಷಸೂಕ್ತವನ್ನು ನೋಡಬಹುದು. ಭಗವದ್ಗೀತೆಯ ಎಂಟನೆಯ ಅಧ್ಯಾಯದಲ್ಲಿ ಮೂರನೆಯ ಶ್ಲೋಕದಲ್ಲಿ ಶ್ರೀಕೃಷ್ಣನು ಭೂತ ಸಮುದ್ಭವಕ್ಕೆ ಯಜ್ಞವೇ ಮೂಲವೆಂಬುದನ್ನು ಸೂಚಿಸಿರುವನು. ಪ್ರಕೃತ್ಯನುಪ್ರವೇಶಕ್ಕೆ "ಮರಣ" (ಯಜ್ಞ) ಎಂಬುದು ಪಾರಿಭಾಷಿಕ ಶಬ್ದವಾಗಿರು

ವುದು. ತನ್ನ ಅಂಶಗಳಾದ ಜೀವಗಳನ್ನು ಬೇರೆಬೇರೆಯಾಗಿ ವ್ಯಕ್ತಾವಸ್ಥೆಗೆ ತರುವುದಕ್ಕೂ, ತನ್ನ ಶಕ್ತಿಗಳು ಅನಂತಾನಂತರೂಪಗಳಲ್ಲಿ ಪ್ರಕೃತಿಯಲ್ಲಿ ಬಳೆದು ವ್ಯಕ್ತಗಳಾಗುವುದಕ್ಕೂ ಈಶ್ವರನು ತನಗೆ ತಾನೇ ಬಲಿಯಾದನು. ಇದೇ ಪ್ರಪ್ರಥಮದ ಯಜ್ಞ ; ಮತ್ತು ಇದೇ ಸದ್ಧರ್ಮಕ್ಕೆಲ್ಲಾ ಆಧಾರವಾಗಿದೆ. ಯಜ್ಞವೆಂಬುದರ ಅರ್ಥವನ್ನೂ ಇದು ತಿಳಿಸುವುದು. ಪರಹಿತಾರ್ಥಕ್ಕಾಗಿ ತನ್ನ ಪ್ರಾಣವನ್ನು ಬಸಿಯುವುದೇ ಯಜ್ಞ ; ಆತ್ಮಾರ್ಪಣವೇ ಯಜ್ಞ.

ಜೀವಗಳಿಗೆಲ್ಲಾ ಆತ್ಮಾರ್ಪಣವೇ ಜೀವನವಿಧಿ. “ಜೀವೋ ಜೀವಸ್ಯ ಜೀವನಂ” ಎಂದಿದೆ. ಅವುಗಳ ಬಳೆವಳಿಗೆಯ ಪ್ರಥಮಾವಸ್ಥೆಗಳಲ್ಲಿ ಆತ್ಮಾರ್ಪಣ ಮಾಡುವಂತೆ ಅವು ಬಲಾತ್ಕರಿಸಲ್ಪಡುವುವು. ಅವುಗಳಿಗೆ ತಿಳಿಯದೆಯೂ, ಅವುಗಳನುಮತಿಯಿಲ್ಲದೆಯೂ, ಬಲಾತ್ಕಾರದಿಂದಲೂ ಆ ಜೀವಗಳ ಕೋಶಗಳು ಒಡೆಯಲ್ಪಟ್ಟು ಶ್ರೇಷ್ಠತರರೂಪಗಳಿಗೆ ಒಯ್ಯಲ್ಪಡುವುವು. ಖನಿಜವರ್ಗದ ಜೀವಗಳು ತಮ್ಮ ತಮ್ಮ ಶರೀರಗಳನ್ನು ಒಡೆದು ಸಸ್ಯವರ್ಗದ ಪೋಷಣಾರ್ಥವಾಗಿ ಕೊಟ್ಟು, ಅಭಿವೃದ್ಧಿಯನ್ನು ಹೊಂದಿ, ಸಸ್ಯವರ್ಗದ ಶರೀರಗಳಲ್ಲಿ ಸೇರುವುದಕ್ಕೆ ಅರ್ಹಗಳಾಗುವುವು. ಸಸ್ಯವರ್ಗದ ಜೀವಗಳು ತಮ್ಮ ತಮ್ಮ ಶರೀರಗಳನ್ನು ಒಡೆದು ಪಶ್ವಾದಿವರ್ಗದ ಪೋಷಣೆಗೆ ಕೊಟ್ಟು, ಅಭಿವೃದ್ಧಿಯನ್ನು ಹೊಂದಿ, ಪಶ್ವಾದಿವರ್ಗದ ಶರೀರಗಳಲ್ಲಿ ಜೀವಿಸುವುದಕ್ಕೆ ಅರ್ಹಗಳಾಗುವುವು. ಪಶ್ವಾದಿವರ್ಗದ ಜೀವಗಳು ತಮ್ಮ ತಮ್ಮ ಶರೀರಗಳನ್ನು ಘಾತಮಾಡಿ ಇತರ ಪ್ರಾಣಿಗಳ, ಕಾಡುಮನುಷ್ಯರುಗಳ, ಮತ್ತು ಕೆಲವು ಬಗೆಯ ಮಾನವಕುಲದವರ ಪೋಷಣೆಗಾಗಿ ಅರ್ಪಿಸಿ, ಮಾನವ ಶರೀರಗಳಲ್ಲಿ ಬಾಳುವುದಕ್ಕೆ ಅರ್ಹಗಳಾಗುವುವು. ಮಾನವ ಕುಲದ ಜೀವಗಳೂ ಕೂಡ ತಮ್ಮ ತಮ್ಮ ಮಾನವ ಶರೀರಗಳನ್ನು ಘಾತಿಸಿ, ಮಾನವ ಮಾಂಸಾಹಾರಿಗಳಾದವರ ಪೋಷಣೆಯನ್ನು ಮಾಡುವುದಲ್ಲದೆ ಯುದ್ಧ ಮುಂತಾದುವುಗಳಲ್ಲಿ ಪರಹಿತಾರ್ಥಕ್ಕಾಗಿ ತಮ್ಮ ದೇಹಗಳನ್ನರ್ಪಿಸಿ, ಅಭಿವೃದ್ಧಿಯನ್ನು ಹೊಂದಿ, ಉತ್ತಮ ಕುಲಸಂಜಾತರಾಗಲು ಅರ್ಹರಾಗುವುವು.

ಈ ಸಂದರ್ಭಗಳಲ್ಲೆಲ್ಲಾ ಪರಹಿತಾರ್ಥಕ್ಕಾಗಿ ಆತ್ಮಾರ್ಪಣಮಾಡುವ ಕೆಲಸವು ಜೀವನನುಮತಿಯಿಲ್ಲದೆ ನಡೆಯುವುದು. ಯುಗಯುಗಾಂತರಗಳು ಕಳೆದ ಮೇಲೆ ಜೀವನು, ಶರೀರದಲ್ಲಿರುವಾಗಲೇ, ಈ ಸದ್ವಿಧಿಯ ಪೂರ್ಣವ್ಯಾಪ್ತಿಯನ್ನು ಕಾರಣಸಹಿತವಾಗಿ ಗ್ರಹಿಸುವವನಾಗಿ, ತನ್ನ ಸುತ್ತಮುತ್ತಲೂ ಇರುವವರ ಹಿತಾರ್ಥಕ್ಕಾಗಿ ತನ್ನುಪಾಧಿಗಳನ್ನು ಬುದ್ಧಿಪೂರ್ವಕವಾಗಿ ಬಲಿಕೊಡುವುದಕ್ಕೆ ಪ್ರಾರಂಭಿಸುವನು. ಇದೀಗ ಆತ್ಮಾರ್ಪಣೆ. ಜೀವನು ಈಶ್ವರಾಂಶದವನಾಗಿರುವನೆನ್ನುವುದಕ್ಕೂ, ಈಶ್ವರನ ಸ್ವಭಾವವು ಇವನಲ್ಲಿಯೂ ಉಂಟೆಂಬುವುದಕ್ಕೂ ಇದು ಸಾಕ್ಷಿಯಾಗಿದೆ.

ನಿರತಿಶಯವಾದ ಆತ್ಮಾರ್ಪಣವನ್ನು ತಿಳಿಸುವ ಪರಮಾಶ್ಚರ್ಯಕರವಾದೊಂದು ಕಥೆಯು ಮಹಾಭಾರತದಲ್ಲಿದೆ.

ದೇವತೆಗಳಿಗೆ ಅಧಿಪತಿಯಾದ ಇಂದ್ರನು ಅಸಾಧು ಕರ್ಮವೊಂದರಿಂದ ಮಹರ್ಷಿಯೊಬ್ಬನಿಗೆ ಕೋಪವು ಹುಟ್ಟುವಂತೆ ಮಾಡಿದನು. ಆ ಋಷಿಯ ಕೋಪದಿಂದ ವೃತ್ರಾಸುರನು ಹುಟ್ಟಿ, ದೈತ್ಯಸೇನೆಯನ್ನೊಡಗೊಂಡು ಬಂದು, ಇಂದ್ರನನ್ನೂ ಅವನ ಪಡೆಗಳನ್ನೂ ಯುದ್ಧದಲ್ಲಿ ಸೋಲಿಸಿ, ರಾಜಧಾನಿಯಾದ ಅಮರಾವತಿಯಿಂದ ಇಂದ್ರನನ್ನೋಡಿಸಿ, ಅವನಾಧಿಪತ್ಯವನ್ನು ತನ್ನ ವಶಮಾಡಿಕೊಂಡನು. ದೇವತೆಗಳು ದೇಶಭ್ರಷ್ಟರಾಗಿ ತಮ್ಮ ಇಂದ್ರನೊಡನೆ ಬಹುಕಾಲ ಅಲೆಯುತ್ತಿದ್ದರು ; ಮತ್ತು ತಮ್ಮ ರಾಜಧಾನಿಯನ್ನು ಪುನಃ ತಮ್ಮ ಸ್ವಾಧೀನ ಮಾಡಿಕೊಳ್ಳಬೇಕೆಂದು ಪದೇಪದೇ ಪ್ರಯತ್ನಪಟ್ಟರು ; ಆದರೆ ಮತ್ತು ಮತ್ತೂ ಸೋಲುತ್ತ ಬಂದರು. ಮಹರ್ಷಿಯಾದವನ ನ್ಯಾಯವಾದ ಕೋಪವು ಮತ್ತೊರ್ವ ಮಹರ್ಷಿಯು ಪರಮ ಕೃಪೆಯಿಂದ ಮನಃಪೂರ್ವಕವಾಗಿ ಮಾಡಿದ ಶರೀರಾರ್ಪಣೆಯಿಂದಲ್ಲದೆ ಮತ್ತಾವುದರಿಂದಲೂ ಉಪಶಮನವಾಗುವುದಿಲ್ಲವೆಂತಲೂ, ಪೂಜ್ಯನಾದ ಮಹರ್ಷಿಯೊಬ್ಬನು ತಾನಾಗಿಯೇ ಕೊಟ್ಟ ಮೂಳೆಗಳಿಂದ ಮಾಡಿದ ವಜ್ರಾಯುಧದಿಂದಲ್ಲದೆ ಮತ್ತಾವ ಆಯುಧದಿಂದಲೂ ವೃತ್ರಾಸುರನು ಪತನನಾಗುವುದಿಲ್ಲವೆಂತಲೂ, ಕೊನೆಗೆ ದೇವತೆಗಳು ತಿಳಿಯುವರಾದರು. ಆಗ ಅವರು ದಧೀಚಿಮಹರ್ಷಿಗಳ ಸನ್ನಿಧಿಗೆ ಕಾತರರಾಗಿ ಹೋಗಿ ತಮ್ಮ ಗೋಳುಗಳನ್ನೆಲ್ಲಾ ವಿವರವಾಗಿ ತಿಳಿಸಿದರು. ಆ ಋಷಿಗಳು ಕೃಪಾಪರಿಪೂರ್ಣರಾಗಿ—

"ನನ್ನ ಶರೀರವನ್ನು ನೀವು ಮನಸ್ಸು ಬಂದಂತೆ ಉಪಯೋಗಿಸಿಕೊಳ್ಳುವುದಕ್ಕಾಗಿ ನಾನು ಮನಃಪೂರ್ವಕವಾಗಿ ಕೊಡುವವನಾಗುತ್ತೇನೆ" ಎಂದಭಯವನ್ನಿತ್ತರು. ಆದರೆ ತಪಸ್ಸಿನಿಂದಲೂ ಪಾರಿಶುದ್ಧ್ಯದಿಂದಲೂ ದೇದೀಪ್ಯಮಾನವಾಗಿದ್ದ ಆ ದಿವ್ಯಶರೀರದ ಮೇಲೆ ತನ್ನ ಕೈಯನ್ನಿಟ್ಟು ನೋಯಿಸುವುದಕ್ಕೆ ದೇವಲೋಕ ಶಿಲ್ಪಿಯಾದ ವಿಶ್ವಕರ್ಮನು ಹಿಂದೆಗೆದನು. ಆಗ ದಧೀಚಿಮಹರ್ಷಿಗಳು ಮಂದಸ್ಮಿತವದನರಾಗಿ—"ಈ ಶರೀರಕ್ಕೆ ಲವಣ ಲೇಪನವನ್ನು ಮಾಡಿ, ಗೋವುಗಳ ಹಿಂಡೊಂದನ್ನು ತನ್ನಿರಿ; ಅವು ಲವಣದ ಜತೆಯಲ್ಲಿ ನನ್ನ ಮಾಂಸವನ್ನೂ ನೆಕ್ಕಿಕೊಳ್ಳುವುವು; ಮೂಳೆಗಳು ಮಾತ್ರ ಉಳಿಯುವುವು; ನಿಮಗೆ ನನ್ನ ಮೂಳೆಗಳು ಮಾತ್ರವೇ ಬೇಕಾಗಿರುವುದರಿಂದ ನೀವು ಹೀಗೆ ಮಾಡಿರಿ; ಈ ಶರೀರವಲ್ಲೊಂದು ಭಾಗವೂ ವ್ಯರ್ಥವಾಗದಿರುವುದು" ಎಂದರು. ಹಾಗೆಯೇ ದೇವತೆಗಳು ಮಾಡಿದರು. ಈ ಪರಮಾಶ್ಚರ್ಯಕರವಾದ ಯಜ್ಞದಿಂದ ಅದೊಂದು ಮಹಾಶಕ್ತಿಯು ಹುಟ್ಟಿ, ಅದರಿಂದ ವೃತ್ರಾಸುರನು ಹತನಾಗಿ ಬಿದ್ದನು.

ಜೀವನು ಮಹರ್ಷಿಗಳ ತತ್ತ್ವಬೋಧೆಯ ಪ್ರಭಾವದಿಂದ ಆತ್ಮಾರ್ಪಣದವರೆಗೂ ಒಯ್ಯಲ್ಪಡುವನು. ಉತ್ತರೋತ್ತರದಲ್ಲಿ ಲಭಿಸುವ ಶುಭಕ್ಕಾಗಿ ತನ್ನಲ್ಲಿರುವ ವಸ್ತುಗಳನ್ನು ಬಲಿಕೊಡಬೇಕೆಂದು ಈ ಮಹರ್ಷಿಗಳುಸುರುವರು. ಮಾನವನು ಪರರಿಗಾಗಿ ತನ್ನಲ್ಲಿರುವುದನ್ನು ವ್ಯಯಮಾಡಿದಾಗ, ಆತನ ದಾನಗಳು ಉತ್ತರೋತ್ತರದಲ್ಲಿ ವೃದ್ಧಿಯಾಗಿ ಆತನಿಗೇ ಹಿಂದಿರುಗಿ ಬರುವುದೆಂದು ಅವರು ತೋರಿಸುವರು. ಬಹಿಶ್ಚರಪ್ರಾಣಗಳೆಂಬದಾಗಿ ತಾನು ಭಾವಿಸುವ ತನ್ನ ಆಸ್ತಿಗಳನ್ನು ಮಾನವನು ದಾನ ಮಾಡುವುದಾದರೆ, ಈ ತ್ಯಾಗದಿಂದ ಉತ್ತರೋತ್ತರದಲ್ಲಿ ಆತನಿಗೆ ಆಸ್ತಿಗಳು ಹೆಚ್ಚಾಗಿ ಲಭಿಸುವುವೆಂದು ನಿಷ್ಕರ್ಷೆಯಾಗಿ ಹೇಳುವರು. ಮರಣಾನಂತರದಲ್ಲಿ ಸ್ವರ್ಗದಲ್ಲಿ ಅತಿಶಯ ಸುಖಗಳನ್ನುಂಟುಮಾಡಿಕೊಳ್ಳುವುದಕ್ಕಾಗಿ ಐಹಿಕ ಸುಖಗಳನ್ನು ತ್ಯಾಗಮಾಡಿ ಯಜ್ಞವನ್ನು ಮಾಡಬೇಕೆಂದು ಆಮೇಲೆ ಮಾನವನಿಗೆ ಬೋಧಿಸುವರಾದರು. ಈ ರೀತಿಯಲ್ಲಿ ಯಜ್ಞವನ್ನಾಚರಿಸುವುದು ಅವನಿಗೆ ಬಳಿಕೆಯಾಯಿತು. ಫಲಾಪೇಕ್ಷೆಯಿಂದ ತನ್ನ ಪದಾರ್ಥಗಳನ್ನು ದಾನಯಜ್ಞಮಾಡುವುದರ ಮೂಲಕವಾಗಿ ಮಾನವನು ಆತ್ಮಾ

ರ್ಪಣ ರೀತಿಯನ್ನು ಕಂಡು, ಪರಹಿತೋದ್ಯೋಗದ ಸಂತೋಷವೇ ತನಗೆ ಸಾಕಾದ ಬಹುಮಾನವಾಗಿರಬೇಕೆಂಬುದನ್ನು ತಿಳಿದು, ಪರಹಿತಾರ್ಥಕ್ಕಾಗಿ ಆತ್ಮಾರ್ಪಣ ಮಾಡುವುದೇ ತನ್ನ ಕರ್ತವ್ಯವೆಂಬುದನ್ನು ಗ್ರಹಿಸಲು ಸಮರ್ಥನಾಗುತ್ತಾ ಬಂದನು.

ಮಾನವನು ಒಂಟಿಯಾಗಿ, ಇತರ ಚರಾಚರ ಪ್ರಾಣಿಗಳಿಗೆ ಸಂಬಂಧವಿಲ್ಲದವನಾಗಿಲ್ಲವೆಂಬುದನ್ನೂ, ಚರಾಚರ ಪ್ರಾಣಿಗಳೆಲ್ಲವೂ ಪರಸ್ಪರಾಶ್ರಯಗಳುಳ್ಳವುಗಳು ಮತ್ತು ಈ ಪರಸ್ಪರಾಶ್ರಯ ಭಾವವನ್ನು ಗ್ರಹಿಸಿದ ಹೊರತು ಶಾಶ್ವತವಾದ ಏಳಿಗೆಯನ್ನು ಹೊಂದಲಾರನೆಂಬುದನ್ನೂ, ಮಾನವನಾದವನು ಜಗತ್ತಿಗೆಲ್ಲಾ ಸಂಬಂಧಪಟ್ಟಿರುವನೆಂಬುದನ್ನೂ ಯಜ್ಞವಿಧಿಯು ಬೋಧಿಸುವುದು. ದೇವಯಜ್ಞ, ಋಷಿಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ—ಈ ಪಂಚಮಹಾಯಜ್ಞಗಳನ್ನೂ ಆರ್ಯಧರ್ಮಾವಲಂಬಿಯಾದ ದ್ವಿಜನು ಪ್ರತಿದಿನದಲ್ಲಿಯೂ ಮಾಡಲೇಬೇಕು ; ದೇವರ್ಷಿಪಿತೃ ಮಾನವ ಭೂತಗಳೆಲ್ಲರೂ ಇವನ ಹಿತಾರ್ಥಕ್ಕಾಗಿ ಆತ್ಮಾರ್ಪಣವನ್ನು ಮಾಡಿರುವುದರಿಂದ ಇವರಿಗೆಲ್ಲಾ ಇವನು ಸಾಲಗಾರನಾಗಿರುವನು ; ಪಂಚಮಹಾಯಜ್ಞದ ಮೂಲಕವಾಗಿ ಪ್ರತಿದಿನದಲ್ಲಿಯೂ ಈ ಸಾಲವನ್ನು ತೀರಿಸುವುದು ಅವಶ್ಯ ಕರ್ತವ್ಯವಾಗಿರುವುದೆಂಬುದನ್ನು ಋಷಿಗಳು ಕಲಿಸಿಕೊಟ್ಟರು. ಪರರಿಂದ ತಾನು ಬದುಕುವನಾದುದರಿಂದ ಪರರಿಗಾಗಿ ತಾನು ಬದುಕುವುದು ಮಾನವನ ಧರ್ಮವಾಗಿಯೇ ಇರುತ್ತದೆ. ಯಜ್ಞವು ನ್ಯಾಯವಾಗಿಯೂ ಇದೆ, ಕರ್ತವ್ಯವಾಗಿಯೂ ಇದೆ, ಸಾಲವಾಗಿಯೂ ಇದೆ. ಯಜ್ಞದಿಂದಲೇ ಮಾನವನು ಋಣಮುಕ್ತನಾಗಬೇಕು.

ಕೊಟ್ಟ ಕೊನೆಗೆ, ಜೀವನು ತನ್ನ ಜನ್ಮಮೂಲವನ್ನು ತಿಳಿದಹಾಗೆಲ್ಲಾ, ತನ್ನ ಸ್ವಭಾವವೂ ಈಶ್ವರನ ಸ್ವಭಾವವೂ ಒಂದೇ ಆಗಿರುವುದೆಂಬುದನ್ನು ಗ್ರಹಿಸಿದಹಾಗೆಲ್ಲಾ, ಆತ್ಮಾರ್ಪಣವು ಸುಖಕರವಾಗುವುದು ; ಸಂತುಷ್ಟತೆಯನ್ನು ಹುಟ್ಟಿಸುವುದು, ಮತ್ತು ಪರಹಿತಾರ್ಥಕಾಗಿ ತನ್ನ ಪ್ರಾಣವನ್ನು ಬಸಿಯುವುದು ,ತನ್ನ ಸಹಜವಾದ ದಿವ್ಯಶಕ್ತಿಯ ಸುಖದಾಯಕ ವ್ಯಾಯಾಮವಾಗಿಯೇ ಇದೆಯೆಂಬುದು ಆ ಜೀವನಿಗೆ ತೋರುತ್ತದೆ. ಕೊಂಚವಾಗಿ ಕೊಟ್ಟು ಹೆಚ್ಚಾಗಿ ಕೊಳ್ಳುವ ತನ್ನ ಪೂರ್ವನಿಯಮವನ್ನು

ತ್ಯಜಿಸಿ, ಹೆಚ್ಚಾಗಿ ಕೊಟ್ಟು ಕೊಂಚವಾಗಿ ಕೊಳ್ಳಬೇಕೆಂಬ ನಿಯಮವನ್ನು ಸ್ವೀಕಾರಮಾಡುವವನಾಗುತ್ತಾನೆ. ತನ್ನ ಉಪಾಧಿಗಳ ರಕ್ಷಣಾರ್ಥವಾಗಿ ಏನೇನನ್ನುಪಯೋಗಿಸುವನೋ ಅವುಗಳ ವಿಚಾರವನ್ನು ಚೆನ್ನಾಗಿ ಮಾಡುವುದಕ್ಕೆ ಪ್ರಾರಂಭಿಸಿ, ತನ್ನ ದೇಹಪೋಷಣೆಗಾಗಿ ತಾನುಪಯೋಗಿಸುವ ವಸ್ತುಗಳಿಗೆ ನೋವನ್ನುಂಟುಮಾಡುವುದನ್ನು ಸಾಧ್ಯವಾಗುವ ಮಟ್ಟಿಗೂ ಕಡಮೆಮಾಡುವುದಕ್ಕೆ ದಾರಿಗಳನ್ನು ಹುಡುಕುವವನಾಗುವನು. ತಿಳಿವುವುಳ್ಳ ಪ್ರಾಣಿಗಳಿಗೆ ತನ್ನ ಆಹಾರ ವಿಹಾರಗಳಲ್ಲಿ ಹಿಂಸೆಯನ್ನುಂಟು ಮಾಡುವುದನ್ನು ಬಿಟ್ಟು, ಸರ್ವಭೂತ ಹಿತಾರ್ಥಿಯಾಗುವುದಕ್ಕೆ ಸರ್ವಪ್ರಯತ್ನವನ್ನೂ ಮಾಡುವನು. ಪ್ರಾಣಿಪ್ರಾಣಿಗಳ ಕದನ, ಮಾನವ ಮಾನವರ ಜಗಳ, ಆಹಾರಕ್ಕಾಗಿಯೋ ವಿಹಾರಕ್ಕಾಗಿಯೋ ಮಾನವರಾಡುವ ಮೃಗದ ಬೇಟೆ—ಇವು ಸರ್ಗಕ್ರಮದ ಕೆಲಕೆಲವಂತಸ್ತುಗಳಲ್ಲಿ ಉಪಯುಕ್ತಗಳಾದ ಸಾಮರ್ಥ್ಯಗಳ ಮತ್ತು ಶಕ್ತಿಗಳ ಬಳೆವಳಿಗೆಗೆ ಅವಶ್ಯಕಗಳಾಗಿರುವುವಾದರೂ, ಮಾನವರು ಶ್ರೇಷ್ಠತರ ಸ್ಥಿತಿಗಳಿಗೆ ಬಂದಹಾಗೆಲ್ಲಾ ಇವುಗಳನ್ನು ಬಿಟ್ಟು ದುರ್ಬಲರಾದ ಬಾಲಜೀವಗಳನ್ನು ಹಿಂಸೆಗೆ ಗುರಿಮಾಡುವುದಕ್ಕೆ ಬದಲಾಗಿ ಸಲಹಬೇಕೆಂದು ತಿಳಿಯುತ್ತಾ, ಸಾಧುತ್ವವನ್ನೂ ಕಾರುಣ್ಯವನ್ನೂ ದಯಾದಾಕ್ಷಿಣ್ಯವನ್ನೂ ಕೃಷಿಮಾಡುತ್ತಲೇ ಇರಬೇಕೆಂಬುದನ್ನು ಮನಸ್ಸಿನಲ್ಲಿ ಗ್ರಹಿಸುವನಾಗುತ್ತಾನೆ.

ಬಾಲ ಜೀವಗಳೂ ತಾನೂ ಭಿನ್ನಗಳಲ್ಲವೆಂಬ ಭಾವದಲ್ಲಿ ಮಾನವನು ಬಾಳುವ ಕಾಲದಲ್ಲಿ, ಜ್ಯೇಷ್ಠ ಜೀವಗಳೂ ಜಗತ್ಪಿತೃವಾದ ಈಶ್ವರನೂ ತಾನೂ ಭಿನ್ನಗಳಲ್ಲವೆಂಬುದನ್ನು ಚನ್ನಚನ್ನಾಗಿ ಗ್ರಹಿಸಲು ಪ್ರಾರಂಭಿಸುವನು. ಸರ್ವಭೂತ ಹಿತಾರ್ಥಿಯಾಗಿ ಈಶ್ವರನು ಇರುವಂತೆಯೇ ಪರಹಿತಾರ್ಥಿಯಾಗಿ ತಾನೂ ಇರುವುದು ತನ್ನ ಸಹಜವಾದ ಕರ್ತವ್ಯವೆಂತಲೂ, ಈಶ್ವರನ ಮಹಿಮಾಪ್ರವಾಹಕ್ಕೆ ತಾನೂ ಬಂದು ಕಾಲುವೆಯಾಗುವುದರಲ್ಲಿಯೂ ಈಶ್ವರನ ಇಚ್ಛೆಯನ್ನು ನೆರವೇರಿಸುವ ಕಾರ್ಯಕ್ಕೆ ತಾನು ಶ್ರದ್ಧೆಯಿಂದ ಸಹಾಯ ಮಾಡುವುದರಲ್ಲಿಯೂ ತನಗೆ ನಿಜಸುಖವು ದೊರೆಯುವುದೆಂತಲೂ ತಿಳಿಯುವವನಾಗುತ್ತಾನೆ. ಹಾಗಾದಮೇಲೆ ಪ್ರತಿಕರ್ಮವೂ ಬ್ರಹ್ಮಯಜ್ಞವಾಗಿ ಪರಿಣಮಿಸುವುದು; ಕರ್ಮಬಂಧವು ಅತನಿ

ಗಿರುವುದಿಲ್ಲ. ಈ ರೀತಿಯಲ್ಲಿ ಯಜ್ಞಧರ್ಮವು ಮೋಕ್ಷಧರ್ಮವಾಗಿ ಪರಿಣಮಿಸುತ್ತದೆ.

## ಶ್ರುತ್ಯಾದಿ ವಚನಗಳು.

ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ |
ಅನೇನ ಪ್ರಸವಿಷ್ಯಧ್ವಂ ಏಷವೋಽಸ್ತ್ವಿಷ್ಟಕಾಮಧುಕ್ ||
ದೇವಾನ್ ಭಾವಯತಾಽನೇನ ತೇ ದೇವಾ ಭಾವಯನ್ತು ವಃ |
ಪರಸ್ಪರಂ ಭಾವಯನ್ತಃ ಶ್ರೇಯಃ ಪರಮವಾಪ್ಸ್ಯಥ ||
ಇಷ್ಟಾನ್ ಭೋಗಾನ್ ಹಿ ವೋ ದೇವಾದಾಸ್ಯನ್ತೇ ಯಜ್ಞಭಾವಿತಾಃ |
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನಏವ ಸಃ ||
ಯಜ್ಞಶಿಷ್ಟಾಶಿನಸ್ಸನ್ತೋ ಮುಚ್ಯನ್ತೇ ಸರ್ವಕಿಲ್ಬಿಷೈಃ |
ಭುಂಜತೇ ತೇತ್ವಘಂ ಪಾಪಾಃ ಯೇ ಪಚಂತ್ಯಾತ್ಮಕಾರಣಾತ್ ||
ಅನ್ನಾದ್ಭವನ್ತಿ ಭೂತಾನಿ ಪರ್ಜನ್ಯಾದನ್ನಸಂಭವಃ |
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ||
ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಽಕ್ಷರಸಮುದ್ಭವಮ್ |
ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ||

(ಭಗವದ್ಗೀತೆ. ಅ. ೩, ಶ್ಲೋ. ೧೦—೧೫).

"ಪೂರ್ವಕಾಲದಲ್ಲಿ ಪ್ರಜೆಗಳನ್ನೂ ಯಜ್ಞವನ್ನೂ ಒಟ್ಟಿಗೆ ಸೃಷ್ಟಿಸಿದವನಾಗಿ ಪ್ರಜಾಪತಿಯು—'ಇದರಿಂದ ಸಂತಾನವೃದ್ಧಿಯನ್ನು ಮಾಡಿಕೊಳ್ಳಿರಿ: ಇದು ನಿಮಗೆ ಕಾಮಧುಕ್ಕಾಗಿರಲಿ!' ಎಂದು ವಚಿಸಿದನು.

"ಇದರಿಂದ ನೀವು ದೇವತೆಗಳನ್ನು ಪೋಷಿಸಿರಿ ; ನಿಮ್ಮನ್ನೂ ದೇವತೆಗಳು ಪೋಷಿಸುವವರಾಗಲಿ ; ಪರಸ್ಪರ ಪೋಷಣೆಯಿಂದ ನೀವುಗಳು ಪರಮ ಶ್ರೇಯಸ್ಸನ್ನು ಹೊಂದುವವರಾಗುವಿರಿ.

"ಏಕೆಂದರೆ, ಯಜ್ಞದಿಂದ ತೃಪ್ತರಾಗಿ ದೇವತೆಗಳು ನಿಮ್ಮ ಅಭೀಷ್ಟಗಳಾದ ಭೋಗಗಳನ್ನು ಕೊಡುವಂತಾಗುವರು. ಅವರಿಂದ ಬಂದುದನ್ನು ತಿರುಗಿ ಅವರಿಗೆ ಕೊಡದೆಯೇ ಯಾವನು ಅವುಗಳನ್ನು ಅನುಭವಿಸುವನೋ ಅವನು ನಿಜವಾಗಿಯೂ ಚೋರನಾಗಿರುವನು.

"ಯಜ್ಞಶೇಷವನ್ನು ತಿನ್ನುವ ಸಾಧುಗಳು ಸರ್ವಕಿಲ್ಬಿಷವಿಮುಕ್ತರಾಗುವರು. ತಮತಮಗಾಗಿಯೇ ಅನ್ನವನ್ನು ಬೇಯಿಸಿಕೊಂಡು ತಿನ್ನುವ ಪಾಪಿಗಳು ಪಾಪವನ್ನೇ ತಿನ್ನುವರಾಗುವರು.

"ಅನ್ನದಿಂದ ಭೂತಗಳುದ್ಭವಿಸುವುವು ; ಪರ್ಜನ್ಯದಿಂದ ಅನ್ನದುತ್ಪತ್ತಿಯಾಗುವುದು ; ಯಜ್ಞದಿಂದ ಪರ್ಜನ್ಯವುಂಟಾಗುವುದು ; ಕರ್ಮದಿಂದ ಯಜ್ಞದ ಸಮುದ್ಭವವಾಗುವುದು ;

"ಕರ್ಮವು ಶರೀರದಿಂದುದ್ಭವಿಸುವುದೆಂದು ತಿಳಿ ; ಜೀವನಿಂದ ಶರೀರವು ಹುಟ್ಟುವುದು ; ಆದುದರಿಂದ ಸರ್ವಗತನಾದ ಬ್ರಹ್ಮನು ಯಜ್ಞದಲ್ಲಿ ನಿತ್ಯಪ್ರತಿಷ್ಠಿತನಾಗಿರುವನು."

ಕಾಂಕ್ಷನ್ತಃ ಕರ್ಮಣಾಂ ಸಿದ್ಧಿಂ ಯಜನ್ತ ಇಹ ದೇವತಾಃ |
ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ||
(ಭಗವದ್ಗೀತೆ. ಅ. ೪, ಶ್ಲೋ. ೧೨).

"ಇಹಲೋಕದಲ್ಲಿ ಕರ್ಮಸಿದ್ಧಿಯನ್ನು ಅಪೇಕ್ಷಿಸುವವರು ದೇವತೆಗಳಿಗೆ ಯಜ್ಞವನ್ನು ಮಾಡುವರು ; ಈ ಮಾನವ ಲೋಕದಲ್ಲಿ ಬೇಗನೆ ಕರ್ಮದಿಂದ ಸಿದ್ಧಿಯುದ್ಭವಿಸುವುದು."

ಆವಾಂ ರಾಜಾನಾವಧ್ವರೇ ವವೃತ್ಯಾಂ ಹವ್ಯೇಭಿರಿಂದ್ರಾವರುಣಾ ನಮೋಭಿಃ |
ಅಸ್ಮೇ ಇಂದ್ರಾವರುಣಾ ವಿಶ್ವವಾರಂ ರಯಿಂ ಧತ್ತಂ ವಸು ಮನ್ತಂ ಪುರುಕ್ಷುಂ |
ಇಯಮಿಂದ್ರಂ ವರುಣಮಷ್ಟ ಮೇ ಗೀಃ ಪ್ರಾವಂತ್ತೋಕೇ ತನಯೇ ತೂತುಜಾನಾ ||

(ಋಗ್ವೇದ. VII. lxxxiv. 1, 4, 5).

"ಓ ಇಂದ್ರವರುಣಗಳಿರಾ ! ರಾಜರುಗಳಾದ ನೀವು ನಮ್ಮ ಹವಿಸ್ಸಿನಿಂದಲೂ ಪೂಜೆಯಿಂದಲೂ ನಮ್ಮ ಯಜ್ಞದ ಕಡೆಗೆ ಅಭಿಮುಖರಾಗಿರಿ.

"ಓ ಇಂದ್ರವರುಣರುಗಳಿರಾ ! ನೀವುಗಳು ಹೆಚ್ಚಾದ ಧನವನ್ನೂ ಅನ್ನವನ್ನೂ ಆಶೀರ್ವಾದವನ್ನೂ ನಮ್ಮಗಳಿಗೆ ಕೊಡುವರಾಗಿರಿ.

"ಈ ನನ್ನ ಋಕ್ಕು ಇಂದ್ರ ವರುಣರನ್ನು ಸೇರಲಿ, ಮತ್ತು ತನ್ನ ಪ್ರಭಾವದಿಂದ ಪುತ್ರರನ್ನೂ ತನುಜರನ್ನೂ ತರುವುದಾಗಲಿ."

ಏತೇಷು ಯಶ್ಚರತೇ ಭ್ರಾಜಮಾನೇಷು |
ಯಥಾಕಾಲಂ ಚಾಹುತಯೋ ಹ್ಯಾದದಾಯನ್ |
ತಂ ನಯಂ ತ್ಯೇತಾಃ ಸೂರ್ಯಸ್ಯ ರಶ್ಮಯೋ |
ಯತ್ರ ದೇವಾನಾಂ ಪತಿರೇಕೋಧಿವಾಸಃ ||
ಏಹ್ಯೇಹೀತಿ ತಮಾಹುತಯಃ ಸುವರ್ಚಸಃ
ಸೂರ್ಯಸ್ಯ ರಶ್ಮಿಭಿರ್ಯಜಮಾನಂ ವಹನ್ತಿ |
ಪ್ರಿಯಾಂ ವಾಚಮಭಿವದಂತ್ಯೋಽರ್ಚಯಂತ್ಯಃ |
ಏಷವಃ ಪುಣ್ಯಃ ಸುಕೃತೋ ಬ್ರಹ್ಮಲೋಕಃ ||

(ಮುಂಡಕೋಪನಿಷತ್ತು. I. ii. 5,6)

"ಭ್ರಾಜಮಾನಗಳಾದ (ಈ ಸಪ್ತಜ್ವಾಲೆಗಳಿಗೆ) ಯಾವನು ಆಹುತಿಗಳನ್ನು ಯಥಾಕಾಲದಲ್ಲಿಯುವನೋ ಅವನನ್ನು ಈ ಸೂರ್ಯರಶ್ಮಿಗಳು ಏಕನಾಗಿಯೂ ದೇವತೆಗಳಿಗೆಲ್ಲಾ ಪತಿಯಾಗಿಯೂ ಇರುವವನ ಆವಾಸಸ್ಥಾನಕ್ಕೆ ಕರೆದುಕೊಂಡು ಹೋಗುವುವು. ಬಾ, ಬಾ ಎಂದು ಯಜಮಾನನನ್ನು ಕರೆಯುತ್ತಾ—'ಪುಣ್ಯಂಗಳಾದ ನಿನ್ನ ಸುಕೃತ ಬ್ರಹ್ಮಲೋಕಗಳು ಇವು' ಎಂಬ ಮಧುರ ವಚನಗಳನ್ನುಸುರುತ್ತಾ, ಆತನನ್ನು ಪೂಜಿಸುತ್ತಾ ಈ ಸುವರ್ಚಸ್ಸುಗಳಾದ ಆಹುತಿಗಳು ಒಯ್ಯುವುವು."

ಯಜ್ಞಶಿಷ್ಟಾಮೃತಭುಜೋ ಯಾನ್ತಿ ಬ್ರಹ್ಮ ಸನಾತನಮ್ |
ನಾಽಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃಕುರುಸತ್ತಮ

(ಭಗವದ್ಗೀತೆ. ಅ. ೪, ಶ್ಲೋ. ೩೧).

"ಯಜ್ಞಶಿಷ್ಟಾಮೃತಗಳನ್ನು ಭುಜಿಸುವವರು ಸನಾತನ ಬ್ರಹ್ಮನೆಡೆಯನ್ನೈದುವವರಾಗುವರು. ಅಯ್ಯಾ ಕುರುಕುಲವರ್ಯ, ಯಜ್ಞಮಾಡದವನಿಗೆ ಇಹಲೋಕವೇ ಇಲ್ಲದಿರುವಲ್ಲಿ ಪರಲೋಕವೆಂತುತಾನೇ ಇದ್ದೀತು?

ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ |
ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ||

(ಭಗವದ್ಗೀತೆ. ಅ. ೪, ಶ್ಲೋ. ೨೩).

"ಸಂಗವನ್ನು ಬಿಟ್ಟವನ, ಮುಕ್ತನ, ಜ್ಞಾನದಲ್ಲಿಯೇ ತನ್ನ ಚಿತ್ತವನ್ನಿಟ್ಟಿರುವವನ, ಯಜ್ಞಕ್ಕಾಗಿಯೇ ಕಾರ್ಯಗಳನ್ನೆಸಗುವವನ ಕರ್ಮವೆಲ್ಲವೂ ಲಯವಾಗಿಹೋಗುವುದು."

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥
ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬನ್ಧನೈಃ ॥

(ಭಗವದ್ಗೀತೆ. ಅ. ೯, ಶ್ಲೋ. ೨೭,೨೮).

"ನೀನೇನೇನನ್ನು ಮಾಡುವೆಯೋ, ನೀನೇನೇನನ್ನು ತಿನ್ನುವೆಯೋ, ನೀನೇನೇನು ಹವಿಸ್ಸುಗಳನ್ನೀಯುವೆಯೋ, ನೀನೇನೇನು ದಾನಗಳನ್ನು ಕೊಡುವೆಯೋ, ನೀನೇನೇನು ತಪಸ್ಸನ್ನೆಸಗುವೆಯೋ, ಓ ಕೌಂತೇಯನೇ, ಅವೆಲ್ಲವನ್ನೂ ನನಗೆ ಸಮರ್ಪಿಸು.

"ಶುಭಾಶುಭ ಫಲದಾಯಕಗಳಾದ ಕರ್ಮಗಳ ಬಂಧನದಿಂದ ನೀನು ಈರೀತಿಯಲ್ಲಿ ಮೋಕ್ಷವನ್ನು ಹೊಂದುವನಾಗುವೆ."



ಇದು ಸನಾತನ ಧರ್ಮದೀಪಿಕೆಯಲ್ಲಿ ತತ್ವಪ್ರಕಾಶಿಕೆಯೆಂಬ ಪ್ರಥಮಭಾಗದಲ್ಲಿ ಯಜ್ಞವಿಚಾರವೆಂಬ ಪಂಚಮಾಧ್ಯಾಯ.



# ಪ್ರಥಮ ಖಂಡ.

## ಷಷ್ಟಾಧ್ಯಾಯ.



### ದೃಶ್ಯಾದೃಶ್ಯ ಲೋಕವಿಚಾರ.



ನಮ್ಮ ಸುತ್ತಲೂ ಇರುವ, ನಾವು ನೋಡಲೂ ಕೇಳಲೂ ಮುಟ್ಟಲೂ ಆಸ್ವಾದಿಸಲೂ ಆಘ್ರಾಣಿಸಲೂ ಬಹುದಾದ, ಒಂದು ಲೋಕವನ್ನು ನಾವೆಲ್ಲರೂ ತಿಳಿದೇ ಇದೇವೆ. ಈ ಲೋಕದಲ್ಲಿ, ನಮ್ಮ ಇಂದ್ರಿಯಗಳಿಗಗೋಚರವಾಗಿರುವ, ನಮ್ಮ ಕಣ್ಣುಗಳು ನೋಡುವುದಕ್ಕಾಗದಷ್ಟು ಸಣ್ಣಗಿರುವ, ನಮ್ಮ ಇಂದ್ರಿಯಗಳು ಗ್ರಹಿಸಲಾರದಷ್ಟು ಸೂಕ್ಷ್ಮಗಳಾಗಿರುವ ಭಾಗಗಳು ಅನೇಕವಿರುವುವೆಂದು ನವೀನ ಶಾಸ್ತ್ರವು ಬೋಧಿಸಿದೆ. ಶಾಸ್ತ್ರವು ಉಂಟೆಂದು ಹೇಳುವ ಮತ್ತು ನಮ್ಮ ಇಂದ್ರಿಯಗ್ರಹಣಕ್ಕೆ ಮೀರಿದುವುಗಳಾಗಿಯೂ ಇರುವ ನಮ್ಮ ಭೂಲೋಕದ ಅಂಶಗಳು, ನಮ್ಮ ಇಂದ್ರಿಯಗಳಿಗೆ ಗ್ರಾಹ್ಯವಲ್ಲದಿದ್ದರೂ ಕೂಡ, ಪಾರ್ಥಿವಾಂಶಗಳಾಗಿಯೇ ಇವೆ; ಇವು ನಮ್ಮ ಭೂಲೋಕದ ಭಾಗಗಳು. ಪಂಚಭೂತಾತ್ಮಕಗಳಾದ ನಮ್ಮ ಲೋಕದ ಪದಾರ್ಥಗಳು ಘನರೂಪದುವುಗಳಾಗಿಯೂ ದ್ರವರೂಪದುವುಗಳಾಗಿಯೂ ವಾಯುರೂಪದುವುಗಳಾಗಿಯೂ ಆಕಾಶರೂಪದುವುಗಳಾಗಿಯೂ ಒಂದೇ ಬಗೆಯ ಅಣುಗಳಿಂದ ಕೂಡಿದುವುಗಳಾಗಿಯೂ ಇವೆ.

ಆದರೆ, ಮಾನವರು ಸತ್ತಮೇಲೆ ಈ ಲೋಕದಿಂದ ಬೇರೆ ಲೋಕಕ್ಕೆ ಹೋಗುವರೆಂತಲೂ, ಈ ಲೋಕವಲ್ಲದೆ ಬೇರೆ ಲೋಕಗಳೂ ನಮಗೆ ಅದೃಶ್ಯವಾಗಿ ಇವೆಯೆಂತಲೂ ನಾವುಗಳು ಕೇಳಿದೇವೆಯಷ್ಟೆ. ತ್ರಿಲೋಕ, ಲೋಕತ್ರಯ ಎಂಬುದನ್ನು ಗ್ರಂಥಗಳಲ್ಲಿ ನೋಡಿದೇವೆ

ಪ್ರತಿ ಮನುಷ್ಯನೂ ಈ ಲೋಕತ್ರಯದ ವಿಷಯವಾಗಿ ಅಲ್ಪಸ್ವಲ್ಪವನ್ನಾದರೂ ತಿಳಿದಿರಲೇಬೇಕು ; ಏಕೆಂದರೆ, ಈ ಲೋಕತ್ರಯದಲ್ಲಿ ಜೀವನು ಜನನ ಮರಣ ಚಕ್ರದಲ್ಲಿ ನಿಬದ್ಧನಾಗಿರುವನು, ಮತ್ತು ಈ ಲೋಕತ್ರಯದಲ್ಲಿಯೇ ಇವನ ಸಂಸಾರವು ನಡೆಯುತ್ತಿದೆ. ಲಕ್ಷೋಪಲಕ್ಷ ಮಾನವ ವರ್ಷಗಳು ಸೇರಿದರೆ ಬ್ರಹ್ಮದೇವರ ಒಂದುದಿನವಾಗುವುದೆಂದು ವಿಧಾಯಕವಾಗಿದೆ. ಬ್ರಹ್ಮದೇವರ ದಿವಸದ ಆದಿಯಲ್ಲಿ ಈ ಲೋಕತ್ರಯವೂ ಸೃಷ್ಟಿಯಾಗಿ ಆ ದಿವಸದಂತ್ಯದಲ್ಲಿ ಈ ಲೋಕತ್ರಯವೂ ಲಯವಾಗಿ ಹೋಗುವುದು. ಈ ಮೂರು ಲೋಕಗಳಲ್ಲದೆ ಇನ್ನೂ ನಾಲ್ಕು ಮಹಾಲೋಕಗಳು ಬ್ರಹ್ಮಾಂಡವೆಂಬುದರಲ್ಲಿ ಇರುವುವು ಆದರೆ ಈ ನಾಲ್ಕು ಮಹಾಲೋಕಗಳು ಬ್ರಹ್ಮನು ಬದುಕಿರುವವರೆಗೂ ಲಯವಾಗದೆ ಇರುವುವು. ಈ ನಾಲ್ಕು ಮಹಾಲೋಕಗಳ ವಿಚಾರವು ನಮಗೀಗ ಅವಶ್ಯಕವಾಗಿಲ್ಲ. ಲೋಕಗಳಲ್ಲಿ ಕೆಲವು ಉಪಲೋಕಗಳೂ ಇವೆ ; ಇವುಗಳನ್ನೂ ಲೋಕವೆಂದೇ ಕರೆಯುವರು. ಭುವರ್ಲೋಕದಲ್ಲಿ ಪ್ರೇತಲೋಕ, ಪಿತೃಲೋಕ ಎಂಬುವು ಉಂಟು. ಸುವರ್ಲೋಕದಲ್ಲಿ ಇಂದ್ರಲೋಕ ಸೂರ್ಯಲೋಕ ಎಂಬುವು ಇರುವುವು.

ನಮಗೆ ವಿಶೇಷವಾಗಿ ಸಂಬಂಧಪಟ್ಟಿರುವ ತ್ರಿಲೋಕಗಳು ಯಾವುವೆಂದರೆ:—

(೧) ಭೂರ್ಲೋಕ ಅಥವಾ ಪೃಥ್ವಿ.

(೨) ಭುವರ್ಲೋಕ. "ಭುವಃ" ಎಂದರೆ "ಆಗುತ್ತಿರುವ" ಎಂದರ್ಥ. ಇದು ಭೂರ್ಲೋಕಕ್ಕೂ ಸ್ವರ್ಗಲೋಕಕ್ಕೂ ಮಧ್ಯಗತವಾಗಿರುವುದು.

(೩) ಸುವರ್ಲೋಕವೆಂಬುದು ಸ್ವರ್ಗಲೋಕ.

ಭೂರ್ಲೋಕದಲ್ಲಿ ಕೆಲವು ಭಾಗಗಳು ದೃಶ್ಯವಾಗಿ, ಮತ್ತೆ ಕೆಲವು ಭಾಗಗಳು ಅದೃಶ್ಯವಾಗಿ ಇವೆ ; ಭುವಃ ಸುವಃ ಎಂಬ ಎರಡು ಲೋಕಗಳೂ ಅದೃಶ್ಯಲೋಕಗಳಾಗಿವೆ. ಭೂರ್ಲೋಕದ ಪದಾರ್ಥಗಳಲ್ಲಿ ಪೃಥ್ವೀತತ್ವವು ಪ್ರಧಾನವಾಗಿರುವುದು ; ಇವು ಏಳು ರೂಪಗಳಲ್ಲಿರುವುವು— ಘನ (solid), ದ್ರವ (liquid), ವಾಯು (gaseous), ತೈಜಸ (radiant), ಆಕಾಶ (etheric), ಪರಾಕಾಶ (super-etheric) ಮತ್ತು

ಅಣು (atomic). ಕೊನೆಯ ನಾಲ್ಕನ್ನು ಆಕಾಶ ರೂಪಗಳೆನ್ನುವುದೂ ಉಂಟು. ಭುವರ್ಲೋಕದಲ್ಲಿಯೂ ಇವುಗಳಿಗೆ ಸದೃಶಗಳಾದ ಸಪ್ತ ರೂಪಗಳಿರುವುವು, ಆದರೆ ಭುವರ್ಲೋಕದ ಪ್ರಧಾನತತ್ವ ಅಪ್ತತ್ವ. ಸ್ವರ್ಗಲೋಕದಲ್ಲಿಯೂ ಇದೇ ಬಗೆಯ ಸಪ್ತರೂಪಗಳಿರುವುವು, ಆದರೆ ಅಲ್ಲಿಯ ಪ್ರಧಾನತತ್ವ ಅಗ್ನಿತತ್ವ.

ಜೀವನಿಗೆ ಈ ಮೂರುಲೋಕಗಳಿಗನುಗುಣಗಳಾದ ಮೂರು ಕೋಶಗಳಿರುವುವು ; ಇವುಗಳ ಹೆಸರು ಅನ್ನಮಯ ಕೋಶ, ಪ್ರಾಣಮಯ ಕೋಶ, ಮನೋಮಯಕೋಶ. ನಾವು ತಿನ್ನುವ ಆಹಾರದಿಂದಾಗುವ ಅನ್ನ ಮಯಕೋಶವು ಪೃಥ್ವಿಯ ದೃಶ್ಯಭಾಗಕ್ಕನುಗುಣವಾಗಿರುವುದು, ಮತ್ತು ಘನ ದ್ರವ ವಾಯುರೂಪಗಳ ಪದಾರ್ಥಗಳಿಂದ ಕೂಡಿರುವುದು. ಪ್ರಾಣ ಮಯ ಕೋಶವು ಪೃಥ್ವಿಯ ಅದೃಶ್ಯಭಾಗಕ್ಕೆ ಅನುಗುಣವಾಗಿ ಆಕಾಶರೂಪಗಳ ಪದಾರ್ಥಗಳಿಂದ ಕೂಡಿರುತ್ತದೆ. ಪ್ರಾಣ ಎಂಬುದು ನಮ್ಮನ್ನು ಬದುಕಿಸಿರುವ ಶಕ್ತಿವಿಶೇಷವಾಗಿದೆ. ಈ ಪ್ರಾಣವೆಂಬುದರಲ್ಲಿ ಯೂರೋಪಿನ ಶಾಸ್ತ್ರವು ಹೇಳುವ ಓಜಸ್ಸಿನ (magnetic) ಮತ್ತು ವಿದ್ಯುತ್ತಿನ (electrical) ಶಕ್ತಿ ವಿಶೇಷಗಳು ಸೇರಿರುವುವಲ್ಲದೆ ಬೇರೆ ಶಕ್ತಿಗಳೂ ಸೇರಿವೆ. ಈ ಕೋಶಗಳೆರಡೂ ಭೂಲೋಕಕ್ಕೆ ಸಂಬಂಧಪಟ್ಟವುಗಳಾಗಿವೆ.

ಮನೋಮಯ ಕೋಶದಲ್ಲಿ ಎರಡುಭಾಗಗಳಿವೆ:—ಭುವರ್ಲೋಕಕ್ಕೆ ಸಂಬಂಧಪಟ್ಟು, ಕಾಮಗಳಿಗೆ ನೆಲೆಯಾಗಿ, ಸಾಂದ್ರವಾಗಿರುವ ಭಾಗವೊಂದು ; ಸುವರ್ಲೋಕಕ್ಕೆ ಸಂಬಂಧಪಟ್ಟು, ಧ್ಯಾನಾದಿ ಬುದ್ಧಿಕಾರ್ಯಗಳಿಗೂ ಪ್ರೇಮಾದಿ ವ್ಯಾಪಾರಗಳಿಗೂ ಕ್ಷೇತ್ರವಾಗಿ ವಿರಳರೂಪದಲ್ಲಿರುವ ಭಾಗವೊಂದು.

ಉದ್ದೇಶಾನುಗುಣವಾಗಿ ಈ ಕೋಶಗಳನ್ನು ವಿಂಗಡಿಸಿಕೊಂಡು ಈ ಕೋಶಗಳಿಗೆ ಬೇರೆಬೇರೆ ಹೆಸರುಗಳನ್ನು ಕೊಡುವುದೂ ಉಂಟು. ವಿದ್ಯಾರ್ಥಿಯು ಇದಕ್ಕಾಗಿ ಭಯಪಡಬೇಕಾಗಿಲ್ಲ ; ಏಕೆಂದರೆ, ವ್ಯಾಸಂಗವನ್ನು ಹೆಚ್ಚಿಸಿದಹಾಗೆಲ್ಲಾ ಜ್ಞಾನವೃದ್ಧಿಯ ಬಲದಿಂದ ಈ ಹೊಸ ಹೆಸರುಗಳು ಅವನಿಗೆ ಸುಬೋಧಗಳಾಗುವುವು. ಬಹಳ ವಾಡಿಕೆಯಲ್ಲಿರುವ ಮೂರೇ

ಮೂರು ಹೆಸರುಗಳನ್ನು ವಿಚಾರಮಾಡಿ ನೋಡೋಣ.

ಸ್ಥೂಲಶರೀರವೆಂಬುದು ಘನ ದ್ರವ ವಾಯುರೂಪಗಳ ಪದಾರ್ಥಗಳಿಂದ ರಚಿತವಾಗಿರುವ ಅನ್ನಮಯ ಕೋಶವಾಗಿಯೇ ಇದೆ. ಸೂಕ್ಷ್ಮ ಶರೀರವೆಂಬುದು ಪ್ರಾಣಮಯ ಮತ್ತು ಮನೋಮಯ ಎಂಬ ಕೋಶಗಳೆರಡನ್ನೂ ಒಳಕೊಂಡಿರುವುದಲ್ಲದೆ, ವಿಜ್ಞಾನಮಯ ಕೋಶವೆಂಬುದನ್ನೂ ಒಳಕೊಂಡಿದೆ. ಈ ವಿಜ್ಞಾನಮಯ ಕೋಶವು ಜೀವನನ್ನು ಮಹರ್ಲೋಕದೊಡನೆ ಸಂಬಂಧಿಸುವುದು. ಈ ಮಹರ್ಲೋಕವು ಲೋಕತ್ರಯದಿಂದಾಚೆ ಇರುವುದು. ಈ ಲೋಕಕ್ಕೂ ಜೀವನು ಯಾತ್ರೆಮಾಡುತ್ತಾನೆ ; ಆದರೆ ಈ ಲೋಕವು ಬ್ರಹ್ಮನದಿನದ ಅಂತ್ಯದಲ್ಲಿ ಲಯವನ್ನು ಹೊಂದುವುದಿಲ್ಲ ; ನಿವಾಸಕ್ಕೆ ಅಯೋಗ್ಯವಾಗುವುದು. ಸೂಕ್ಷ್ಮಶರೀರದ ಈ ಭಾಗವು ಜನನ ಮರಣಗಳಲ್ಲೆಲ್ಲಾ ಉಳಿಯುತ್ತಾ ಬಂದು ಅನ್ನಮಯ ಪ್ರಾಣಮಯ ಮನೋಮಯ ಕೋಶಗಳಿಗಿಂತ ಶಾಶ್ವತವಾಗಿರುತ್ತದೆ.

ಈ ವಿಭಾಗಗಳೆರಡನ್ನೂ ಅವುಗಳ ಲೋಕಗಳ ಸಂಬಂಧಗಳನ್ನೂ ಪಟ್ಟಿಯ ರೂಪದಲ್ಲಿ ತೋರಿಸಿದರೆ ಸುಲಭಗ್ರಾಹ್ಯವಾಗಬಹುದು:—

| ಶರೀರ. | ಲೋಕ. | ಕೋಶ. |
|---|---|---|
| ಸ್ಥೂಲ | ... ಭೂರ್ಲೋಕ | ... ಅನ್ನಮಯ. |
| ಸೂಕ್ಷ್ಮ | ... ಭೂರ್ಲೋಕ | ... ಪ್ರಾಣಮಯ. |
| ಸೂಕ್ಷ್ಮ (ತರ) | ... ಭುವರ್ಲೋಕ | ... ಮನೋಮಯ (ಸಾಂದ್ರ). |
| ಸೂಕ್ಷ್ಮ (ತಮ) | ... ಸ್ವರ್ಗಲೋಕ | ... ಮನೋಮಯ (ವಿರಳ). |

(ಇವು ಸತ್ತಾಗಲೋ ಸತ್ತಮೇಲೆಯೋ ಲಯವಾಗಿ ಪುನರ್ಜನ್ಮವಾದಾಗ ಹೊಸದಾಗಿಯಾಗುವುವು).

ಸೂಕ್ಷ್ಮ(ಉತ್ತಮ) ಕಾರಣ ... ಮಹರ್ಲೋಕ ... ವಿಜ್ಞಾನಮಯ.

(ಇದು ಸತ್ತಾಗಲೇಯಾಗಲಿ ಸತ್ತಮೇಲೆಯೇ ಆಗಲಿ ಲಯವಾಗುವುದೂ ಇಲ್ಲ ; ಪುನರ್ಜನ್ಮದಲ್ಲಿ ಹೊಸದಾಗುವುದೂ ಇಲ್ಲ).

ಸ್ಥೂಲಶರೀರದಲ್ಲಿ ಕೈಗಳು ಕಾಲುಗಳು ವಾಗಿಂದ್ರಿಯ ಜನನೇಂದ್ರಿಯ ವಿಸರ್ಜನೇಂದ್ರಿಯ—ಇವುಗಳೆಲ್ಲಾ ಇರುವುವು. ಇವುಗಳನ್ನು

ಕರ್ಮೇಂದ್ರಿಯ ಕರಣಗಳೆಂದು ಕರೆಯುವುದುಂಟು ; ಆದರೆ ನಿಜವಾದ ಕರ್ಮೇಂದ್ರಿಯಗಳು—ಅವಯವಗಳಿಂದ ಕರ್ಮಗಳನ್ನೆಸಗಿಸುವ ಚಕ್ರಗಳು —ಸೂಕ್ಷ್ಮ ಶರೀರದಲ್ಲಿವೆ. ಹೀಗಿರುವುದರಿಂದ ಸುಖದುಃಖಾದಿಗಳು ಚಕ್ರದಲ್ಲಿ ತೋರಿ, ಅವುಗಳ ಮೂಲಕವಾಗಿ ಅವಯವಗಳಲ್ಲಿ ಕಾಣಿಸಿಕೊಳ್ಳುವುವು ; ಸಿಟ್ಟಿನಲ್ಲಿ ಕೈಗಳು ಅದುರುವುವು, ಕಾಲುಗಳು ಬಡಿಯುವುವು, ಮಾತು ತೊದಲುವುದು ; ಇವೆಲ್ಲಾ ನಡೆಯುವುದೀರೀತಿಯಲ್ಲಿ. ಜ್ಞಾನೇಂದ್ರಿಯ ಚಕ್ರಗಳೂ ಸೂಕ್ಷ್ಮ ಶರೀರದಲ್ಲಿಯೇ ಇವೆ ; ಕಣ್ಣು, ಕಿವಿ, ನಾಲಗೆ, ಮೂಗು, ತ್ವಕ್ಕು—ಎಂಬುವುಗಳ ಕರಣಗಳು ಮಾತ್ರ ಸ್ಥೂಲಶರೀರದಲ್ಲಿವೆ.

ಮರಣ ಸಂಭವಿಸುವಾಗ ಏನಾಗುವುದೋ ಇನ್ನು ವಿಚಾರಮಾಡೋಣ. ಜೀವನು ಪ್ರಾಣಮಯ ಕೋಶದ ಮೂಲಕವಾಗಿ ಸೂಕ್ಷ್ಮ ಶರೀರವನ್ನು ಸ್ಥೂಲಶರೀರದಿಂದ ಬೇರೆಮಾಡಿ ಸೆಳೆದುಬಿಡುವನು. ಇದೇ ಮೊದಲಾಗುವ ಕೆಲಸ. ಸ್ಥೂಲಶರೀರವು ಪ್ರಾಣರಹಿತವಾಗಿ ಹೆಣವಾಗುವುದು,—ಎಂದರೆ ಆ ಶರೀರವನ್ನು ಒಟ್ಟಾಗಿ ಹಿಡಿದಿದ್ದ ಪ್ರಾಣವು ಹೊರಕ್ಕೆಳೆಯಲ್ಪಡುವುದು. ಹೆಣದಲ್ಲಿರುವ ಅಣುಕೋಶಗಳಲ್ಲಿ (Cells) ಬೇಕಾದಷ್ಟು ಜೀವವು ಇದ್ದೇ ಇರುವುದು ; ಆಳುತ್ತಿದ್ದ ಪ್ರಾಣವು ಹೊರಟು ಹೋದುದರಿಂದ ಅವುಗಳೆಲ್ಲವೂ ಛಿದ್ರಛಿದ್ರವಾಗಿಯೊಡೆದು ತಂತಮ್ಮ ಪರಿಣಾಮಗಳನ್ನು ಹೊಂದುವುವು. ಜೀವನು ಸೂಕ್ಷ್ಮ ಶರೀರದಲ್ಲಿರುವನು. ಬಹು ಶೀಘ್ರದಲ್ಲಿಯೇ ಪ್ರಾಣಮಯ ಕೋಶವನ್ನೂ ಒದರಿಬಿಡುವನು ; ಆಗ ಮನೋಮಯ ಕೋಶದ ಸಾಂದ್ರತರ ಭಾಗವನ್ನು ತನ್ನ ಹೊರಗಣ ಹೊದ್ದಿಕೆಯಾಗಿಟ್ಟುಕೊಂಡಿರುವನು. ಈ ರೀತಿಯಲ್ಲಿರುವಾಗ ಪ್ರೇತನೆಂದು ಕರೆಯಲ್ಪಟ್ಟು, ಪ್ರೇತಲೋಕವಾಸಿಯಾಗುವನು. ಭೂಲೋಕದಲ್ಲಿ ಬಹು ಸಾತ್ವಿಕನಾಗಿದ್ದ ಪಕ್ಷದಲ್ಲಿ, ಈ ಜೀವನು ಪ್ರೇತಲೋಕದಲ್ಲಿ ಸುಖವಾಗಿ ಸ್ವಪ್ನಾವಸ್ಥೆಯಲ್ಲಿ ಕಾಲವನ್ನು ಕಳೆಯುವನು ; ಹಾಗಿಲ್ಲದೆ ಅಸಾತ್ವಿಕನಾಗಿದ್ದ ಪಕ್ಷದಲ್ಲಿ, ಪ್ರೇತಲೋಕದಲ್ಲಿ ತನಗೆ ದೊರೆಯಲಾರದ ಐಹಿಕ ಸುಖಗಳನ್ನಪೇಕ್ಷಿಸುತ್ತಾ ಸಂಕಟಪಡುವವನಾಗುವನು. ಬೇಗನೆಯೋ, ನಿಧಾನವಾಗಿಯೋ, ಅವನ ಕಾಮದ ಬಲವು ಎಂತಿರುವು

ದೋ, ಅದು ಕ್ಷಯಿಸಿ ಹೋಗುವುದಕ್ಕೆಷ್ಟು ಕಾಲವು ಅವಶ್ಯಕವಾಗಿರುವುದೋ, ಅಷ್ಟು ಕಾಲವೂ ಅಲ್ಲಿ ಯಾತನೆಯನ್ನನುಭವಿಸಿದ ಮೇಲೆ, ಮನೋಮಯ ಕೋಶದ ಸಾಂದ್ರತಮ ಕವಚವು ಬಿದ್ದುಹೋಗುವುದು ; ಹೀಗಾದಮೇಲೆ ಪಿತೃವಾಗಿ ಪಿತೃಲೋಕಕ್ಕೆ ತೆರಳುವನು. ಆ ಪಿತೃಲೋಕದಲ್ಲಿ ತನ್ನ ಮನೋಮಯ ಕೋಶದಲ್ಲಿರುವ ಸ್ವರ್ಗಕ್ಕನರ್ಹಗಳಾದ ಅಶುಚಿಭಾಗಗಳನ್ನೆಲ್ಲಾ ತೊಳೆದುಕೊಂಡವನಾಗಿ, ಪರಿಶುದ್ಧವಾದ ಮನೋಮಯ ಕೋಶದೊಡನೆ ಸ್ವರ್ಗಲೋಕಕ್ಕೆ ಹೋಗಿ, ತಾನು ಶೇಖರಿಸಿಟ್ಟುಕೊಂಡು ಬಂದಿದ್ದ ಭೋಗಗಳನ್ನು ಭೋಗಿಸುವನು.

ಇದು ಕಳೆದುಹೋದಕೂಡಲೆ, ಭೂಲೋಕಕ್ಕೆ ಹಿಂದಿರುಗುವ ಕಾಲವು ಪ್ರಾಪ್ತವಾಗುವುದು, ಮತ್ತು ಪರಿಶುದ್ಧವಾದ ಮನೋಮಯ ಕೋಶವು ಲಯವಾಗಿಹೋಗಲು, ಜೀವನು ವಿಜ್ಞಾನಮಯ ಕೋಶದೊಡನೆ ಮಹರ್ಲೋಕಕ್ಕೆ ತೆರಳುವನು. ಜೀವನು ಬೇಗನೆ ತನ್ನ ಹಿಂದಿನ ಪ್ರಯಾಣಕ್ಕೆ ಹೊಸದಾಗಿ ವಾಹನವನ್ನು ರಚಿಸಿಕೊಳ್ಳುವುದಕ್ಕೆ ತನ್ನ ಶಕ್ತಿಯನ್ನುಪಯೋಗಿಸುತ್ತಾನೆ. ಕೆಳಗಣಲೋಕಗಳಲ್ಲಿ ಮುಂದೆ ತಾನು ಬದುಕುವುದಕ್ಕಾಗಿ ನವೀನ ಮನೋಮಯಕೋಶವೊಂದನ್ನು ಸೃಷ್ಟಿಸಿಕೊಳ್ಳುವನು. ಅವನ ಕರ್ಮಾನುಸಾರವಾಗಿ ದೇವತೆಗಳು ಆ ಜೀವನಿಗೆ ತಕ್ಕ ಪ್ರಾಣಮಯ ಕೋಶವನ್ನೂ ಅನ್ನಮಯ ಕೋಶವನ್ನೂ ಮಾಡಿಕೊಡುವರಾಗುತಾರೆ; ಆಮೇಲೆ ಅವನು ಮತ್ತೊಮ್ಮೆ ಭೂಲೋಕದಲ್ಲಿ ಹುಟ್ಟುವನು.

ದೃಶ್ಯಲೋಕವಾಸ, ಮರಣ, ಅದೃಶ್ಯಲೋಕಗಳವಾಸ, ಪುನರ್ಜನ್ಮ— ಇವು ಜೀವನ ಲೋಕಯಾತ್ರೆಯ ಪುನರಾವರ್ತದ ಪ್ರಸ್ಥಾನಗಳು. ತಿರುಗಿ ತಿರುಗಿ, ತಿರುಗಿ ತಿರುಗಿ ಇದು ಆಗುತ್ತಲೇ ಹೋಗುವುದು. ಕಟ್ಟಕಡೆಗೆ, ಈ ಲೋಕತ್ರಯದ ಪರ್ಯಟನದಿಂದ ಜೀವನಿಗೆ ಬೇಜಾರುಹುಟ್ಟಿ, ಊರ್ಧ್ವಲೋಕಗಳಯಾತ್ರೆಗೂ, ಸೂಕ್ಷ್ಮತರಾನುಭವಗಳಿಗೂ, ವಿಶಾಲತರದಬೊಳಿಗೂ ಆಸೆಪಡುವವನಾಗುವನು ; ಈ ಲೋಕತ್ರಯವು ಕೊಡಬಹುದಾದುದಕ್ಕೆಲ್ಲಾ ವಿಮುಖನಾಗಿ, ಧ್ಯಾನದಲ್ಲಿಯೂ, ದೇವತಾರ್ಚನೆಯಲ್ಲಿ

ಯೂ, ದುರ್ಬಲರಿಗೆ ಕನಿಕರದಿಂದ ಸಹಾಯ ಮಾಡುವುದರಲ್ಲಿಯೂ, ಸಂತುಷ್ಟತೆಯನ್ನು ಹೊಂದುವನಾಗುವನು ; ಆತ್ಮಸುಖಕ್ಕಾಗಿ ತನ್ನ ವಾಹನಗಳನ್ನು ಉಪಯೋಗಿಸುವುದನ್ನು ಬಿಟ್ಟು, ಪರಹಿತಾರ್ಥಕ್ಕೇ ಅವುಗಳನ್ನುಪಯೋಗಿಸುವವನಾಗುವನು ; ಅವುಗಳನ್ನು ಈರೀತಿಯಲ್ಲುಪಯೋಗಿಸುವುದರಿಂದ ಅವು ಅವನನ್ನು ಕಟ್ಟಿಹಾಕಲೇ ಆರವು. ತನ್ನ ಅಧಮವಾಹನಗಳನ್ನು ಅಧೋಲೋಕಗಳ ಕೆಲಸಕ್ಕುಪಯೋಗಿಸುತ್ತಾ, ಈಶ್ವರ ಸಹಕಾರಿಯಾಗಿ, ಊರ್ಧ್ವಲೋಕಗಳಲ್ಲಿ ವಾಸಮಾಡುವವನಾಗುವನು. ಹೀಗೆ ಮಹಾತ್ಮನಾದವನು, ಮನಸ್ಸುಬಂದರೆ, ತನ್ನ ವಾಹನಗಳನ್ನು ಲೋಕೋಪಕಾರಕ್ಕಾಗಿ ಇಟ್ಟುಕೊಂಡಿರಬಹುದು ; ಬೇಡವಾದರೆ ಅವುಗಳನ್ನು ಕೆಡವಿಬಿಟ್ಟು, ಬ್ರಹ್ಮಸಾಯುಜ್ಯ ಪದವಿಯನ್ನೈದಬಹುದು.

## ಶ್ರುತ್ಯಾದಿ ವಚನಗಳು.

ಅಥ ತ್ರಯೋ ವಾವ ಲೋಕಾಃ—

ಮನುಷ್ಯಲೋಕಃ ಪಿತೃಲೋಕೋ ದೇವಲೋಕಇತಿ ॥

(ಬೃಹದಾರಣ್ಯಕೋಪನಿಷತ್ತು. ಅ. ೧, ಬ್ರಾ. ೫, ಖಂ. ೧೬).

"ಸರಿ, ನಿಜವಾಗಿಯೂ ಮೂರು ಲೋಕಗಳಿರುವುವು—ಮನುಷ್ಯಲೋಕ, ಪಿತೃಲೋಕ, ಮತ್ತು ದೇವಲೋಕ."

ಜಾತಸ್ಯ ಹಿ ಧ್ರುವೋ ಮೃತ್ಯು ರ್ಧ್ರುವಂ ಜನ್ಮ ಮೃತಸ್ಯ ಚ।
ತಸ್ಮಾದಪರಿಹಾರ್ಯೇऽರ್ಥೇ ನ ತ್ವಂ ಶೋಚಿತುಮರ್ಹಸಿ ॥
ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।
ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿವೇದನಾ ॥

(ಭಗವದ್ಗೀತೆ. ಅ. ೨; ಶ್ಲೋ. ೨೭—೨೮).

"ಹುಟ್ಟಿದುದಕ್ಕೆ ಸಾವಿದ್ದೇಯಿರುವುದು, ಮತ್ತು ಸತ್ತುದಕ್ಕೆ ಜನನವು ಇದ್ದೇಇರುವುದು ; ಆದುದರಿಂದ ತಪ್ಪಿಸಿಕೊಳ್ಳಲಾರದುದಕ್ಕಾಗಿ ನೀನು ವ್ಯಾಕುಲ ಪಡಲೇಬಾರದು.

"ಭೂತಗಳು ಆದಿಯಲ್ಲಿ ಅವ್ಯಕ್ತಗಳು, ಮಧ್ಯದಲ್ಲಿ ವ್ಯಕ್ತಗಳು, ಲಯದಲ್ಲಿ ಅವ್ಯಕ್ತಗಳು. ವ್ಯಸನಕ್ಕೆಲ್ಲಿತಾನೆ ಆಸ್ಪದವಿದೆ?"

ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ |
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ||
ಅವ್ಯಕ್ತಾದ್ವ್ಯಕ್ತಯಸ್ಸರ್ವಾಃ ಪ್ರಭವಂತ್ಯಹರಾಗಮೇ |
ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ||

(ಭಗವದ್ಗೀತೆ. ಅ. ೮; ಶ್ಲೋ. ೧೭—೧೮).

"ಒಂದು ಸಹಸ್ರ ಯುಗದವರೆಗೂ ಇರುವ ಬ್ರಹ್ಮದೇವರ ಹಗಲನ್ನೂ, ಮುಗಿಯುವುದಕ್ಕೊಂದು ಸಹಸ್ರಯುಗವನ್ನು ತೆಗೆದುಕೊಳ್ಳುವ ಬ್ರಹ್ಮದೇವರ ರಾತ್ರಿಯನ್ನೂ ಯಾರು ತಿಳಿಯುವರಾಗುವರೋ ಅವರು ಅಹೋರಾತ್ರಿಗಳನ್ನು ತಿಳಿದವರಾಗುವರು.

"ಹಗಲು ಹುಟ್ಟಿದೊಡನೆಯೇ ಅವ್ಯಕ್ತದಿಂದ ವ್ಯಕ್ತಜಗತ್ತೆಲ್ಲವೂ ಪ್ರಭವಿಸುವುದು ; ರಾತ್ರಿಯಾದಕೂಡಲೆ ವ್ಯಕ್ತವಾಗಿದ್ದ ಈ ಜಗತ್ತೆಲ್ಲವೂ ಅವ್ಯಕ್ತವೆನಿಸಿಕೊಂಡಿದ್ದುದರಲ್ಲಿಯೇ ಲಯವನ್ನು ಹೊಂದುವುದು."

ತ್ರೈವಿದ್ಯಾಮಾಂ ಸೋಮಪಾಃ ಪೂತಪಾಪಾಃ
ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ||
ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ—
ಮಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್ |
ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ||
ಏವಂ ತ್ರಯೀಧರ್ಮಮನುಪ್ರಪನ್ನಾಃ
ಗತಾಗತಂ ಕಾಮಕಾಮಾಲಭಂತೇ ||

(ಭಗವದ್ಗೀತೆ. ಅ. ೯; ಶ್ಲೋ. ೨೦—೨೧).

"ವೇದತ್ರಯವನ್ನು ಪಠಿಸಿ, ಯಜ್ಞವನ್ನು ಮಾಡಿ, ಸೋಮಪಾನವನ್ನು ಮಾಡುವುದರಿಂದ ಪಾಪದಿಂದ ವಿಮುಕ್ತರಾದವರು ಸ್ವರ್ಗಗತಿಯನ್ನು ನನ್ನಲ್ಲಿ ಪ್ರಾರ್ಥಿಸುವರು ; ದೇವೇಂದ್ರನ ದಿವ್ಯಲೋಕಕ್ಕೇರಿ ಹೋಗಿ ದೇವತೆಗಳ ದಿವ್ಯ ಸುಖಗಳನ್ನು ಸ್ವರ್ಗದಲ್ಲಿದ್ದು ಅನುಭವಿಸುವರು.

"ವಿಶಾಲವಾದ ದೇವಲೋಕದ ಸುಖಗಳನ್ನು ಅನುಭವಿಸಿದವರಾಗಿ, ಪುಣ್ಯವು ಕ್ಷಯಿಸಿ ಹೋದಮೇಲೆ, ಈ ಮರ್ತ್ಯಲೋಕಕ್ಕೇ ಹಿಂದಿರುಗಿ ಬರುವರು. ಮೂರು ವೇದಗಳು ವಿಧಿಸುವ ಕರ್ಮಗಳನ್ನೆಸಗಿ, ತ್ರಿಲೋಕ ಸುಖಗಳನ್ನು ಬಯಸುವವರು ಹೋಗುತ್ತಲೂ ಬರುತ್ತಲೂ ಇದ್ದೇ ಇರುವರು."

ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ |
ವಾಸುದೇವಸ್ಸರ್ವಮಿತಿ ಸಮಹಾತ್ಮಾ ಸುದುರ್ಲಭಃ ||

(ಭಗವದ್ಗೀತೆ. ಅ. ೭; ಶ್ಲೋ. ೧೯).

"ಅನೇಕ ಜನ್ಮಗಳ ಕೊನೆಯಲ್ಲಿ 'ವಾಸುದೇವಸ್ಸರ್ವಂ' ಎಂಬ ಜ್ಞಾನವನ್ನು ಪಡೆದು ನನ್ನನ್ನು ಹೊಂದುತ್ತಾನೆ. ಅಂತಹ ಮಹಾತ್ಮನು ಬಹು ದುರ್ಲಭನು."



ಇದು ಸನಾತನ ಧರ್ಮದೀಪಿಕೆಯಲ್ಲಿ ತತ್ವಪ್ರಕಾಶಿಕೆಯೆಂಬ ಪ್ರಥಮ ಭಾಗದಲ್ಲಿ ದೃಶ್ಯಾದೃಶ್ಯ ಲೋಕ ವಿಚಾರವೆಂಬ ಹೆಸರಿನ ಷಷ್ಠಾಧ್ಯಾಯ.

ಪ್ರಥಮಭಾಗಂ ಸಮಾಪ್ತಂ.





# ಓಂ.

# ದ್ವಿತೀಯಭಾಗ. ಕರ್ಮಪ್ರಕಾಶಿಕೆ.

## ಪ್ರಥಮಾಧ್ಯಾಯ.

### ಸಂಸ್ಕಾರ ವಿವರಣೆ.



ಸಕಲ ಮತಗಳೂ ಹವ್ಯಕವ್ಯಾದಿ ಕರ್ಮಗಳನ್ನು ವಿಧಿಸಿಯೇ ಇರುವುವು. ಸಾಮಾನ್ಯವಾಗಿ ನೋಡುವಲ್ಲಿ ಈ ಕರ್ಮಗಳ ಪ್ರಯೋಜನವು ಇಂತಿರುವುದು:—

(೧). ಜೀವನು ತನ್ನ ಕೋಶಗಳನ್ನು ವಶಪಡಿಸಿಕೊಂಡು ಅವುಗಳನ್ನು ಪರಿಶುದ್ಧ ಮಾಡಿಕೊಳ್ಳುವುದೊಂದು ಪ್ರಯೋಜನ.

(೨). ದೇವರ್ಷ್ಯಾದಿ ಮಹನೀಯರುಗಳ ಕೃಪೆಯನ್ನು ಸಂಪಾದಿಸಿಕೊಳ್ಳುವುದೊಂದು ಪ್ರಯೋಜನ.

(೩). ಚಿತ್ತವೃತ್ತಿಯನ್ನು ನಿರೋಧಿಸುವುದಕ್ಕೆ ಅನುಕೂಲವಾಗುವಂತೆ ತನ್ನನ್ನು ಆವರಿಸಿರುವ ಪ್ರದೇಶವನ್ನು ಶುದ್ಧಿಮಾಡಿಕೊಳ್ಳುವುದೊಂದು ಪ್ರಯೋಜನ.

ಈಯುದ್ದೇಶ್ಯಗಳು ಕೈಗೂಡುವುದಕ್ಕಾಗಿ ಬಗೆಬಗೆಯ ಪದಾರ್ಥಗಳನ್ನೂ, ನ್ಯಾಸಗಳನ್ನೂ, ಆಸನಗಳನ್ನೂ, ಶಬ್ದಗಳನ್ನೂ ಶಾಸ್ತ್ರೋಕ್ತ ರೀತಿಯಲ್ಲಿ ಜಾಗರೂಕತೆಯಿಂದ ವಿಂಗಡಿಸಿಕೊಂಡು ಉಪಯೋಗಿಸಿಕೊಳ್ಳುತ್ತೇವೆ.

ಉಪಯುಕ್ತವಾದ ಓಜಶ್ಶಕ್ತಿ (magnetism) ಇರುವ ಪದಾರ್ಥಗಳನ್ನು ಹುಡುಕಿಟ್ಟುಕೊಳ್ಳಬೇಕು. ಒಂದೊಂದು ದೇವತೆಗೊಂದೊಂದು ಬಗೆಯ ಹೂವು ಮುಂತಾದ ಪದಾರ್ಥಗಳಲ್ಲಿ ಮಮತೆಯಿರುವುದು ; ಏಕೆಂದರೆ ಆ ದೇವತೆಯ ಪ್ರಭಾವಕ್ಕನುಗುಣವಾದ ಅಂಶವು ಆ ಪದಾರ್ಥದಲ್ಲಿರುವುದು. ಇಂತಹ ಸಂದರ್ಭಗಳಲ್ಲಿ ನಾವು ಪೂಜಿಸುವ ಅಥವಾ ಧ್ಯಾನಿಸುವ ದೇವತೆಗೆ ಯಾವಯಾವ ವಸ್ತುಗಳಲ್ಲಿ ಮಮತೆಯುಂಟೋ ಅಂತಹವುಗಳನ್ನೇ ಆರಿಸಿಕೊಳ್ಳುವುದರಿಂದ ಪೂಜಿಸುವವನಿಗೂ ಪೂಜಿಸಲ್ಪಡುವ ದೇವತೆಗೂ ಒಂದು ಸಂಬಂಧವುಂಟಾಗುವುದು. ಹೇಗೆಂದರೆ, ಶ್ರೀಕೃಷ್ಣ ಪರಮಾತ್ಮನನ್ನು ಪೂಜಿಸುವ ವೇಳೆಯಲ್ಲಿ ತುಳಸಿಯ ಮಣಿಯ ಹಾರವನ್ನು ಹಾಕಿಕೊಳ್ಳುತ್ತೇವೆ ; ಮಹಾದೇವನ ಪೂಜೆಯಲ್ಲಿ ರುದ್ರಾಕ್ಷಿಯ ಮಾಲೆಯನ್ನು ಧರಿಸುತ್ತೇವೆ.

ನ್ಯಾಸಗಳೂ ಆಸನಗಳೂ ಶರೀರದಲ್ಲಿ ಪರ್ಯಟನಗೈಯುತ್ತಲೇ ಇರುವ ಪ್ರಾಣವಾಯುಗಳನ್ನು ಕ್ರಮಪಡಿಸಿಕೊಳ್ಳುವುದರಲ್ಲಿ ಉಪಯುಕ್ತಗಳಾಗುವುವು. ನ್ಯಾಸಾಸನಗಳಲ್ಲಿ ಕೆಲವು ಶರೀರದ ಓಜಶ್ಶಕ್ತಿಯು (magnetism) ಸುತ್ತಮುತ್ತಲೂ ಇರುವ ವಾಯುಮಂಡಲದಲ್ಲಿ ಲಯವಾಗದಂತೆ ಕಾಪಾಡಿ ಚಿತ್ತಶಾಂತಿಗೆ ಅನುಕೂಲವಾಗುವಂತೆ ಆ ಶಕ್ತಿಯ ಪ್ರವಾಹಗಳನ್ನು ತಿರುಗಿಸುವುವು.

ಮೇಲೆ ಹೇಳಿದ ಮೂರೂ ಪ್ರಯೋಜನಗಳು ಶಬ್ದಗಳಿಂದಾಗುವುವು. ಶಬ್ದಗಳು ಪರಿಸ್ಫುರಣಗಳನ್ನು (vibrations) ಹುಟ್ಟಿಸುವುವು. ಈ ಪರಿಸ್ಫುರಣಗಳು ಸಮವಾಗಿಯೂ ಕ್ರಮದಲ್ಲಿಯೂ ಇರುವುದರಿಂದ, ಬಹು ಸುಲಭವಾಗಿ ವ್ಯತ್ಯಾಸವನ್ನು ಹೊಂದುವ ಸೂಕ್ಷ್ಮಶರೀರದ ಪರಿಸ್ಫುರಣಗಳನ್ನೂ ಸಮವಾಗಿಯೂ ಕ್ರಮವನ್ನು ವಿಸ್ಮರದಂತೆಯೂ ಇಡುವುವು.

ಸೂಕ್ಷ್ಮಶರೀರದ ಪರಿಸ್ಫುರಣಗಳು ಕ್ರಮಪಟ್ಟಾಗ, ಧ್ಯಾನ ಭಕ್ತಿಗಳ ಸ್ಥೈರ್ಯದ ವಿಷಯದಲ್ಲಿ ಜೀವನಿಗೆ ಸಹಾಯವುಂಟಾಗುವುದು. ಉಚಿತವಾದದೊಂದು ಬಗೆಯ ಶಬ್ದ ಸರಣಿಯು ಉಚ್ಚಾರಣೆಯನ್ನು ಮಾಡುವವನ ಕಡೆಗೆ ದೇವತೆಗಳ ಮತ್ತು ಋಷಿಗಳ ಮನಸ್ಸನ್ನು ಆಕರ್ಷಿಸುತ್ತದೆ; ಮತ್ತು ಆ ಮಹನೀಯರು ಆತನ ಸಹಾಯಕ್ಕೆ ಬರುವರು. ಇವೂ ಅಲ್ಲದೆ ತಕ್ಕತಕ್ಕ ಶಬ್ದ ಸಮುದಾಯಗಳು ವಿರೋಧಿಗಳಾದ ಭೂತ ಸಮುದಾಯಗಳನ್ನೂ, ಪದಾರ್ಥಗಳ ಓಜಶ್ಶಕ್ತಿಯ ದುಷ್ಟ ಪ್ರವಾಹಗಳನ್ನೂ ಹೊಗಲಾಡಿಸಿ, ತಮ್ಮನ್ನುಚ್ಚರಿಸುವಾತನ ಸುತ್ತಮುತ್ತಲ ಪ್ರದೇಶವನ್ನು ಅಚ್ಚುಕಟ್ಟು ಮಾಡುವುವು.

ಈ ರೀತಿಯಲ್ಲಿಯುಪಯೋಗಿಸಿದ ಶಬ್ದಸಮುದಾಯಗಳಿಗೆ ಮಂತ್ರವೆಂದು ಹೆಸರು. ಮಂತ್ರವೆಂಬುದದೊಂದು ಬಗೆಯ ಶಬ್ದ ಪರಂಪರೆ, ವಿಧಾಯಕವಾಗಿರುವದೊಂದು ಶಬ್ದ ಸರಣಿ, ಒಂದೊಂದು ಬಗೆಯಲ್ಲಿ ಛಂದೋಬದ್ಧವಾಗಿ ಸೇರಿರುವ ಶಬ್ದಸಮುದಾಯ. ಶಬ್ದಸರಣಿ ಅಥವಾ ಛಂದಸ್ಸು ವ್ಯತ್ಯಸ್ತವಾದರೆ, ಪರಿಸ್ಫುರಣದ ಕ್ರಮವೂ ವ್ಯತ್ಯಸ್ತವಾಗುವುದು, ಫಲವೂ ವ್ಯತ್ಯಸ್ತವಾಗುವುದು. ಮಂತ್ರವನ್ನು ಭಾಷಾಂತರ ಮಾಡುವುದಕ್ಕಾಗದಿರುವುದಕ್ಕೆ ಇದೇ ಕಾರಣ. ಭಾಷಾಂತರ ಮಾಡಿದ ಮಂತ್ರವು ವಾಕ್ಯದ ಪದಗಳ ಅಕ್ಷರಗಳನ್ನು ಕ್ರಮತಪ್ಪಿಸಿ ಒಟ್ಟುಗೂಡಿಟ್ಟಂತೆ ಆಗಿ ನಿರರ್ಥಕವಾಗುವುದು.

ಮಂತ್ರಗಳ ವಿಷಯವಾಗಿ ಜ್ಞಾಪಕವಿಟ್ಟಿರಬೇಕಾದುದು ಇನ್ನೊಂದುಂಟು. ಮಂತ್ರೋಚ್ಚಾರಣೆ ಮಾಡುವವನು ಸದ್ಧರ್ಮನಿರತನಾಗಿಲ್ಲದಿದ್ದರೆ, ಮಂತ್ರದ ಶಬ್ದ ಪರಿಸ್ಫುರಣಗಳು ಅವನಿಗೆ ಕೇಡನ್ನುಂಟುಮಾಡುವುವು, ಒಳ್ಳಿತನ್ನು ಮಾಡುವುದಿಲ್ಲ; ಏಕೆಂದರೆ, ಈ ಪರಿಸ್ಫುರಣಗಳು ಸೂಕ್ಷ್ಮಶರೀರದಲ್ಲಿ ಕೆಲಸಮಾಡುವುದರಿಂದ, ದುಷ್ಕಾಮಗಳಿಗೂ ದುರಾಲೋಚನೆಗಳಿಗೂ ವಿರುದ್ಧವಾದ ಶಕ್ತಿವಿಶೇಷವೊಂದನ್ನು ತಂದಿಡುವುವು ಮಂತ್ರವಾದಿಯ ದುರಾಲೋಚನೆಗಳೂ ದುಷ್ಕಾಮಗಳೂ ಒಂದು ಬಗೆಯ ಪರಿಸ್ಫುರಣಗಳನ್ನು ತರುತ್ತಿರುವಲ್ಲಿ, ಮಂತ್ರೋಚ್ಚಾರಣೆಯ ಪರಿಸ್ಫುರಣಗಳು ಇದಕ್ಕೆ ವಿರೋಧವಾದ ಪರಿಸ್ಫುರಣಗಳನ್ನು ಹುಟ್ಟಿಸುವುವು; ವಿರೋ

ಧಿಗಳಾದ ಈ ಎರಡು ಬಗೆಯ ಪರಿಸ್ಫುರಣಗಳು ಸೂಕ್ಷ್ಮಶರೀರವನ್ನು ಉಲ್ಲೋಲ ಕಲ್ಲೋಲ ಮಾಡಬಹುದು, ಘಾತಿಸಲೂ ಬಹುದು, ಛಿದ್ರ ಛಿದ್ರವಾಗಿ ಹರಿದಿಡಲೂ ಬಹುದು. ಮಂತ್ರವಾದಿಯ ಆಲೋಚನೆಗಳೂ ಕಾಮಗಳೂ ಧರ್ಮವಿರುದ್ಧಗಳಾಗಿಲ್ಲದಿದ್ದರೆ, ಅವು ಮಂತ್ರಕ್ಕನುಗುಣ ವಾಗಿರುವುದರಿಂದ ವಿರೋಧವಾಗಿ ಪರಿಣಮಿಸುವುದಿಲ್ಲ ; ಎಷ್ಟೇ ಬಲಹೀನ ವಾಗಿದ್ದರೂ, ಪರಸ್ಪರ ಸಹಾಯ ವುಂಟಾಗುವುದೇ ಹೊರತು, ಪ್ರತಿಬಂಧಕ ವುಂಟಾಗುವುದಿಲ್ಲ.

ಮಂತ್ರಗಳನ್ನು ಗಟ್ಟಿಯಾಗಿ ಯುಚ್ಚರಿಸಬೇಕಾಗಿಲ್ಲ ; ಸದ್ದಿಲ್ಲದೆ ಮನಸ್ಸಿನಲ್ಲಿಯೇ ಜಪಮಾಡುವುದು ಇತರರಿಗೆ ಕೇಳುವಂತೆ ಉಚ್ಚರಿಸುವು ದಕ್ಕಿಂತ ಶಕ್ತಿ ಪೂರಿತವಾಗಿರುವುದು ಮಂತ್ರಗಳು ಪೃಥಿವ್ಯಾದಿ ಭೂತ ಗಳ ಸ್ಥೂಲಭಾಗಗಳ ಮೇಲೆ ಕೆಲಸಮಾಡುವುದಕ್ಕಿಂತ ಹೆಚ್ಚಾಗಿ ಸೂಕ್ಷ್ಮ ಭಾಗಗಳ ಮೇಲೆ ಕೆಲಸ ಮಾಡುತ್ತವೆ.

ಆರ್ಯಧರ್ಮಾವಲಂಬಿಯ ಜೀವಮಾನದಲ್ಲಿ ನಡೆಯಬೇಕಾದ ಕರ್ಮ ಗಳಲ್ಲಿ ಮುಖ್ಯಗಳಾದ ಕೆಲವು ಅವನ ಬಳೆವಳಿಗೆಯ ಮೆಟ್ಟಲುಗಳನ್ನು ಗುರುತು ಮಾಡುವುವುಗಳಾಗಿವೆ. ಪೂರ್ವದಲ್ಲಿವು ಬಹುಳವಾಗಿದ್ದುವು, ಮತ್ತು ದಶಸಂಸ್ಕಾರಗಳು ಮುಖ್ಯಗಳಾಗಿ ಭಾವಿಸಲ್ಪಟ್ಟಿದ್ದುವು ; ಈ ದಶ ಸಂಸ್ಕಾರಗಳಲ್ಲಿ ಕೆಲವು ಮಾತ್ರವೇ ಈಗ ಆಚರಣೆಯಲ್ಲಿವೆ. ಈ ಸಂ ಸ್ಕಾರಗಳಲ್ಲಿ ಏಳು ಗರ್ಭದಲ್ಲಿ ಬಳೆವ ಶಿಶುವಿಗೂ ಎಳೆಯ ಮಕ್ಕಳಿಗೂ ಸಂಬಂಧಪಟ್ಟವೆ. ಈ ಏಳರಲ್ಲಿ ಆರನೆಯದಾಗಿರುವ ಅನ್ನಪ್ರಾಶನವೆಂಬ ಸಂಸ್ಕಾರವು,—ಪಕ್ವಾನ್ನವನ್ನು ಮೊದಲು ತಿನ್ನಿಸುವ ಕರ್ಮವು—ಎಲ್ಲರ ಆಚರಣೆಯಲ್ಲಿಯೂ ಇದೆ. ಚೂಡಾಕರ್ಮವೆಂಬ ಏಳನೆಯ ಸಂಸ್ಕಾರವು —ತಲೆಯಲ್ಲಿ ಜುಟ್ಟನ್ನು ಬಿಡಿಸುವ ಮತ್ತು ಕಿವಿಯನ್ನು ಚುಚ್ಚುವ ಸಂಸ್ಕಾ ರವು—ಬಹುಮಟ್ಟಿಗೆಲ್ಲರಿಂದಲೂ ಆಚರಿಸಲ್ಪಟ್ಟಿದೆ. ಬಹುಮುಖ್ಯವಾದ ಉಪನಯನವೆಂಬ ಎಂಟನೆಯ ಸಂಸ್ಕಾರವು ಆಮೇಲೆ ಬರುವುದು. ಯ ಜ್ಞೋಪವೀತವನ್ನಿತ್ತು, ಗಾಯತ್ರಿಯುಪದೇಶವನ್ನು ಕೊಟ್ಟು ದ್ವಿಜನನ್ನಾಗಿ ಮಾಡುವ ಗುರುವಿನೆಡೆಗೆ ಈ ಉಪನಯನವೆಂಬ ಸಂಸ್ಕಾರವು ಹುಡುಗ ನನ್ನು ಕರೆದೊಯ್ಯುವುದು.

ಉಪನಯನ ಸಂಸ್ಕಾರವು ವೇದ ವಿದ್ಯಾವ್ಯಾಸಂಗದ ಪ್ರಾರಂಭಕ್ಕೆ ಗುರುತಾಗಿದೆ. ವಿದ್ಯಾವ್ಯಾಸಂಗದ ಕಾಲದಲ್ಲಿ ಬ್ರಹ್ಮಚರ್ಯವ್ರತವು ವಿಧಾಯಕವಾಗಿದೆ, ಮತ್ತು ವಿದ್ಯಾಕಾಲಕ್ಷೇಪವೇ ಬ್ರಹ್ಮಚಾರಿಯ ಕರ್ತವ್ಯವಾಗಿದೆ. ಸಮಾವರ್ತನ ಸಂಸ್ಕಾರವು ವಿದ್ಯಾವ್ಯಾಸಂಗವನ್ನು ಮುಗಿಸಿಕೊಂಡು ಮನೆಗೆ ಹಿಂದಿರುಗಿ ಬರುವುದನ್ನು ತೋರಿಸುತ್ತದೆ ; ಆಗ ದ್ವಿತೀಯಾಶ್ರಮವಾದ ಗೃಹಸ್ಥಾಶ್ರಮದ ಸ್ವೀಕಾರಕಾಲವು ಪ್ರಾಪ್ತವಾಗುವುದು. ಹತ್ತನೆಯ ಸಂಸ್ಕಾರವೆನಿಸಿಕೊಂಡಿರುವ ವಿವಾಹವು ಹುಡುಗನು ಪ್ರಾಪ್ತವಯಸ್ಕನಾದುದನ್ನೂ, ಗೃಹಸ್ಥಾಶ್ರಮದ ಅಧಿಕಾರಭಾರಗಳನ್ನು ಹೊರುವುದಕ್ಕೆ ಅರ್ಹತೆಯನ್ನು ಸಂಪಾದಿಸಿರುವುದನ್ನೂ ತೋರಿಸುವುದು. ಈಗಿನ ಇಂಡಿಯಾದೇಶದಲ್ಲಿ ಸುಚಿಪ್ರದಗಳಾದ ಈ ವಿಧಿಗಳ ಆಚರಣೆಯು ನಿಂತು ಹೋಗಿದೆ; ಉಪನಯನ ಸಂಸ್ಕಾರವನ್ನೂ ವಿವಾಹ ಸಂಸ್ಕಾರವನ್ನೂ ಉತ್ಸವನಿಮಿತ್ತವಾಗಿ ಜನರು ಮಾಡುತ್ತಿದಾರೆ. ಬ್ರಹ್ಮಚರ್ಯವ್ರತದೊಳಕ್ಕೆ ವಿವಾಹೋತ್ಸವವನ್ನೂ ತಂದು ತಳ್ಳಿರುತ್ತಾರೆ ; ವಿದ್ಯಾರ್ಥಿಯ ಕರ್ತವ್ಯಗಳೂ ಗೃಹಸ್ಥನ ಕರ್ತವ್ಯಗಳೂ ಸಮ್ಮಿಳಿತವಾಗಿ ಎರಡೂ ಕ್ಷೀಣಗತಿಗೆ ಬಂದಿರುವುವು. ಪೂರ್ವಾಚರಣೆಯು ಮತ್ತೊಮ್ಮೆ ಸ್ವೀಕೃತವಾಗಲೆಂದು ನಾವುಗಳು ಹಾರಯಿಸುತ್ತೇವೆ.

## ಶ್ರುತ್ಯಾದಿ ವಚನಗಳು.

ಏಕಃ ಶಬ್ದಃ ಸಮ್ಯಜ್ಞಾತಃ ಸುಷ್ಠು ಪ್ರಯುಕ್ತಃ
ಸ್ವರ್ಗೇ ಲೋಕೇ ಕಾಮಧುಗ್ಭವತಿ ॥
(ಪತಂಜಲಿ ಮಹಾಭಾಷ್ಯ. VI. i. 84).

" ಸಮ್ಯಜ್ಞಾತವಾಗಿಯೂ ಸುಷ್ಠುಪ್ರಯುಕ್ತವಾಗಿಯೂ ಇರುವ ಒಂದೇ ಶಬ್ದವು ಸ್ವರ್ಗಲೋಕದ ಕಾಮಧೇನು ಸಮಾನವಾಗುವುದು. "

ಮಂತ್ರೋ ಹೀನಃ ಸ್ವರತೋ ವರ್ಣತೋ ವಾ
ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ ॥
ಸವಾಗ್ವಜ್ರೋ ಯಜಮಾನಂ ಹಿನಸ್ತಿ
ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ॥ [ಪಾಣಿನೀ ಶಿಕ್ಷಾ—೫೨]

"ಸ್ವರ ಹೀನವಾದರೂ ವರ್ಣ (ಅಕ್ಷರ ಮತ್ತು ಬಣ್ಣ) ಹೀನವಾದರೂ ಮಂತ್ರೋಚ್ಚಾರಣೆಯೂ ಕೆಡುವುದು, ಮಂತ್ರದ ಅರ್ಥವೂ ಕೆಡುವುದು. 'ಇಂದ್ರ-ಶತ್ರು' ಎಂಬುದು ಸ್ವರವ್ಯತ್ಯಾಸದಿಂದ ಉಚ್ಚರಿಸಿದವನನ್ನೇ ಕೊಂದ ತೆರದಲ್ಲಿ, ಸಿಡಿಲ್ಗೆ ಸಾಟಿಯಾದಾಶಬ್ದವು ಯಜಮಾನನನ್ನೇ ಕೊಂದುಬಿಡುವುದು." (ವೃತ್ರಾಸು ಇಂದ್ರನನ್ನು ಕೊಲ್ಲಬೇಕೆಂದು ಯಾಗ ಮಾಡುತ್ತಿದ್ದನು. 'ಇಂದ್ರ-ಶತ್ರು' ಎಂಬುದನ್ನು ಸರಿಯಾದ ಸ್ವರದಿಂದ ಹೇಳದೆ ಇದ್ದುದರಿಂದ, ಆ ಮಂತ್ರವು ಅರ್ಥದಲ್ಲಿ ಬೇರೆಯಾಗಿ ಇಂದ್ರನನ್ನು ಕೊಲ್ಲುವುದಕ್ಕೆ ಬದಲಾಗಿ ಯಜಮಾನನಾದ ಮತ್ತು ಇಂದ್ರನ ಶತ್ರುವಾದ ವೃತ್ರನನ್ನೇ ಕೊಂದುಬಿಟ್ಟಿತು.) *

ವೈದಿಕೈಃ ಕರ್ಮಭಿಃ ಪುಣ್ಯೈರ್ನಿಷೇಕಾದಿರ್ದ್ವಿಜನ್ಮನಾಂ ।
ಕಾರ್ಯಶ್ಶರೀರಸಂಸ್ಕಾರಃ ಪಾವನಃ ಪ್ರೇತ್ಯ ಚೇಹ ಚ ॥
(ಮನುಸ್ಮೃತಿ. ಅ. ೨, ಶ್ಲೋ. ೨೬).

"ವೈದಿಕಕರ್ಮಗಳೊಡನೆ ದ್ವಿಜರು ನಿಷೇಕಾದಿ ಶಾರೀರ ಸಂಸ್ಕಾರಗಳನ್ನು ಮಾಡಿಕೊಳ್ಳಬೇಕು. ಈ ಸಂಸ್ಕಾರಗಳು ಇಹದಲ್ಲಿಯೂ ಪರದಲ್ಲಿಯೂ ಪರಿಶುದ್ಧತೆಯನ್ನುಂಟುಮಾಡುವುವು".

ಚಿತ್ರಕರ್ಮ ಯಥಾಽನೇಕೈಃ ರಾಗ್ಯೈರುನ್ಮೀಲ್ಯತೇ ಶನೈಃ ।
ಬ್ರಾಹ್ಮಣ್ಯಮಪಿ ತದ್ವತ್ಸ್ಯಾತ್ಸಂಸ್ಕಾರೈರ್ವಿಧಿಪೂರ್ವಕೈಃ ॥
(ಪರಾಶರಗೃಹ್ಯ ಸೂತ್ರಕ್ಕಿರುವ ಹರಿಹರಭಾಷ್ಯದಲ್ಲಿ ಪುಟ ೨೬೦ ರಲ್ಲಿ (II. 1) ಅಂಗೀರಸನ ವಚನವೆಂದು ಹೇಳಿದೆ).

---

* ಇಲ್ಲಿ ಇಂಗ್ಲೀಷಿನ ಮೂಲ ಪ್ರತಿಯು ಸುಬದ್ಧವಾಗಿಲ್ಲ. ಮುಂದಣ ಮುದ್ರಣದಲ್ಲಿ ತಪ್ಪನ್ನು ತಿದ್ದುಕೊಳ್ಳಬೇಕು. ಸರಿಯಾದ ಕಥೆ ಹೇಗಿರುವುದೆಂದರೆ — "ವೃತ್ರನ ತಂದೆಯಾದ ತ್ವಷ್ಟನು ಇಂದ್ರನನ್ನು ಕೊಲ್ಲುವ ಮಗನನ್ನು ಪಡೆಯಬೇಕೆಂದು ಯಾಗ ಮಾಡುತ್ತಿದ್ದನು. "ಇಂದ್ರ-ಶತ್ರು" ಎಂಬುದನ್ನು ಸರಿಯಾದ ಸ್ವರದಿಂದ ಹೇಳದೆ ಇದ್ದುದರಿಂದ, ಆ ಮಂತ್ರವು ಅರ್ಥದಲ್ಲಿ ಬೇರೆಯಾಗಿ, ಇಂದ್ರನನ್ನು ಕೊಲ್ಲುವಂತಹ ಮಗನು ಹುಟ್ಟುವುದಕ್ಕೆ ಬದಲಾಗಿ ಇಂದ್ರನೇ ಕೊಲ್ಲುವಂತಹ ವೃತ್ರನೆಂಬ ಮಗನು ಹುಟ್ಟುವನಾದನು. (ಭಾಗವತ. ಸ್ಕಂಧ ೬. ಅಧ್ಯಾಯ ೯. ಶ್ಲೋಕ ೧೧. ಶ್ರೀಧರೀಯ ವ್ಯಾಖ್ಯಾನ ಯುಕ್ತವಾದ ಪ್ರತಿಯಲ್ಲಿ ನಾವು ಹೇಳಿರುವಂತೆ ಹೇಳಿದೆ).

"ಚಿತ್ರಕರ್ಮದಲ್ಲಿ ಬಗೆಬಗೆಯ ಬಣ್ಣಗಳನ್ನು ಸರಿಯಾಗಿ ಹಾಕುವುದರಿಂದ ಚಿತ್ರವು ಹೇಗೆ ಪ್ರಕಾಶಮಾನವಾಗುತ್ತಾ ಹೋಗುವುದೋ ಹಾಗೆಯೇ ವಿಧಿಪೂರ್ವಕಗಳಾದ ಸಂಸ್ಕಾರಗಳಿಂದ ಬ್ರಾಹ್ಮಣ್ಯವೂ ಪ್ರಕಾಶಮಾನವಾಗುವುದು."

ಗರ್ಭಾಧಾನಂ ಪುಂಸವನಂ ಸೀಮನ್ತೋ ಜಾತಕರ್ಮ ಚ |
ನಾಮಕ್ರಿಯಾ ನಿಷ್ಕ್ರಮೋಽನ್ನಪ್ರಾಶನಂ ವಪನಕ್ರಿಯಾ ||
ಕರ್ಣವೇಧೋ ವ್ರತಾದೇಶೋ ವೇದಾರಮ್ಭಃ ಕ್ರಿಯಾವಿಧಿಃ |
ಕೇಶಾನ್ತಃ ಸ್ನಾನಮುದ್ವಾಹೋ ವಿವಾಹಾಗ್ನಿಪರಿಗ್ರಹಃ ||
ತ್ರೇತಾಗ್ನಿಸಂಗ್ರಹಶ್ಚೈವ ಸಂಸ್ಕಾರಾಃ ಷೋಡಶ ಸ್ಮೃತಾಃ |

(ಪರಾಶರ ಗೃಹ್ಯಸೂತ್ರದಲ್ಲಿ ವ್ಯಾಸಸ್ಮೃತಿಯಿಂದ ತೆಗೆದುಕೊಟ್ಟಿದೆ. ಪುಟ. ೨೬೯).

"(೧) ಗರ್ಭಾಧಾನ, (೨) ಪುಂಸವನ, (೩) ಸೀಮಂತ, (೪) ಜಾತಕರ್ಮ, (೫) ನಾಮಕರಣ, (೬) ನಿಷ್ಕ್ರಮ, (೭) ಅನ್ನಪ್ರಾಶನ, (೮) ಚೂಡಾಕರ್ಮ, (೯) ಕರ್ಣವೇಧ, (೧೦) ವ್ರತಾದೇಶ, (೧೧) ಉಪನಯನ, (೧೨) ಕೇಶಾನ್ತ, (೧೩) ಸ್ನಾನ, (೧೪) ಉದ್ವಾಹ, (೧೫) ವಿವಾಹಾಗ್ನಿಪರಿಗ್ರಹ, (೧೬) ತ್ರೇತಾಗ್ನಿಸಂಗ್ರಹ—ಇವು ಷೋಡಶ ಸಂಸ್ಕಾರಗಳು."

---

ಇದು ಸನಾತನ ಧರ್ಮದೀಪಿಕೆಯ ಕರ್ಮಪ್ರಕಾಶಿಕೆಯೆಂಬ ದ್ವಿತೀಯಭಾಗದಲ್ಲಿ ಸಂಸ್ಕಾರವಿವರಣವೆಂಬ ಪ್ರಥಮಾಧ್ಯಾಯ.



# ದ್ವಿತೀಯ ಭಾಗ.

## ದ್ವಿತೀಯಾಧ್ಯಾಯಃ

---

### ಶ್ರಾದ್ಧವಿಚಾರ.





ಸತ್ತು ದೃಶ್ಯಶರೀರವನ್ನು ಕಳೆದುಕೊಂಡಿರುವ ಜೀವನ ಸಹಾಯಾರ್ಥವಾಗಿ ಇಹಲೋಕದಲ್ಲಿರುವವರು ಮಾಡುವ ಉತ್ತರಕ್ರಿಯೆಗಳಿಗೆ ಶ್ರಾದ್ಧವೆಂಬ ಹೆಸರನ್ನು ಕೊಟ್ಟಿರುತ್ತಾರೆ. ದೃಶ್ಯಶರೀರವನ್ನು ಕೊಡವಿಬಿಟ್ಟಿರುವ ಜೀವನಿಗೆ ಪ್ರೇತನೆಂದು ಹೆಸರು ; ಮತ್ತು ಈ ಅವಸ್ಥೆಯಲ್ಲಿರುವ ಜೀವನಿಗೆ ಅನುಕೂಲಗಳುಂಟಾಗಲೆಂದು ಮಾಡುವ ಶ್ರಾದ್ಧಕರ್ಮಗಳ ಭಾಗಕ್ಕೆ ಪ್ರೇತಕ್ರಿಯೆಯೆಂದು ಹೆಸರು. ಸ್ಥೂಲ ಶರೀರಾಂಶಗಳು ಬೇಗನೆ ಪಂಚಭೂತಗಳೊಳಗೆ ಲಯವಾಗಲೆಂದು ಅನ್ನಮಯಕೋಶವಾದ ದೃಶ್ಯಶರೀರವನ್ನು ಶ್ಮಶಾನಕ್ಕೆ ಹೊತ್ತುಕೊಂಡು ಹೋಗಿ ಸುಟ್ಟುಬಿಡುವರು ; ಮೂರನೇಯ ದಿನದಲ್ಲಿ ಬೂದಿಯನ್ನು ಗುಡಿಸಿ, ಪವಿತ್ರನದಿಯಾವುದೂ ಸಿಕ್ಕದಿದ್ದಲ್ಲಿ ಹರಿಯುವ ನೀರಿನೊಳಕ್ಕೋ ಕೆರೆಯೊಳಕ್ಕೋ ಹಾಕಿಬಿಡುವರು. ಅನ್ನಮಯ ಕೋಶವು ನಾಶವಾದಾಗ, ಪ್ರಾಣಮಯಕೋಶವು ಬೇಗನೆ ಸಡಿಲವಾಗಿ ಒಡೆದು ಹೋಗುವುದು. ಶರೀರ ದಹನಕಾಲದಲ್ಲಿ ಉಚ್ಚರಿಸುವ ಕೆಲವು ಮಂತ್ರಗಳ ಪ್ರಭಾವದಿಂದ ಈ ಲಯಕಾರ್ಯವು ಬೇಗನೆ ನಡೆಯುವುದು. ಸ್ಥೂಲಶರೀರವನ್ನು ಸುಟ್ಟು ನಾಶಮಾಡುವುದೇ ಉತ್ತಮ;

ಮತ್ತು ಈ ಬಗೆಯ ಸಂಸ್ಕಾರವು ಹೋದ ಜೀವನಿಗೂ ಒಳ್ಳೆಯದು, ಉಳಿದಿರುವವರಿಗೂ ಒಳ್ಳೆಯದು. ಸ್ಥೂಲಶರೀರವು ಎಷ್ಟು ಕಾಲದ ವರೆಗೆ ನಾಶವಾಗದೆ ಉಳಿದಿರುವುದೋ ಅಷ್ಟು ಕಾಲದವರೆಗೂ ಪ್ರಾಣಮಯ ಕೋಶವು ಅದರ ಸಮೀಪದಲ್ಲಿಯೇ ಸುಳಿದಾಡಿಕೊಂಡಿರುವುದು. ಈ ಎರಡು ಕೋಶಗಳಿಗೂ ಪರಸ್ಪರವಾದದೊಂದು ಗ್ರಾಹಕಶಕ್ತಿಯಿರುವುದರಿಂದ ಜೀವನು ಈ ಭೂಲೋಕಕ್ಕೇ ಗಂಟು ಬಿದ್ದಿರುವನು; ಹೀಗಿರುವುದು ಪ್ರೇತನಿಗೆ ಕೆಟ್ಟುದು; ನೆಲದಲ್ಲಿ ಹೂಳಲ್ಪಟ್ಟ ಶರೀರವು, ಕೊಳೆಯುವ ಕಾಲದಲ್ಲಿ, ವಿಷಮಯವಾದ ಗಾಳಿಗಳನ್ನು ಹೊರಕ್ಕೆ ಹೊರಡಿಸುವುದು; ಈ ಗಾಳಿಗಳು ಪ್ರಪಂಚದಲ್ಲಿರುವವರಿಗೆ ಕೆಟ್ಟುದು.

ಮಂತ್ರದಿಂದ ಹುಟ್ಟುವ ಪರಿಸ್ಫುರಣೆಗಳ ಪ್ರಭಾವದಿಂದಲೂ, ಉತ್ತರ ಕ್ರಿಯೆಯಲ್ಲಿ ಉಪಯೋಗಿಸುವ ಕೆಲವು ಪದಾರ್ಥಗಳ ಓಜಶ್ಶಕ್ತಿಯಿಂದಲೂ ಶರೀರ ದಹನಾನಂತರದಲ್ಲಿ ಮಾಡುವ ಶ್ರಾದ್ಧಕರ್ಮಗಳು ಮನೋಮಯ ಕೋಶದ ಸಾಮಗ್ರಿಗಳನ್ನು ಬೇರೊಂದು ತೆರದಲ್ಲಿ ಸೇರಿಸುವುದಕ್ಕೆ ಸಹಾಯಮಾಡುವುವು. ಕೆಲವು ಕಾಲದ ಮೇಲೆ ಸಪಿಂಡೀಕರಣಕರ್ಮವು ಆಗುವುದು; ಇದರಿಂದ ಜೀವನು ಪ್ರೇತಲೋಕದಿಂದ ಪಿತೃಲೋಕಕ್ಕೆ ಹೋಗುವುದಕ್ಕೆ ಸಹಾಯವಾಗುವುದು; ಭುವರ್ಲೋಕದ ಸೂಕ್ಷ್ಮತರ ಭಾಗವಾದ ಪಿತೃಲೋಕದಲ್ಲಿ ಪಿತೃಗಳೊಡನೆ ಜೀವನು ಸೇರಿಸಲ್ಪಡುವನು. ಭೂರ್ಲೋಕದಲ್ಲಿ ಒಂದು ತಲೆ, ಭುವರ್ಲೋಕದಲ್ಲಿ ಆರು ತಲೆ, ಹೀಗೆ ಏಳುತಲೆಗಳ ವರೆಗೂ ಪರಸ್ಪರಾನುಬಂಧವಿರಬಹುದಾಗಿದೆ. ಜೀವನು ಸ್ವರ್ಗಲೋಕಕ್ಕೆ ತೆರಳಿದಮೇಲೆ ಶ್ರಾದ್ಧಕರ್ಮದ ಸಹಾಯವು ಆ ಜೀವನಿಗೆ ಅವಶ್ಯಕವಾಗಿರುವುದಿಲ್ಲ.

## ಸ್ಮೃತ್ಯಾದಿ ವಚನಗಳು.

ದೇಶೇ ಕಾಲೇ ಚ ಪಾತ್ರೇ ಚ ಶ್ರದ್ಧಯಾ ವಿಧಿನಾ ಚ ಯತ್ ।
ಪಿತೄನುದ್ದಿಶ್ಯ ವಿಪ್ರೇಭ್ಯೋ ದಾನಂ ಶ್ರಾದ್ಧಮುದಾಹೃತಂ ॥

(ಬ್ರಹ್ಮಾಂಡಪುರಾಣ　　)

"ಪಿತೃಗಳ ಉದ್ದಿಶ್ಯವಾಗಿ ಶ್ರದ್ಧೆಯಿಂದ ಶಾಸ್ತ್ರೋಕ್ತ ರೀತಿಯಲ್ಲಿ ತಕ್ಕತಕ್ಕ ದೇಶಕಾಲಗಳಲ್ಲಿ ಸತ್ಪಾತ್ರಗಳಾದ ಬ್ರಾಹ್ಮಣರಿಗೆ ಕೊಟ್ಟ ದಾನಗಳು ಶ್ರಾದ್ಧವೆಂದು ತಿಳಿಯಲ್ಪಟ್ಟವೆ."

ಕುರ್ಯಾದಹರಹಃ ಶ್ರಾದ್ಧಮನ್ನಾದ್ಯೇನೋದಕೇನ ಚ |
ಪಯೋಮೂಲಫಲೈರ್ವಾಪಿ ಪಿತೃಭ್ಯಃ ಪ್ರೀತಿಮಾವಹನ್ ||
(ಮನುಸ್ಮೃತಿ. ಅ. ೩. ಶ್ಲೋ. ೭೨).

"ಅನ್ನಾದಿಗಳಿಂದಾಗಲಿ ಉದಕದಿಂದಾಗಲಿ ಹಾಲಿನಿಂದಾಗಲಿ ಕಂದಮೂಲಫಲಗಳಿಂದಾಗಲಿ ಶ್ರಾದ್ಧವನ್ನು ಮಾಡಬೇಕು."

ಪಞ್ಚಭ್ಯಏವ ಮಾತ್ರಾಭ್ಯಃ ಪ್ರೇತ್ಯ ದುಷ್ಕೃತಿನಾಂ ನೃಣಾಮ್ |
ಶರೀರಂ ಯಾತನಾರ್ಥೀಯ ಮನ್ಯದುತ್ಪದ್ಯತೇ ಧ್ರುವಮ್ ||
ತೇನಾನುಭೂಯತಾ ಯಾಮೀಃ ಶರೀರೇಣೇಹ ಯಾತನಾಃ |
ತಾಸ್ವೇವ ಭೂತಮಾತ್ರಾಸು ಪ್ರಲೀಯನ್ತೇ ವಿಭಾಗಶಃ ||
ಯದ್ಯಾಚರತಿ ಧರ್ಮಂ ಸಪ್ರಾಯಶೋಽಧರ್ಮಮಲ್ಪಶಃ |
ತೈರೇವ ಚಾವೃತೋ ಭೂತೈಃ ಸ್ವರ್ಗೇ ಸುಖಮುಪಾಶ್ನುತೇ ||
(ಮನುಸ್ಮೃತಿ. ಅ. ೧೨. ಶ್ಲೋ. ೧೬, ೧೭, ೨೦.)

"ದುಷ್ಕೃತ್ಯಗಳನ್ನೆಸಗಿದ್ದ ಜೀವಗಳಿಗೆ ಮರಣಾನಂತರದಲ್ಲಿ ಸೂಕ್ಷ್ಮತರವಾಗಿದ್ದರೂ ಗಟ್ಟಿಯಾಗಿರುವ ಶರೀರವದೊಂದು ಯಾತನೆಗೋಸ್ಕರವಾಗಿ ಪಂಚತನ್ಮಾತ್ರಗಳಿಂದ ಹುಟ್ಟುವುದು.

"ಯಮನಿಂದ ನಿಯಮಿತಗಳಾದ ಯಾತನೆಗಳನ್ನು ಆ ಶರೀರದಲ್ಲಿ ಅನುಭವಿಸಿದಮೇಲೆ ಆ ಶರೀರವು ಆ ಭೂತಮಾತ್ರಗಳಲ್ಲಿಯೇ ಲಯವಾಗುವುದು.

"ಅಧರ್ಮಕ್ಕಿಂತಲೂ ಹೆಚ್ಚಾಗಿ ಧರ್ಮವನ್ನೇ ಆಚರಿಸುತ್ತಿದ್ದವನಾಗಿದ್ದರೆ, ಆ ಜೀವನು ಸ್ವರ್ಗಕ್ಕೆ ಹೋಗಿ, ಅದೇ ಭೂತಗಳಿಂದ ನಿರ್ಮಿತವಾದ ಶರೀರದಲ್ಲಿದ್ದುಕೊಂಡು ಸುಖಾನುಭವವನ್ನು ಮಾಡುವನು."

ಚಿತಾಮೋಕ್ಷಪ್ರಭೃತಿ ಚ ಪ್ರೇತತ್ವಮುಪಜಾಯತೇ ||
(ಗರುಡಪುರಾಣ. II. v. ೩೬).

"ಚಿತಿಯಲ್ಲಿ ದೇಹವೆಲ್ಲಾ ಸುಟ್ಟುಹೋದಮೇಲೆ ಪ್ರೇತತ್ವವು ಬರುವುದು."

ವರ್ಷಂ ಯಾವತ್ ಖಗಶ್ರೇಷ್ಠ ಮಾರ್ಗೇ ಗಚ್ಛತಿ ಮಾನವಃ |
ತತಃ ಪಿತೃಗಣೈಸ್ಸಾರ್ಧಂ ಪಿತೃಲೋಕಂ ಸಗಚ್ಛತಿ ||
ದತ್ತೈಃ ಷೋಡಶಭಿಃ ಶ್ರಾದ್ಧೈಃ ಪಿತೃಭಿಸ್ಸಹ ಮೋದತೇ |
ಪಿತುಃ ಪುತ್ರೇಣ ಕರ್ತವ್ಯಂ ಸಪಿಂಡೀಕರಣಂ ಸದಾ ||

(ಗರುಡಪುರಾಣ. II. xvi. ೬-೭, ೧೦).

"ಮಾರ್ಗದಲ್ಲಿ (ಎಂದರೆ ಪ್ರೇತಲೋಕದಲ್ಲಿ) ಒಂದು ವರುಷದವರೆಗೂ, ಎಲೈ ಖಗಶ್ರೇಷ್ಠನೇ, ಜೀವನು ಇರುವನು ; ಆಮೇಲೆ ಪಿತೃಲೋಕಕ್ಕೆ ಹೋಗಿ ಪಿತೃಗಣಗಳೊಂದಿಗೆ ವಾಸವಾಗಿರುವನು.

"ಷೋಡಶ ಶ್ರಾದ್ಧಕರ್ಮಗಳಿಂದ ಜೀವನು ಪಿತೃಗಳೊಡನೆ ಸಂತೋಷದಿಂದಿರುವುದಕ್ಕೆ ಸಹಾಯವಾಗುವುದು ; ಆದುದರಿಂದ ಪುತ್ರನು ತಂದೆಗಾಗಿ ಸಪಿಂಡೀಕರಣ ಕರ್ಮಗಳನ್ನು ತಪ್ಪದೆ ಮಾಡಲೇಬೇಕು."



ಇದು ಸನಾತನಧರ್ಮದೀಪಿಕೆಯ ಕರ್ಮಪ್ರಕಾಶಿಕೆಯೆಂಬ ದ್ವಿತೀಯ ಭಾಗದಲ್ಲಿ ಶ್ರಾದ್ಧವಿಚಾರವೆಂಬ ದ್ವಿತೀಯಾಧ್ಯಾಯ.



# ದ್ವಿತೀಯಭಾಗ.

## ತೃತೀಯಾಧ್ಯಾಯ.

---

### ಶೌಚಾಚಾರವಿಚಾರ





ಶರೀರ ನೈರ್ಮಲ್ಯವನ್ನು ರಕ್ಷಿಸಿಕೊಳ್ಳುತ್ತಾ ದೇಹಾರೋಗ್ಯವನ್ನೂ ಕಾಯಶಕ್ತಿಯನ್ನೂ ದೃಢಪಡಿಸಿಕೊಳ್ಳುವ ವಿಧಾನಕ್ಕೆ ಶೌಚಾಚಾರವೆಂದು ಹೆಸರು ಬಂದಿರುತ್ತದೆ. ಸ್ವಭಾವವಿಧಿ (Law of Nature) ಯಾವುದೋ ಒಂದನ್ನು ಉಲ್ಲಂಘಿಸಿದುದಕ್ಕೆ ರೋಗವು ಗುರುತಾಗಿರುವುದು ; ಮತ್ತು ಸ್ವಭಾವವಿಧಿಗಳು ಭಗವಂತನ ವಿಧಿಗಳಾಗಿಯೂ, ಪರಮಾತ್ಮನ ವ್ಯಕ್ತಭಾವಗಳಾಗಿಯೂ (Expressions of His being) ಇರುವುದನ್ನು ಮಹರ್ಷಿಗಳು ತಿಳಿದವರಾಗಿ, ಭಗವಂತನ ಅಂಶವು ಪ್ರಕೃತಿನಿಬದ್ಧವಾದಾಗ ಜೀವನೆನಿಸಿಕೊಳ್ಳುವುದು ಎಂಬುದನ್ನೂ ಗ್ರಹಿಸಿದವರಾಗಿ ಸ್ವಭಾವವಿಧಿಗಳಿಗನುಗುಣವಾಗಿ ನಡೆಯುವುದು ಉಲ್ಲಂಘಿಸಕೂಡದ ಕರ್ತವ್ಯವಾಗಿದೆಯೆಂದು ತೋರಿಸಿರುತ್ತಾರೆ.

ಕಣ್ಣಿಗೆ ಕಾಣುವ ಶರೀರವೂ ಪ್ರಾಣಮಯಕೋಶವೆಂಬ ಕಣ್ಣಿಗೆ ಕಾಣಿಸದ ಅದರ ಪ್ರತಿಕೃತಿಯೂ ಪಾರ್ಥಿವತತ್ವದ ಪದಾರ್ಥಗಳಿಂದ ರಚಿತವಾಗಿರುವುದರಿಂದ, ಇವೆರಡನ್ನೂ ಶುದ್ಧಿಮಾಡಿಕೊಳ್ಳುವುದಕ್ಕೂ ಶುದ್ಧವಾಗಿಟ್ಟಿರುವುದಕ್ಕೂ ಪಾರ್ಥಿವ ಸಾಮಗ್ರಿಗಳನ್ನೇ ಉಪಯೋಗಿಸುವುದು ಅವಶ್ಯಕವಾಗಿರುತ್ತದೆ. ಆದುದರಿಂದ ನಾವು ಈ ಸಾಧಕ ಸಾಮಗ್ರಿಗಳನ್ನು ಸರಿಯಾಗಿ ತಿಳಿಯಬೇಕಾಗಿದೆ.

ನಾವು ತಿನ್ನುವ ತಿಂಡಿಯಿಂದಲೂ, ಕುಡಿವ ದ್ರವಪದಾರ್ಥದಿಂದಲೂ, ಉಚ್ಛ್ವಾಸಿಸುವ ಗಾಳಿಯಿಂದಲೂ, ನಮ್ಮ ಸುತ್ತಲೂ ಇರುವ ಪದಾರ್ಥಗಳಿಂದಲೂ ಜನರಿಂದಲೂ ಎಡೆವಿಡದೆ ನಮ್ಮ ಮೇಲೆ ನಮ್ಮ ದೃಷ್ಟಿಗೆ ಗೋಚರವಾಗದಂತೆ ವರ್ಷಿಸುತ್ತಿರುವ ಬಹು ಸೂಕ್ಷ್ಮಗಳಾದ ತುಂತುರುಗಗಳಿಂದಲೂ. ಶೇಖರಿಸಲ್ಪಟ್ಟ ಸೂಕ್ಷ್ಮಗಳಾದ ಕಣಗಳಿಂದ ನಮ್ಮ ದೃಶ್ಯಶರೀರವು ಅಥವಾ ಅನ್ನಮಯಕೋಶವು ರಚಿಸಲ್ಪಟ್ಟಿರುತ್ತದೆ. ಹೀಗೆ ಹೇಳುವುದು ವಿಜಾತೀಯವಾಗಿದ್ದಂತೆ ತೋರಬಹುದು. ಆದರೆ ನಾವು ಹೇಳಿರುವುದು ನಿಜವಾಗಿಯೇ ಇದೆ. ನಮ್ಮ ಶರೀರಗಳು ನಿರ್ಜೀವ ಪದಾರ್ಥಗಳಿಂದ ಮಾಡಲ್ಪಟ್ಟಿಲ್ಲ ; ಏಕೆಂದರೆ ನಿರ್ಜೀವ ಪದಾರ್ಥವೆಂಬುದು ಲೋಕದಲ್ಲೆಲ್ಲಿಯೂ ಇಲ್ಲ. ಪದಾರ್ಥ ಅಥವಾ ವಸ್ತು ಎನಿಸಿಕೊಂಡಿರುವುದೆಲ್ಲವೂ ಪರಮಾಣುಗಳೆಂಬುದಾಗಿ ಕರೆಯಲ್ಪಟ್ಟಿರುವ ಸಜೀವ ಕಣಗಳಿಂದಲೂ ಪರಮಾಣು ವ್ಯೂಹಗಳೆಂದೆನಿಸಿಕೊಂಡಿರುವ ಇತರ ಸಜೀವ ಕಣಸಮುದಾಯಗಳಿಂದಲೂ ಮಾಡಲ್ಪಟ್ಟಿರುತ್ತದೆ. ರೇಣುವೆನಿಸಿಕೊಂಡಿರುವ ಸಣ್ಣವಸ್ತುವೂ ಕೂಡ ಕೋಟ್ಯನುಕೋಟಿ ಸೂಕ್ಷ್ಮ ಜೀವಗಳ ಸಮುದಾಯಗಳಿಂದ ಆಗಿರುತ್ತದೆ. ಈ ಸೂಕ್ಷ್ಮಜೀವ ಕೋಟಿಗಳಲ್ಲಿ ಎಷ್ಟೆಷ್ಟೋ ತರಗತಿಗಳಿರುವುವು ; ಇವು ಚಕ್ಷುರಿಂದ್ರಿಯಕ್ಕೆ ಗೋಚರವಾಗುವುದೇ ಇಲ್ಲ ; ಇವುಗಳ ಸಮುದಾಯಗಳು ಗಾತ್ರವಾಗುತ್ತಾ ಬಂದಮೇಲೆ ಗೋಚರವಾಗುತ್ತವೆ. ಇಂಗ್ಲೀಷು ಭಾಷೆಯಲ್ಲಿ Microbes ಎಂಬದಾಗಿಯೂ ನಮ್ಮಲ್ಲಿ ಸೂಕ್ಷ್ಮ ಸಸಿವಿಶೇಷಗಳೆಂಬದಾಗಿಯೂ ಕರೆಯಲ್ಪಡುವುವುಗಳನ್ನು ನಾವು ಭೂತಕನ್ನಡಿಗಳ ಸಹಾಯದಿಂದ ನೋಡಬಹುದಾಗಿದೆ. ಈ ಸೂಕ್ಷ್ಮ ಸಸಿವಿಶೇಷಗಳೂ ಇವುಗಳಿಗಿಂತಲೂ ಸಣ್ಣಗಿರುವ ಸೂಕ್ಷ್ಮ ವಸ್ತುಕಣಗಳೂ ವಾಯುಮಂಡಲದಲ್ಲಿ ತೇಲುತ್ತಲೇ ಇರುವುವು. ನಮ್ಮ ಶರೀರಗಳೂ ಇತರ ಎಲ್ಲಾವಸ್ತುಗಳೂ ಇವುಗಳಿಂದ ಮಾಡಲ್ಪಟ್ಟವೆ. ಕಲ್ಲುಗಳು, ಸಸಿಗಳು, ತಿರ್ಯಗ್ಜಂತುಗಳು, ಮಾನವರು, ನಮ್ಮ ಸುತ್ತಲೂ ಇರುವ ಕೈಗಾರಿಕೆಯ ವಸ್ತುಗಳು, ಮನೆಗಳು, ಕುರ್ಚಿ ಮೇಜು ಮುಂತಾದುವುಗಳು, ವಸ್ತ್ರಗಳು—ಸಕಲವೂ ಎಡವಿಡದೆ ಈ ಅಣುಗಳ ಸಮುದಾಯಗಳನ್ನು ಹೊರಕ್ಕೆ ಹೊರಡಿಸುತ್ತಲೇ ಇರುತ್ತವೆ. ನಮ್ಮ ಸಮೀಪ

ದಲ್ಲಿರುವ ವಸ್ತುಗಳೆಲ್ಲವೂ, ಇವುಗಳಿಗಿಂತಲೂ ವಿಶೇಷವಾಗಿ, ನಾವು ಸ್ಪರ್ಶಮಾಡುವ ವಸ್ತುಗಳೆಲ್ಲವೂ ತಮ್ಮ ತಮ್ಮ ಕಣಗಳಲ್ಲಿ ನಮಗೆ ಕೆಲವನ್ನು ಕೊಡುವುವು, ಮತ್ತು ನಾವು ಅವುಗಳಿಗೆ ನಮ್ಮ ಶರೀರದ ಕಣಗಳಲ್ಲಿ ಕೆಲವನ್ನು ಕೊಡುತ್ತಿದೇವೆ. ನಾವು ಆರೋಗದೃಢಗಾತ್ರರಾಗಿರಬೇಕಾದರೆ, ಪರಿಶುದ್ಧಗಳಾದ ಕಣಗಳನ್ನೇ ನಾವು ಶರೀರದೊಳಕ್ಕೆ ತೆಗೆದುಕೊಂಡು, ಅಪರಿಶುದ್ಧಗಳಾದುವುಗಳನ್ನು ಶರೀರದಿಂದ ಹೊರಕ್ಕೆ ಹೊರಡಿಸಿಬಿಡಬೇಕು. ಶೌಚವಿಧಿಗಳು ಹೀಗೆ ಮಾಡುವ ತೆರವನ್ನು ನಮಗೆ ತೋರಿಸಿಕೊಡುವುದಕ್ಕಾಗಿ ಹುಟ್ಟಿವೆ.

ನಾವು ಉಣ್ಣುವ ಊಟವು ಪರಿಶುದ್ಧವಾಗಿರಬೇಕು. ಸಕಲವಸ್ತುಗಳೂ ವರ್ಧಿಷ್ಣುಗಳಾಗಿಯೋ ಕ್ಷಯಿಷ್ಣುಗಳಾಗಿಯೋ ಇರುವುವು; ಬೆಳೆಯುತ್ತಲಿರುತ್ತವೆ ಅಥವಾ ಸೊರಗುತ್ತಲಿರುತ್ತವೆ. ಪರಿಶುದ್ಧವಾದ ಆಹಾರವು ವರ್ಧಿಸುವ ಜೀವವುಳ್ಳುದಾಗಿರಬೇಕು; ವಿಕಸಿತವಾಗುತ್ತಲಿರುವ ಜೀವವನ್ನುಳ್ಳುದಾಗಿರಬೇಕು. ಹೊಸ ಎಲೆಗಳೂ ಹಣ್ಣುಗಳೂ, ಕಂದಮೂಲಗಳೂ, ಧಾನ್ಯಗಳೂ, ವಿಕಸಿತವಾಗುತ್ತಲಿರುವ ಪ್ರಾಣದಿಂದ ತುಂಬಿರುವುವು. ನಮ್ಮ ಶರೀರದೊಳಕ್ಕೆ ಇವುಗಳನ್ನು ತೆಗೆದುಕೊಂಡರೆ, ನಮ್ಮ ಶರೀರಗಳು ಕಟ್ಟಲ್ಪಡುವುವು; ಕೆಡಿಸಲ್ಪಡುವುದಿಲ್ಲ. ಈ ವಸ್ತುಗಳು ತಂಗಳಾದರೆ ಅಪರಿಶುದ್ಧಗಳಾಗುವುವು; ಏಕೆಂದರೆ, ಅವುಗಳಿಂದ ಜೀವವು ತೆರಳುತ್ತಲಿವೆ, ಅವು ಮರಣಾವಸ್ಥೆಯ ದಾರಿಯಲ್ಲಿವೆ. ಮಾಂಸವೆಂಬುದೆಲ್ಲವೂ ಹೆಚ್ಚಾಗಿಯೋ ಕಡಮೆಯಾಗಿಯೋ ಅಪರಿಶುದ್ಧವಾಗಿಯೇ ಇರುವುದು; ಹೇಗೆಂದರೆ, ಅದರಲ್ಲಿದ್ದ ಜೀವವು ಹೊರಕ್ಕೆ ತೆಗೆಯಲ್ಪಟ್ಟಿರುವುದು, ಮತ್ತು ಅದು ಕೊಳೆಯುವುದಕ್ಕೆ ಸಿದ್ಧವಾಗಿರುತ್ತದೆ. ಅದರಿಂದ ರಚಿತವಾಗುವ ಶರೀರವು, ಸಸ್ಯವರ್ಗದ ಪದಾರ್ಥದಿಂದ ರಚಿತವಾಗುವ ಶರೀರಕ್ಕಿಂತ, ರೋಗಕ್ಕೊಳಗಾಗುವ ತೆರದಲ್ಲಿರುತ್ತದೆ; ಅಂತಹ ಶರೀರದ ಗಾಯಗಳು ಮಾಯುವುದೂ ನಿದಾನವಾಗುತ್ತದೆ, ಜ್ವರಗಳೂ ತೀಕ್ಷ್ಣವಾಗಿ ಏರುವುವು.

ದ್ರವ ಪದಾರ್ಥಗಳಲ್ಲಿ, ಪರಿಶುದ್ಧವಾದ ನೀರು ಆರೋಗ್ಯರಕ್ಷಣೆಗೆ ಅವಶ್ಯಕವಾಗಿದೆ. ಟೀ, ಕಾಫಿ, ಕೋಕೊ (tea, coffee, cocoa) ಮುಂ

ತಾದುವುಗಳ ಕಷಾಯಗಳನ್ನು, ಮಿತವಾಗಿ ತೆಗೆದುಕೊಂಡರೆ, ಕೆಡಕಾಗುವುದಿಲ್ಲ, ಮತ್ತು ಅನೇಕ ವೇಳೆಗಳಲ್ಲಿ ಪ್ರಯೋಜನಕಾರಿಗಳಾಗುವುವು. ಕ್ಷೀರವು ಬಹು ಪರಿಶುದ್ಧವಾದ ಆಹಾರವಾಗಿಯೂ ಪೇಯವಾಗಿಯೂ ಇದೆ. ಮಾದಕದ್ರವ್ಯವು (alcohol) ಸೇರಿರುವ ಪೇಯಗಳೆಲ್ಲಾ ಅಪರಿಶುದ್ಧ ವಸ್ತುಗಳು, ಮತ್ತ ಅವು ಶರೀರಕ್ಕೆ ವಿಶೇಷವಾಗಿ ಕೆಡಕನ್ನುಂಟುಮಾಡುತ್ತವೆ. ಅವು ನೊರೆ ಹುಟ್ಟಿದ ವಸ್ತುವಿನಿಂದ ಆದ ಮದ್ಯ, ಅವುಗಳಲ್ಲಿ ವಸ್ತುಲಯವು (decomposition) ಪ್ರಾರಂಭವಾಗಿರುತ್ತದೆ, ಶಾರೀರ ಸಾಮಗ್ರಿಗಳನ್ನು (tissues of the body) ಅವು ಘಾತಿಸುತ್ತವೆ, ಮತ್ತು ಅವು ಮೊದಲಿಗೆ ವಿಷಪ್ರಾಯವಾಗಿಯೇ ಇರುವುವು. ಅಕಾಲಕ್ಷಯವನ್ನೂ ಅಕಾಲಮರಣವನ್ನೂ ತರುವುವುಗಳಾಗಿ, ಉಷ್ಣದೇಶಗಳಲ್ಲಿ ವಿಶೇಷವಾಗಿ ಹಾನಿಯನ್ನುಂಟುಮಾಡುವುವು. ಜನರ ವಿಶ್ವಾಸಕ್ಕೆ ಪಾತ್ರವಾಗಿದ್ದರೂ ಆರೋಗ್ಯಹಾನಿಯನ್ನುಂಟು ಮಾಡುವ ಭಂಗಿಯಂತಹ ಮಾದಕ ಪದಾರ್ಥಗಳು ಸೇರಿರುವ ಪೇಯಗಳೂ ಕೂಡ ಹೀಗೆಯೇ ಹಾನಿಕರಗಳಾಗಿರುತ್ತವೆ.

ಪರಿಶುದ್ಧವಾದ ಆಹಾರವೂ ಪೇಯವೂ ಆರೋಗ್ಯರಕ್ಷಣೆಗೆ ಎಷ್ಟು ಅವಶ್ಯಕಗಳಾಗಿರುತ್ತವೆಯೋ ಪರಿಶುದ್ಧವಾದ ಗಾಳಿಯೂ ಅಷ್ಟು ಅವಶ್ಯಕವಾಗಿರುತ್ತದೆ. ನಾವು ಉಸುರನ್ನು ಹೊರಕ್ಕೆ ಬಿಟ್ಟಾಗೆಲ್ಲಾ ಒಂದು ಬಗೆಯ ಆವಿಯನ್ನು ಹೊರಡಿಸುವರಾಗುತ್ತೇವೆ ; ಈ ಆವಿಗೆ ಇಂಗಾಲಾಮ್ಲ (carbon dioxide) ವೆಂದು ಹೆಸರು ; ಮತ್ತನ್ನುಂಟು ಮಾಡುವುದು ಇದರ ಲಕ್ಷಣ ; ದಾರಿಯಿಲ್ಲದಂತೆ ಮುಚ್ಚಲ್ಪಟ್ಟಿರುವ ಸ್ಥಳದಲ್ಲಿ ನಾವು ಕುಳಿತರೆ, ಅಲ್ಲಿಯ ಗಾಳಿಗೆ ಇದು ಸೇರುವುದರಿಂದ ಉಛ್ವಾಸಕ್ಕೆ ಆ ಗಾಳಿಯು ಅನರ್ಹವಾಗುವುದು. ಶರೀರದ ಒಳಭಾಗದಿಂದ ಮಲರೂಪದ ಅಣುಗಳನ್ನು ಉಸುರು ಹೊರಕ್ಕೊಯ್ದು ತರುತ್ತದೆ ; ಹೊಸಗಾಳಿಯು ಅವುಗಳನ್ನು ಹೊತ್ತುಕೊಂಡು ಹೋಗದಿದ್ದರೆ, ಅವು ಉಛ್ವಾಸ ಕಾರ್ಯದಲ್ಲಿ ನಮ್ಮ ಶ್ವಾಸಕೋಶಗಳಿಗೂ ಇತರರ ಶ್ವಾಸಕೋಶಗಳಿಗೂ ಸೇರಿ, ವಿಷಪ್ರಾಯವಾಗಿ ಪರಿಣಮಿಸುವುವು.

ಪರಿಶುದ್ಧಗಳಾದ ಸಾಮಗ್ರಿಗಳಿಂದ ನಮ್ಮ ಶರೀರಗಳನ್ನು ರಚಿಸಿಕೊಳ್ಳುವ ಕೆಲಸವೊಂದೇ ಅಲ್ಲ, ನಮ್ಮ ನಮ್ಮ ಶರೀರಗಳ ಮೇಲ್ಭಾಗಗ

ಳನ್ನೂ ನಾವು ಸ್ನಾನ ಪ್ರಕ್ಷಾಳನಗಳ ಮೂಲಕವಾಗಿ ಪರಿಶುದ್ಧಸ್ಥಿತಿಯಲ್ಲಿಟ್ಟಿರಬೇಕು ; ಮೈಯನ್ನೆಲ್ಲಾ ದಿವಸಕ್ಕೊಂದಾವರ್ತಿಯಾದರೂ ತೊಳೆಯಬೇಕು ; ಸಡಿಲವಾದ ಕಣಗಳೆಲ್ಲಾ ತೊಳೆದು ಹೋಗುವಂತೆಯೂ, ಚರ್ಮವು ನಿರ್ಮಲವಾಗಿಯೂ ಹೊಸದಾಗಿಯೂ ಇರುವಂತೆಯೂ ಸ್ನಾನಕಾಲದಲ್ಲಿ ನಾವು ಮೈಯನ್ನು ಚೆನ್ನಾಗಿ ಉಜ್ಜಿ ತೊಳೆಯಬೇಕು. ಕೊಳೆಯಾದ ಶಾರೀರಭಾಗಗಳನ್ನೂ ಕೈಕಾಲುಗಳನ್ನೂ ತೊಳೆಯಬೇಕು, ಮತ್ತು ಊಟಕ್ಕೆ ಮೊದಲೂ ಊಟವಾದಮೇಲೆಯೂ ಕೈಕಾಲು ಮುಂತಾದುವುಗಳನ್ನು ತಪ್ಪದೆ ತೊಳೆಯಬೇಕು. ಕೈ ತೊಳೆಯದೆ ತಿಂಡಿಯನ್ನು ತಿನ್ನುವುದರಿಂದ ಧೂಳಿಯೂ ಕೆಡಕನ್ನುಂಟುಮಾಡುವ ಇತರ ಕಣಗಳೂ ಆಹಾರಕ್ಕೆ ಸೇರಬಹುದಾಗಿವೆ ; ಊಟವಾದಮೇಲೆ ಕೈ ಮುಂತಾದುವನ್ನು ತೊಳೆಯುವುದರ ಅವಶ್ಯಕತೆ ಸ್ಪಷ್ಟವಾಗಿಯೇ ಇರುತ್ತದೆ. ಚರ್ಮವನ್ನು ತಗಲಿರುವ ಬಟ್ಟೆಗಳನ್ನೂ ಪ್ರತಿದಿನದಲ್ಲಿಯೂ ಒಗೆಯಬೇಕು.

ಆಂತರ ಪ್ರಪಂಚಕ್ಕೆ ಹೆಗ್ಗುರುತಾಗಿ ಬಾಹ್ಯಪ್ರಪಂಚವು ಇರುವುದೆಂದು ಅನಾದಿಕಾಲದಿಂದಲೂ ಭಾವಿಸುತ್ತಿರುವ ಆರ್ಯಧರ್ಮಾವಲಂಬಿಯು ಬಾಹ್ಯ ಶುದ್ಧಿಯ ಭಾವದ ಜತೆಗೆ ಅಂತಃಶುದ್ಧಿಯ ಭಾವವನ್ನೂ ಜೋಡಿಸಿಕೊಂಡಿರುವನು, ಸ್ಥೂಲ ಶರೀರವನ್ನು ತೊಳೆಯುವ ಕಾಲದಲ್ಲಿ ಸೂಕ್ಷ್ಮ ಶರೀರಗಳ ಶುದ್ಧ್ಯರ್ಥವಾಗಿ ಮಂತ್ರೋಚ್ಚಾರಣೆಯನ್ನು ಮಾಡುವವನಾಗಿ, ಸರ್ವಸಾಧಾರಣಗಳಾದ ನಿತ್ಯಕರ್ಮಗಳ ಜತೆಗೆ ಧರ್ಮತಂತುಗಳನ್ನೂ ಸೇರಿಸಿ ತನ್ನ ಸಂಸಾರವಸ್ತ್ರವನ್ನು ನೇಯುವವನಾಗಿದ್ದಾನೆ.

ಶೌಚವು ಬಹುಮುಖ್ಯವಾದುದೆಂದು ತೋರಿಸುವುದಕ್ಕೆ ಮಹರ್ಷಿಗಳು ಏಕೆ ಇಷ್ಟು ತೊಂದರೆಯನ್ನು ತೆಗೆದುಕೊಂಡಿರುವರೋ ಅದನ್ನು ವಿದ್ಯಾರ್ಥಿಯು ಈಗ ತಿಳಿಯುವನಾಗುವನು. ಕೊಳೆಯ ಮೈಯನ್ನೋ ಅಥವಾ ಕೊಳೆಯ ಬಟ್ಟೆಯನ್ನೋ ಇಟ್ಟುಕೊಂಡಿರುವ ಮಾನವನು ತನ್ನ ಸುತ್ತಲೂ ಇರುವ ಗಾಳಿಯನ್ನು ಅಪರಿಶುದ್ಧಗಳಾದ ಕಣಗಳಿಂದ ಕೆಡಿಸುವದಲ್ಲದೆ ತನ್ನ ಸುತ್ತಲೂ ಇರುವ ಮಾನವರಿಗೆ ವಿಷವನ್ನೂಡುವನಾಗುತ್ತಾನೆ. ಸ್ವಂತ ಸುಖಕ್ಕಾಗಿ ಮಾತ್ರವೇ ಅಲ್ಲ, ಪರರ ಸುಖಕ್ಕೂ ಕೂಡ ನಾವುಗಳು ಶುಚಿಯಾಗಿರಬೇಕು. ಕೊಳೆಯ ಮನುಜನೂ, ಕೊಳೆಯ ಬಟ್ಟೆಗಳೂ,

ಕೊಳೆಯ ಮನೆಗಳೂ ವಿಷಪ್ರಸಾರಕಸ್ಥಾನಗಳಾಗಿರುತ್ತವೆ, ಲೋಕ ಕಂಟಕಗಳಾಗಿಯೂ ಇರುತ್ತವೆ.

ಪ್ರಾಣಮಯಕೋಶದ ಪಾರಿಶುದ್ಧ್ಯವು ಅದರಲ್ಲಿರುವ ಓಜಶ್ಶಕ್ತಿಯ ಪ್ರವಾಹಗಳಿಗೆ (magnetic currents) ಅನುಗುಣವಾಗಿರುವುದು. ಸುತ್ತಮುತ್ತಲೂ ಇರುವ ಪದಾರ್ಥಗಳ ಓಜಶ್ಶಕ್ತಿಯಿಂದ ಈ ಕೋಶವು ಬಹು ಬೇಗನೆ ವ್ಯತ್ಯಾಸಸ್ಥಿತಿಯನ್ನು ಹೊಂದುತ್ತದೆಯಾದುದರಿಂದ ಈ ಭಾಗದಲ್ಲಿಯೂ ನಾವು ಜಾಗರೂಕರಾಗಿರಬೇಕು. ಈರುಳ್ಳಿ ಬೆಳ್ಳುಳ್ಳಿ ಮುಂತಾದ ಪದಾರ್ಥಗಳು ಅನ್ನಮಯಕೋಶಕ್ಕೆ ಕೆಡಕನ್ನುಂಟುಮಾಡದಿದ್ದರೂ ಪ್ರಾಣಮಯಕೋಶಕ್ಕೆ ಬಹಳ ಕೆಡಕನ್ನು ಮಾಡುವುವು. ಮಾಂಸದ ಕೆಡಕಿಗಿಂತಲೂ ಇವುಗಳ ಕೆಡಕು ಹೆಚ್ಚಾಗಿರುವುದು. ಮಾದಕದ್ರವ್ಯಗಳಿಂದ ಹೊರಡುವ ಕಣಗಳಿಂದಲೂ ಪ್ರಾಣಮಯ ಕೋಶದಿಂದ ಹೊರಡುವ ಅಣುಗಳಿಂದಲೂ ಈ ಕೋಶದ ಸ್ಥಿತಿಯು ವಿಶೇಷವಾಗಿ ವ್ಯತ್ಯಾಸಗಳನ್ನು ಹೊಂದುವುದು. ಸ್ವಂತವಾದ ತನ್ನ ಸೂಕ್ಷ್ಮಶರೀರದ ಸ್ಥಿತಿಯಿಂದಲೂ, ಇದರ ಮೂಲಕವಾಗಿ ಇತರರ ಸೂಕ್ಷ್ಮ ಶರೀರಾವಸ್ಥೆಗಳಿಂದಲೂ ಈ ಪ್ರಾಣಮಯಕೋಶಕ್ಕೆ ಇನ್ನೂ ಹೆಚ್ಚಾಗಿ ಅವಸ್ಥಾಂತರಗಳು ಉಂಟಾಗುವುವು. ಕೆಟ್ಟ ಸಹವಾಸದ ಕೆಡಕುಗಳು ಹುಟ್ಟುವುದು ಈ ತೆರದಲ್ಲಿ. ಸೂಕ್ಷ್ಮಶರೀರದ ಪಾರಿಶುದ್ಧ್ಯವು ಈ ಸೂಕ್ಷ್ಮಶರೀರವನ್ನುಳ್ಳಾತನ ಇಚ್ಛಾಚಿಂತೆಗಳ ಪಾರಿಶುದ್ಧ್ಯಕ್ಕೆ ಅನುಗುಣವಾಗಿರುತ್ತದೆ. ಪಾರ್ಥಿವಕೋಶಗಳ ಅಪರಿಶುದ್ಧತೆಯ ಪ್ರಬಲತಮ ಮೂಲಸ್ಥಾನವು ಇದೇ ಆಗಿದೆ. ಇಚ್ಛೆಗಳೂ ಚಿಂತೆಗಳೂ ಅಪರಿಶುದ್ಧಗಳಾಗಿರುವಲ್ಲಿ ಪಾರ್ಥಿವಕೋಶಗಳಾವುವೂ ಪರಿಶುದ್ಧಗಳಾಗಿಯೂ ರೋಗ ರಹಿತಗಳಾಗಿಯೂ ಇರಲೇ ಆರವು. ಮಾನವನು ಬಾಹ್ಯ ಶೌಚ ವಿಧಿಗಳನ್ನು ಲೇಶವೂ ತಪ್ಪದೆ ನಡೆಯಿಸುವವನಾದರೂ, ಗರ್ವವುಳ್ಳವನಾಗಿಯಾಗಲಿ, ಅಸಹಿಷ್ಣುವಾಗಿಯಾಗಲಿ, ಕ್ರೂರನಾಗಿಯಾಗಲಿ, ಡಾಂಭಿಕನಾಗಿಯಾಗಲಿ, ಸಂಶಯಾತ್ಮನಾಗಿಯಾಗಲಿ ಇದ್ದರೆ, ಶೌಚಾಚಾರಗಳು ತೊಳೆಯುವುದಕ್ಕಿಂತಲೂ ವೇಗವಾಗಿ ಕಶ್ಮಲಗಳನ್ನು ತನ್ನ ಪಾರ್ಥಿವಕೋಶಗಳಿಗೆ ತುಂಬುತ್ತಿರುವನಾಗುವನು. ದೇವರ್ಷಿಗಳ ನೋಟಕ್ಕೆ ಇಂತಹ ಮಾನವನು ಅಶುಚಿಯಾಗಿಯೇ ಇರುವನು.

## ಸ್ಮೃತ್ಯಾದಿ ವಚನಗಳು.

ದೂರಾದಾವಸಥಾನ್ಮೂತ್ರಂ ದೂರಾತ್ಪಾದಾವಸೇಚನಂ ।
ಉಚ್ಛಿಷ್ಟಾನ್ನಂ ನಿಷೇಕಂ ಚ ದೂರಾದೇವ ಸಮಾಚರೇತ್ ॥
(ಮನುಸ್ಮೃತಿ. ಅ. ೪ ಶ್ಲೋ. ೧೫೧).

"ಮೂತ್ರ ಪುರೀಷಾದಿಗಳನ್ನು ಮನೆಗೆ ದೂರದಲ್ಲಿ ಮಾಡಲಿ ; ಕಾಲುಗಳನ್ನು ತೊಳೆದ ನೀರನ್ನೂ ದೂರವಾಗಿ, ಉಚ್ಛಿಷ್ಟಾನ್ನವನ್ನೂ ಮೈತೊಳೆದ ನೀರನ್ನೂ ದೂರವಾಗಿ ತೆಗೆದುಕೊಂಡು ಹೋಗಿ ಹಾಕಲಿ."

ಆಚಮ್ಯ ಪ್ರಯತೋ ನಿತ್ಯಮುಭೇ ಸಂಧ್ಯೇ ಸಮಾಹಿತಃ ।
ಶುಚೌ ದೇಶೇ ಜಪನ್ ಜಪ್ಯಮುಪಾಸೀತ ಯಥಾವಿಧಿ ॥
(ಮನುಸ್ಮೃತಿ. ಅ. ೨, ಶ್ಲೋ. ೨೨೨).

"ಆಚಮನದಿಂದ ಪರಿಶುದ್ಧನಾಗಿ ದ್ವಿಜನು ಸಂಧ್ಯಾಕಾಲಗಳೆರಡರಲ್ಲಿಯೂ ಶುಚಿಯಾದ ಸ್ಥಳದಲ್ಲಿ ಸಮಾಹಿತ ಮನಸ್ಸುಳ್ಳವನಾಗಿ ಕುಳಿತು ವಿಧಿಗನುಸಾರವಾಗಿ ಪ್ರತಿ ದಿನದಲ್ಲಿಯೂ ಜಪವನ್ನು ಜಪಿಸಿ ಉಪಾಸನೆಯನ್ನು ಮಾಡಬೇಕು."

ಉಪಸ್ಪೃಶ್ಯ ದ್ವಿಜೋ ನಿತ್ಯಮನ್ನಮದ್ಯಾತ್ ಸಮಾಹಿತಃ ।
ಭುಕ್ತ್ವಾ ಚೋಪಸ್ಪೃಶೇತ್ ಸಮ್ಯಗದ್ಭಿಃ ಖಾನಿ ಚ ಸಂಸ್ಪೃಶೇತ್ ॥
(ಮನುಸ್ಮೃತಿ. ಅ. ೨. ಶ್ಲೋ. ೫೩).

"ಕೈಕಾಲುಗಳನ್ನು ತೊಳೆದುಕೊಂಡವನಾಗಿ ಆಚಮನವನ್ನು ಮಾಡಿ ದ್ವಿಜನು ಸಮಾಹಿತ ಮನಸ್ಸುಳ್ಳವನಾಗಿ ಊಟವನ್ನು ಮಾಡಬೇಕು ; ಹಾಗೆ ಊಟ ಮಾಡಿದಮೇಲೆ ಚೆನ್ನಾಗಿ ಬಾಯನ್ನು ಮುಕ್ಕುಳಿಸಿ, ಆಚಮನ ಮಾಡಿ, ಇಂದ್ರಿಯ ಸ್ಥಾನಗಳನ್ನೂ ನೀರಿನಿಂದ ಸ್ಪರ್ಶಮಾಡುವವನಾಗಲಿ."

ಜ್ಞಾನಂ ತಪೋಽಗ್ನಿರಾಹಾರೋ ಮೃನ್ಮನೋ ವಾರ್ಯುಪಾಂಜನಂ ।
ವಾಯುಃ ಕರ್ಮಾರ್ಕಕಾಲೌ ಚ ಶುದ್ಧೇಃ ಕರ್ತ್ರಾಣಿ ದೇಹಿನಾಂ ॥
(ಮನುಸ್ಮೃತಿ. ಅ. ೫, ಶ್ಲೋ. ೧೦೫).

"ಜ್ಞಾನ, ತಪಸ್ಸು, ಅಗ್ನಿ, ಆಹಾರ, ಮೃತ್ತಿಕೆ, ಮನಸ್ಸು, ನೀರು, ಉಪಾಂಜನ, ಗಾಳಿ, ಕರ್ಮ, ಸೂರ್ಯ, ಕಾಲ—ಇವುಗಳಿಂದ ಶರೀರ ಶುದ್ಧಿಯಾಗುವುದು."

ಅದ್ಭಿರ್ಗಾತ್ರಾಣಿ ಶುದ್ಧ್ಯಂತಿ ಮನಸ್ಸತ್ಯೇನ ಶುದ್ಧ್ಯತಿ ।
ವಿದ್ಯಾತಪೋಭ್ಯಾಂ ಭೂತಾತ್ಮಾ ಬುದ್ಧಿರ್ಜ್ಞಾನೇನ ಶುದ್ಧ್ಯತಿ ‖
(ಮನುಸ್ಮೃತಿ. ಅ. ೫. ಶ್ಲೋ. ೧೦೯).

"ನೀರಿನಿಂದ ಶರೀರವು ಶುದ್ಧವಾಗುವುದು ಸತ್ಯದಿಂದ ಮನಸ್ಸು ಶುದ್ಧಿಯಾಗುವುದು, ಭೂತಾತ್ಮ ಅಥವಾ ಜೀವನು ವಿದ್ಯೆಯಿಂದಲೂ ತಪಸ್ಸಿನಿಂದಲೂ ಶುದ್ಧನಾಗುವನು, ಜ್ಞಾನದಿಂದ ಬುದ್ಧಿ ಶುದ್ಧಿಯಾಗುವುದು."

ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ‖
(ಭಗವದ್ಗೀತೆ. ಅ. ೪, ಶ್ಲೋ. ೩೮).

"ಜ್ಞಾನಕ್ಕೆ ಸದೃಶವಾದ ಪವಿತ್ರವಸ್ತು ಈ ಲೋಕದಲ್ಲಿ ಇಲ್ಲವೇ ಇಲ್ಲ."

ಅಪಿಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ‖
ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।
ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ‖
ಅಹಂ, ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ‖
(ಭಗವದ್ಗೀತೆ. ಅ. ೯, ಶ್ಲೋ. ೩೦, ೩೧, ಅ. ೧೮, ಶ್ಲೋ. ೬೬).

"ಪರಮ ದುರಾಚಾರ ಪುರುಷನೂ ಕೂಡ ನನ್ನನ್ನು ಅನನ್ಯಭಾವದಿಂದ ಭಜಿಸುವನಾದರೆ, ಅಂತಹನೂ ಸಾಧುವೆನಿಸಿಕೊಳ್ಳುವನು ; ಏಕೆಂದರೆ ಅವನು ಸರಿಯಾಗಿ ವ್ಯವಸಾಯ ಮಾಡಿದವನಾಗಿಯೇ ಇರುತ್ತಾನೆ.

"ಕ್ಷಿಪ್ರದಲ್ಲಿಯೇ ಆತನು ಧರ್ಮಾತ್ಮನಾಗಿ ಶಾಶ್ವತವಾದ ಶಾಂತಿಪದವಿಯನ್ನೈದುವನು ; ಓ ಕೌಂತೇಯನೆ, ನನ್ನ ಭಕ್ತನಾದವನೆಂದಿಗೂ ನಾಶವಾಗನೆಂದು ಪ್ರತಿಜ್ಞೆ ಮಾಡುವನಾಗು.

"ನಾನು ನಿನ್ನನ್ನು ಸರ್ವಪಾಪಗಳಿಂದಲೂ ಮುಕ್ತನನ್ನಾಗಿ ಮಾಡುತ್ತೇನೆ ನೀನು ಇನ್ನು ಚಿಂತಿಸದಿರು."

———:o:———

ಇದು ಸನಾತನಧರ್ಮ ದೀಪಿಕೆಯ ಕರ್ಮಪ್ರಕಾಶಿಕೆಯೆಂಬ ದ್ವಿತೀಯಭಾಗದಲ್ಲಿ ಶೌಚಾಚಾರವಿಚಾರವೆಂಬ ತೃತೀಯಾಧ್ಯಾಯ.

# ದ್ವಿತೀಯಭಾಗ.

## ಚತುರ್ಥಾಧ್ಯಾಯ.

### ಪಞ್ಚಮಹಾಯಜ್ಞವಿವರಣೆ.



ಯಜ್ಞವಿಧಿಯದೊಂದುಂಟು ಎಂಬುದನ್ನೂ ಆ ವಿಧಿಗನುಸಾರವಾಗಿ ಮನಃಪೂರ್ವಕವಾಗಿ ನಡೆಯುವುದು ಮಾನವನ ದಿವ್ಯ ಮಹಿಮೆಯಾಗಿದೆ ಎಂಬುದನ್ನೂ ನಾವು ತಿಳಿದವರಾಗಿರುತ್ತೇವೆ. ಸನಾತನಧರ್ಮವು ತನಗೆ ಸೇರಿದವರನ್ನು ಯಾವ ಬಗೆಯ ಸಂಸ್ಕಾರಕ್ಕೆ ಅಥವಾ ಶಿಕ್ಷೆಗೊಳಪಡಿಸಿ ಈ ಮಹಾರಹಸ್ಯವನ್ನು ಗ್ರಹಿಸುವಂತೆ ಮಾಡಿರುವುದೋ ಅದನ್ನು ಈಗ ನೋಡಬೇಕಾಗಿದೆ.

ಕರ್ಮಕಾಂಡದ ಪುಸ್ತಕಗಳಲ್ಲಿ ವಿವರಿಸಿರುವ ನಾನಾ ಬಗೆಯ ಯಜ್ಞಕರ್ಮಗಳನ್ನು ನಾವು ಈಗ ವಿಚಾರಮಾಡದೆ ಬಿಟ್ಟು, ಪ್ರತಿದಿನದಲ್ಲಿಯೂ ಮಾಡತಕ್ಕ ಮಹಾಯಜ್ಞಗಳನ್ನು ಮಾತ್ರ ವಿಚಾರಮಾಡಬಹುದಾಗಿದೆ. ಈ ಮಹಾಯಜ್ಞಗಳಾವುವೆಂದರೆ :—(೧) ಋಷಿಯಜ್ಞ ಅಥವಾ ಬ್ರಹ್ಮಯಜ್ಞ, (೨) ದೇವಯಜ್ಞ, (೩) ಪಿತೃಯಜ್ಞ, (೪) ಮನುಷ್ಯಯಜ್ಞ, (೫) ಭೂತಯಜ್ಞ.

ಒಂದೊಂದೂ ಯಜ್ಞಕ್ಕೂ ಬಾಹ್ಯರೂಪವದೊಂದು ಇರುವುದಲ್ಲದೆ ರಹಸ್ಯಾರ್ಥವದೊಂದೂ ಇರುವುದು. ಈ ರಹಸ್ಯಾರ್ಥವು ಯಜಮಾನನನ್ನು ಪರಿಪೂರ್ಣವಾದ ಆತ್ಮಾರ್ಪಣ ಯಜ್ಞದ ಕಡೆಗೆ ಒಯ್ಯುವುದು. ಬಾಹ್ಯರೂಪವನ್ನೂ ರಹಸ್ಯಾರ್ಥವನ್ನೂ ತಿಳಿಯುವುದಕ್ಕೆ ಯತ್ನಿಸೋಣ.

ಋಷಿಯಜ್ಞದಲ್ಲಿ ಅಥವಾ ವೇದಯಜ್ಞದಲ್ಲಿ ಬಾಹ್ಯರೂಪವು ಅಧ್ಯಯನ ಮತ್ತು ಅಧ್ಯಾಪನ. ಪ್ರತಿದಿನದಲ್ಲಿಯೂ ಮಾನವನು ಪವಿತ್ರಗ್ರಂಥ

ವೊಂದನ್ನು ಪಠಿಸುತ್ತಾ, ಯಾವಜ್ಞಾನವಿಲ್ಲದಿದ್ದರೆ ತನ್ನ ಕರ್ತವ್ಯಗಳ ನ್ನೂ ತನ್ನ ಪದವಿಯನ್ನೂ ತನ್ನನ್ನೂ ತಾನು ಸಂಪೂರ್ಣವಾಗಿ ತಿಳಿಯಲಾ ಗುವುದಿಲ್ಲವೋ ಅಂತಹ ಜ್ಞಾನವನ್ನು ಕ್ರಮಕ್ರಮವಾಗಿ ಸಂಪಾದಿಸಿಕೊ ಳ್ಳಬೇಕು. ತನಗಿಂತಲೂ ಅಲ್ಪಜ್ಞಾನಿಗಳಾಗಿರುವವರಿಗೆ ಈ ಜ್ಞಾನೋ ಪದೇಶವನ್ನು ಮಾಡುವುದಕ್ಕೆ ಸಿದ್ಧನಾಗಿಯೂ ಇರಬೇಕು ; ಹೀಗಿರುವುದ ರಿಂದಲೇ ಮನುವು ಈ ಯಜ್ಞವನ್ನು ವರ್ಣಿಸುವುದರಲ್ಲಿ ಇದನ್ನು ಅಧ್ಯಾ ಪನವೆಂದು ಕರೆಯುತ್ತಾನೆ. (ಮನುಸ್ಮೃತಿ. ಅ. ೩, ಶ್ಲೋ. ೭೦). ಭಗ ವದ್ಗೀತೆಯಿಂದಲೋ ಅನುಗೀತೆಯಿಂದಲೋ ಹಂಸಗೀತೆಯಿಂದಲೋ ಮ ತ್ತಾವ ಪವಿತ್ರ ಗ್ರಂಥದಿಂದಲೋ ಕೆಲವು ಶ್ಲೋಕಗಳನ್ನು ಓದಿ, ಜಾಗರೂ ಕತೆಯಿಂದ ಅವುಗಳ ಅರ್ಥವನ್ನು ಅವಗಾಹನೆ ಮಾಡಿಕೊಳ್ಳುತ್ತಾ ಪ್ರತಿದಿ ನೆಥಲ್ಲಿಯೂ ದ್ವಿಜನು ಈ ಯಜ್ಞವನ್ನು ಮಾಡಬೇಕು. ಓದಿದ ಶ್ಲೋಕ ಗಳ ಸಂಖ್ಯೆಗಿಂತಲೂ ಅರ್ಥಗ್ರಹಣವೂ ಜಿಜ್ಞಾಸವೂ ಮುಖ್ಯಗಳೆಂದು ಭಾವಿಸಬೇಕು. ಅಧ್ಯಯನವು ಒಂದು ಯಜ್ಞವಾಗಿ ಪರಿಣಮಿಸಬೇಕು, ಬೋಧಿಸುವುದಕ್ಕಾಗಿಯೇ ಕಲಿಯಬೇಕು ಎಂಬುದು ಈ ಯಜ್ಞದ ರಹ ಸ್ಯಾರ್ಥವಾಗಿದೆ.

ದೇವಯಜ್ಞದ ಬಾಹ್ಯರೂಪವು ಹೋಮ; ದೇವತೆಗಳು ಕೃಪಾಪೂ ರ್ಣರಾಗಿ ಜಗತ್ತಿನಲ್ಲಿ ದುಡಿಯುತ್ತಾ, ನಾವು ಉಪಯೋಗಿಸುವ ಪದಾ ರ್ಥಗಳನ್ನು ಒದಗಿಸಿಕೊಟ್ಟು, ನಮ್ಮನ್ನು ಸಲಹುತ್ತಿರುವುದನ್ನು ನಾವು ಒಪ್ಪಿಕೊಂಡವರಾಗಿ, ಅವರ ಉಪಯೋಗಕ್ಕೋಸ್ಕರ ನಮ್ಮ ಸ್ವತ್ತುಗ ಳಲ್ಲಿ ಒಂದುಭಾಗವನ್ನು ಅವರಿಗೆ ಸಮರ್ಪಿಸುವುದನ್ನು ಹೋಮಕಾ ರ್ಯವು ತೋರಿಸುತ್ತದೆ. ಭೂಲೋಕಕ್ಕೆ ಮೇಲ್ಪಟ್ಟ ಲೋಕಗಳೂ ಉಂಟು, ಲೋಕಗಳು ಪರಸ್ಪರಾಶ್ರಯಭಾವದಲ್ಲಿವೆ ಎಂಬುದನ್ನು ಮನ ಸ್ಸಿಗೆ ಚೆನ್ನಾಗಿ ತಂದುಕೊಳ್ಳಬೇಕು ಎಂಬುದು ಇದರ ರಹಸ್ಯಾರ್ಥ. ಸ್ವಭಾವವಿಧಿಗಳಿಗನುಸಾರವಾಗಿಯೂ ಸರ್ವಭೂತಹಿತೈಷಿಗಳಾಗಿಯೂ ಇ ರುವುದನ್ನು ನಾವು ಕಲಿಯಬೇಕು.

ಪಿತೃಯಜ್ಞದ ಬಾಹ್ಯರೂಪವು ತರ್ಪಣ. ನಮ್ಮ ಪಿತೃಗಳಿಗಾಗಿ— ಎಂದರೆ ನಮ್ಮ ಕುಲದ ಪೂರ್ವಕಾಲದ ಸಂತತಿಗಳಿಗಾಗಿ—ನಾವು ಅರ್ಪಿ

ಸುವ ನೀರನ್ನು ಜಲತರ್ಪಣವೆನ್ನುತ್ತಾರೆ. ಪೃಥ್ವಿಯಲ್ಲಿ ನಮಗಿಂತಲೂ ಹಿಂದೆಯಿದ್ದು, ಪ್ರಯಾಸಪಟ್ಟು, ದುಡಿದು, ಪ್ರಪಂಚವನ್ನು ಶ್ರೇಷ್ಠತರಸ್ಥಿತಿಗೆ ತಂದು, ಅದರ ಸಂಪತ್ತನ್ನು ಹೆಚ್ಚಿಸಿ, ಎಲ್ಲವನ್ನೂ ನಮಗಾಗಿ ಬಿಟ್ಟಿರುವ ಪೂರ್ವಕುಲದವರಿಗೆ ನಾವು ಸಾಲಗಾರರಾಗಿದೇವೆ ಎಂಬುದನ್ನು ತಿಳಿಸುವುದೇ ಇದರ ರಹಸ್ಯಾರ್ಥ. ಪಿತೃಗಳಿಗೆ ತಾನು ಋಣಿಯಾಗಿರುವುದನ್ನು, ಪೂರ್ವಕುಲದವರಿಗೆ ತಾನು ತೆರಬೇಕಾಗಿರುವುದನ್ನು ಯಾವನು ಒಪ್ಪಿಕೊಳ್ಳನೋ ಅಂತಹನು ನಿಜವಾಗಿಯೂ ಮಾನವನೆನ್ನಿಸಿಕೊಳ್ಳಲಾರನು.

ಮನುಷ್ಯಯಜ್ಞದ ಬಾಹ್ಯರೂಪವು ಅತಿಥಿಸತ್ಕಾರ. ನಿಜವಾಗಿಯೂ ಆರ್ಯನೆಂದೆನಿಸಿಕೊಂಡಿರುವ ಮನುಷ್ಯನು ಪ್ರತಿದಿನದಲ್ಲಿಯೂ ತನಗಿಂತಲೂ ದರಿದ್ರನಾಗಿರುವನೊಬ್ಬನಿಗೆ ಆಹಾರವನ್ನು ಕೊಡಬೇಕು. ಹಸಿದುಬಂದವರಿಗೆ ಅನ್ನವನ್ನು ಕೊಡುತ್ತಾ, ಬೆತ್ತಲೆಯಿರುವವರಿಗೆ ಬಟ್ಟೆಯನ್ನೀಯುತ್ತಾ, ಮನೆಯಿಲ್ಲದವರಿಗೆ ನೆರಳನ್ನು ಕೊಡುತ್ತಾ, ದುಃಖಿಸುವವರಿಗೆ ದುಃಖಶಮನವನ್ನು ಮಾಡುತ್ತಾ, ಮಾನವಕುಲೋದ್ಧಾರವನ್ನು ಮಾಡುವುದೇ ಮಾನವಧರ್ಮವೆಂಬುದು ಈ ಯಜ್ಞದ ರಹಸ್ಯಾರ್ಥ. ಭಾಗ್ಯವಂತರು ಬಡವರಿಗೆ ಮನೆವಾರ್ತೆಯವರಾಗಿದಾರೆಯಲ್ಲವೆ ?

ಊಟಮಾಡುವುದಕ್ಕೆ ಮೊದಲು, ನಮ್ಮ ಸುತ್ತಲೂ ಇರುವ ಅದೃಶ್ಯಭೂತಸಮುದಾಯಗಳಿಗಾಗಿ ಕೊಂಚ ಅನ್ನವನ್ನು ತೆಗೆದಿಟ್ಟು ಭೋಜನ ಮಾಡಿ, ಉಚ್ಛಿಷ್ಟಭಾಗವನ್ನು ತಕ್ಕಸ್ಥಳವೊಂದರಲ್ಲಿ ಎಂಜಲು ತಿನ್ನುವವರಿಗಾಗಿಯೂ ತಿರ್ಯಗ್ಜಂತುಗಳಿಗಾಗಿಯೂ ಇಡುವುದು ಭೂತಯಜ್ಞದ ಬಾಹ್ಯರೂಪ. ಮನುಷ್ಯವರ್ಗದಲ್ಲಿಯೂ ತಿರ್ಯಗ್ಜಂತುವರ್ಗದಲ್ಲಿಯೂ ನಮಗಿಂತ ಕೀಳಾಗಿರುವ ಪ್ರಾಣಿಗಳಿಗೆ ನಾವು ಸಹಾಯ ಮಾಡಬೇಕು, ಆ ಪ್ರಾಣಿಗಳು ನಮಗಾಗಿ ಮಾಡಿರುವ ಸೇವೆಯನ್ನು ಸಾಲವಾಗಿ ಭಾವಿಸಬೇಕು, ಆ ಪ್ರಾಣಿಗಳ ವಿಷಯದಲ್ಲಿ ವಿಚಾರಪರರಾಗಿಯೂ ದಯಾಳುಗಳಾಗಿಯೂ ಮಾನವರಿರಬೇಕು ಎಂಬುದೇ ಈ ಭೂತಯಜ್ಞದ ರಹಸ್ಯಾರ್ಥ.

ಮಾನವನು ತನ್ನ ಹಿರಿಯರಲ್ಲಿ ಹೇಗೆ ನಡೆದುಕೊಳ್ಳಬೇಕೋ, ತನ್ನ ಸಮಾನರಲ್ಲಿ ಹೇಗೆ ನಡೆದುಕೊಳ್ಳಬೇಕೋ, ತನ್ನ ಕಿರಿಯರನ್ನು ಹೇಗೆ ಕಾಣಬೇಕೋ—ಇವುಗಳನ್ನು ದೈನಂದಿನದ ಪಂಚಮಹಾಯಜ್ಞಗಳು ತೋರಿಸಿ

ಕೊಡುವುವು. ಸಂಸಾರಗಳ ಮತ್ತು ಜನಸಮುದಾಯಗಳ ಸುಖಕ್ಕೂ ಏಳಿಗೆಗೂ ಯಾವಯಾವಬಗೆಯ ಅನುಕೂಲವರ್ತನಗಳು ಅವಶ್ಯಕವೋ ಅವುಗಳನ್ನು ಪಂಚಮಹಾಯಜ್ಞಗಳು ವಿಧಿಸಿರುತ್ತವೆ. ಈಶ್ವರೇಚ್ಛಾನುಗುಣವಾಗಿ ಸಂಸಾರಚಕ್ರವನ್ನು ಅವು ತಿರುಗಿಸುತ್ತಾ ಲೋಕಗಳ ಏಳಿಗೆಗೆ ಸಹಾಯಮಾಡುತ್ತಲಿವೆ. ಮಾನವನು ಅನನುಬಂಧಪ್ರಾಣಿಯಲ್ಲ, ಮಾನವನು ಬ್ರಹ್ಮಾಂಡದಲ್ಲಿ ಅಲ್ಪಭಾಗವೊಂದಾಗಿಯೇ ತಾನಿರುವನು, ವಿರಾಟ್ಪುರುಷನ ದೇಹದಲ್ಲಿ ಮಾನವನು ಅಣುಕೋಶಪ್ರಾಯನಾಗಿರುವನು, ಮಾನವನ ಸುಖವೂ ಅಭ್ಯುದಯವೂ ಚಿರಸ್ಥಾಯಿಯಾಗಬೇಕಾದರೆ ಜಗತ್ತಿನ ಸುಖಕ್ಕೂ ಅಭ್ಯುದಯಕ್ಕೂ ಅನುಕೂಲವಾಗಿಯೇ ಇರಬೇಕು ಎಂಬ ವಿಷಯಗಳನ್ನು ಪಂಚಮಹಾಯಜ್ಞಗಳು ಬೋಧಿಸುತ್ತವೆ.

## ಸ್ಮೃತ್ಯಾದಿ ವಚನಗಳು.

ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಸ್ತು ತರ್ಪಣಂ ।
ಹೋಮೋ ದೈವೋ ಬಲಿರ್ಭೌತೋ ನೃಯಜ್ಞೋಽತಿಥಿಪೂಜನಂ॥

(ಮನುಸ್ಮೃತಿ. ಅ. ೩, ಶ್ಲೋ. ೭೦).

" ಬ್ರಹ್ಮಯಜ್ಞವು ಅಧ್ಯಾಪನ, ಪಿತೃಯಜ್ಞವು ತರ್ಪಣ, ದೇವಯಜ್ಞವು ಹೋಮ, ಭೂತಯಜ್ಞವು ಬಲಿ, ಮನುಷ್ಯಯಜ್ಞವು ಅತಿಥಿಪೂಜೆ."

ಸ್ವಾಧ್ಯಾಯೇ ನಿತ್ಯಯುಕ್ತಃ ಸ್ಯಾದ್ದೈವೇ ಚೈವೇಹ ಕರ್ಮಣಿ ।
ದೈವೇ ಕರ್ಮಣಿ ಯುಕ್ತೋ ಹಿ ಬಿಭರ್ತೀದಂ ಚರಾಚರಂ ॥

(ಮನುಸ್ಮೃತಿ. ಅ. ೩, ಶ್ಲೋ. ೭೫).

"ಸ್ವಾಧ್ಯಾಯದಲ್ಲಿಯೂ ದೈವಕರ್ಮದಲ್ಲಿಯೂ ಮಾನವನು ನಿತ್ಯವೂ ನಿರತನಾಗಿರಲಿ; ದೈವಕರ್ಮಗಳಲ್ಲಿ ನಿರತನಾಗಿರುವುದರಿಂದ ಚರಾಚರ ವರ್ಗಗಳೆರಡಕ್ಕೂ ಆಧಾರಭೂತನಾಗಿರುವನು."

ಋಷಯಃ ಪಿತರೋ ದೇವಾಭೂತಾನ್ಯತಿಥಯಸ್ತಥಾ ।
ಆಶಾಸತೇ ಕುಟುಂಬಿಭ್ಯಃ ತೇಭ್ಯಃ ಕಾರ್ಯಂ ವಿಜಾನತಾ ॥

ಸ್ವಾಧ್ಯಾಯೇನಾರ್ಚಯೇತರ್ಷೀನ್ ಹೋಮೈರ್ದೇವಾನ್ಯಥಾವಿಧಿ|
ಪಿತೄನ್ಛ್ರಾದ್ಧೇನ ನ್ರೂನನ್ನೈರ್ಭೂತಾನಿ ಬಲಿಕರ್ಮಣಾ ||

(ಮನುಸ್ಮೃತಿ. ಅ. ೩, ಶ್ಲೋ. ೮೦—೮೧).

"ಋಷಿಗಳು ಪಿತೃಗಳು ದೇವತೆಗಳು ಭೂತಗಳು ಅತಿಥಿಗಳು—ಇವರೆಲ್ಲರೂ ಕುಟುಂಬಿಗಳಿಂದ ಸಹಾಯವನ್ನು ಬಯಸುತ್ತಾರೆ. ಆದುದರಿಂದ ಜ್ಞಾನಿಯು ಅವರಿಗೆಲ್ಲಾ ದಾನವನ್ನು ಮಾಡಲಿ.

"ವಿಧಿಗನುಸಾರವಾಗಿ ಋಷಿಗಳನ್ನು ಸ್ವಾಧ್ಯಾಯದಿಂದ, ದೇವತೆಗಳನ್ನು ಹೋಮದಿಂದ, ಪಿತೃಗಳನ್ನು ಶ್ರಾದ್ಧದಿಂದ, ಅತಿಥಿಗಳನ್ನು ಅನ್ನದಿಂದ, ಭೂತಗಳನ್ನು ಬಲಿಯಿಂದ ಅರ್ಚಿಸುವನಾಗಲಿ."



ಇದು ಸನಾತನ ಧರ್ಮದೀಪಿಕೆಯಲ್ಲಿ ಕರ್ಮಪ್ರಕಾಶಿಕೆಯೆಂಬ ದ್ವಿತೀಯ ಭಾಗದಲ್ಲಿ ಪಂಚಮಹಾಯಜ್ಞ ವಿವರಣೆಯೆಂಬ ಚತುರ್ಥಾಧ್ಯಾಯ.



# ದ್ವಿತೀಯ ಭಾಗ.

## ಪಂಚಮಾಧ್ಯಾಯ.

———:o:———

### ಆರಾಧನ ವಿಚಾರ.



ಮಾನವನು ತಾನು ಜಗತ್ತಿನ ಅದೊಂದು ಪರಸ್ಪರಾನುಬಂಧವುಳ್ಳ ಅಂಶವೆಂದು ಭಾವಿಸಿಕೊಂಡು ಮಾಡುವ ದೈನಂದಿನವ ಪಂಚಮಹಾಯಜ್ಞವು ನಿಜಭಕ್ತನ ಮನಸ್ಸಿಗೆ ಸಂಪೂರ್ಣವಾದ ತೃಪ್ತಿಯನ್ನುಂಟುಮಾಡುವುದಿಲ್ಲ. ಜಗತ್ಪತಿಯೊಡನೆ, ಈಶ್ವರನೊಡನೆ, ತನ್ನ ಪ್ರಾಣವು ಯಾವನ ಪ್ರಾಣದ ಅದೊಂದಂಶವಾಗಿದೆಯೋ ಆ ಮುಖ್ಯಪ್ರಾಣನೊಡನೆ, ತಾನು ಬುದ್ಧಿಪೂರ್ವಕವಾಗಿ ಸೇರಬೇಕೆಂದು ನಿಜಭಕ್ತನು ಹಾರಯಿಸುವನು. ಮಾನವನ ಈ ಆಶೆಯು ಆರಾಧನದಿಂದ ತೃಪ್ತಿಯನ್ನು ಹೊಂದುವುದು. ಸರ್ವಭೂತಹಿತಾರ್ಥವಾಗಿ ಅವತಾರಮಾಡಿದ, ಪರಬ್ರಹ್ಮತತ್ವೋಪದೇಶಕರಾದ ವ್ಯಾಸಮಹರ್ಷಿಗಳು ಮಹಾಭಾರತವನ್ನೂ ಬ್ರಹ್ಮಸೂತ್ರಗಳನ್ನೂ ಬರೆದಮೇಲೆಯೂ ಕೂಡ ಚಿತ್ತಶಾಂತಿಯನ್ನು ಹೊಂದದಿರಲು, ನಾರದರು ಆ ಮಹರ್ಷಿಗಳಿಗೆ "ಭಗವಂತನ ಮಹಿಮೆಯನ್ನು ವರ್ಣಿಸುವನಾಗು" ಎಂದು ಹೇಳಿದರು. ವ್ಯಾಸರು ಶ್ರೀಮದ್ಭಾಗವತದಲ್ಲಿ ಭಗವನ್ನಾಮ ಸಂಕೀರ್ತನೆಯನ್ನು ಮಾಡಿ ಮೊದಲು ತಮಗಿಲ್ಲದಿದ್ದ ಚಿತ್ತಶಾಂತಿಯನ್ನು ಹೊಂದಿ ಸಂತುಷ್ಟರಾದರು.

ಪರಮಾತ್ಮನಲ್ಲಿ ನಮಗಿರುವ ಭಕ್ತಿಯನ್ನು, ಭಗವಂತನಲ್ಲಿ ನಮಗಿರುವ ಪರಮ ಗೌರವವನ್ನು, ಪ್ರಜ್ಞಾಪೂರ್ವಕವಾಗಿ ಪರಬ್ರಹ್ಮನನ್ನೈದ

ಲು ನಮಗಿರುವ ಆಶೆಯನ್ನು, ಪರಬ್ರಹ್ಮನಲ್ಲಿ ನಾವು ಸೇರಿ ಜೀವಾತ್ಮ ಪರಮಾತ್ಮರುಗಳ ಐಕ್ಯವನ್ನು ತಿಳಿಯಬೇಕೆಂಬ ನಮ್ಮ ಆಸಕ್ತಿಯನ್ನು ಪೂಜೆಯು ಪ್ರದರ್ಶಿಸುವುದು. ಭಗವಂತನ ನಿರತಿಶಯವಾದ ಗುಣಪರಿಪೂರ್ಣತೆಯನ್ನು ವರ್ಣಿಸುವ ಸ್ತೋತ್ರವಾಗಿಯೂ, ತನ್ನ ಗುಣಹೀನತೆಯನ್ನು ತಿಳಿದವನಾಗಿ ಪ್ರಾರ್ಥಿಸುವ ಭಕ್ತನ ಪ್ರಾರ್ಥನೆಯಾಗಿಯೂ, ಭಗವಂತನ ಕೃಪೆಗಾಗಿ ಮೊರೆಯಿಡುವ ಸಂಕೀರ್ತನೆಯಾಗಿಯೂ, ಭಗವಂತನ ಸರ್ವಶಕ್ತಿಯ ಅರಿವಾಗಿಯೂ, ಭಗವತ್ಸ್ವರೂಪಧ್ಯಾನವಾಗಿಯೂ, ಮಾಯಾವರಣ ವಿಮುಕ್ತನಿಜರೂಪದರ್ಶನವಾಗಬೇಕೆಂಬ ಬಯಕೆಯಾಗಿಯೂ ಈ ಪೂಜೆಯು ಇರಬಹುದು. ಪೂಜಿಸುವವನ ಪ್ರಕೃತಿಗೂ ಚಿತ್ತಪರಿಪಾಕಕ್ಕೂ ಅನುಗುಣಗಳಾದ ಬಯಕೆಗಳು ಇನ್ನೂ ಎಷ್ಟೋ ಇರಬಹುದು. ಪಾಮರನಲ್ಲಿಯೇ ಆಗಲಿ ಪಂಡಿತನಲ್ಲಿಯೇ ಆಗಲಿ ಪೂಜೆಯೆಂಬುದೆಂತೂ ಬ್ರಹ್ಮನನ್ನು ಸೇರಬೇಕೆಂಬ ಆಶೆಯನ್ನೇ ತೋರಿಸುತ್ತದೆ. ಉಪಾಸಕನ ಪ್ರಕೃತಿಗೂ ಪ್ರಾಜ್ಞತೆಗೂ ಅನುಸಾರವಾಗಿ ಉಪಾಸನೆಯ ಬಗೆಯು ಬೇರೆಬೇರೆಯಾಗಿರಬಹುದು ; ಬಯಕೆಯ ಮೂಲವೇನೋ ಒಂದೇ ಆಗಿರುತ್ತದೆ.

ಸರ್ವನು, ಉಪಾಧಿರಹಿತನು, ನಿರ್ಗುಣಬ್ರಹ್ಮನು ಎಂದಿಗೂ ಆರಾಧನಕ್ಕೆ ವಿಷಯನಾಗನು. ಆರಾಧನಕ್ಕೆ ವಿಷಯನಾಗುವುದಕ್ಕೆ, ಮನಸ್ಸನ್ನು ಆರಾಧ್ಯವಸ್ತುವಿನಲ್ಲಿ ನಿಲ್ಲಿಸುವುದಕ್ಕೆ, ಏನಾದರೂ ಗುಣವಿರಲೇಬೇಕು ; ಗುಣವಿಲ್ಲದಿದ್ದರೆ ಭಕ್ತಿಯನ್ನೆಬ್ಬಿಸುವುದಕ್ಕೇ ಆಗುವುದಿಲ್ಲ. ಸಗುಣಬ್ರಹ್ಮನು, ಈಶ್ವರನು, ಪೂಜೆಗೆ ತಕ್ಕದೇವನು ; ಪ್ರಾರ್ಥನೆಗಳಿಗೂ ಸ್ತೋತ್ರಗಳಿಗೂ ಅರ್ಹನಾದವನು ಅವನೇ ; ಧ್ಯಾನಕ್ಕೆಲ್ಲಾ ಅವನೇ ವಿಷಯ. ಶಿವನೆಂದಾಗಲಿ, ವಿಷ್ಣುವೆಂದಾಗಲಿ, ಮಹಾದೇವನೆಂದಾಗಲಿ, ನಾರಾಯಣನೆಂದಾಗಲಿ, ದುರ್ಗೆಯೆಂದಾಗಲಿ, ಲಕ್ಷ್ಮಿಯೆಂದಾಗಲಿ, ಗಣೇಶನೆಂದಾಗಲಿ, ಇಂದ್ರನೆಂದಾಗಲಿ, ಅಗ್ನಿಯೆಂದಾಗಲಿ, ಸರಸ್ವತಿಯೆಂದಾಗಲಿ, ಅವತಾರಪುರುಷನಾದ ರಾಮನೆಂದಾಗಲಿ, ಕೃಷ್ಣನೆಂದಾಗಲಿ, ಬುದ್ಧನೆಂದಾಗಲಿ ಪೂಜಿಸಬಹುದು. ಯಾವಹೆಸರಿನಲ್ಲಿ ಯಾವರೂಪದಲ್ಲಿ ಪೂಜಿಸಿದರೂ ಪೂಜಿಸಲ್ಪಟ್ಟವನು ಈಶ್ವರನಾಗಿಯೇ ಇರುವನು.

ಶಿವನನ್ನು ಕೆಲವುವೇಳೆಗಳಲ್ಲಿ, ವಿಷ್ಣುವನ್ನು ಕೆಲವುವೇಳೆಗಳಲ್ಲಿ ಪರಮೇಶ್ವರನೆಂದು ಏಕೆ ಹೇಳುವರೋ, ಒಂದು ಪುರಾಣವು ಶಿವನನ್ನು, ಮತ್ತೊಂದು ಪುರಾಣವು ವಿಷ್ಣುವನ್ನು ಅಧಿಕನನ್ನಾಗಿ ಹೇಳುವುದೇಕೋ ಎಂದು ಹುಡುಗರಿಗೆ ತಬ್ಬಿಬ್ಬಾಗುವ ವಿಷಯವನ್ನು ಇದು ಸ್ಪಷ್ಟಪಡಿಸುತ್ತದೆ. ಶಿವ, ವಿಷ್ಣು ಎಂಬುವೆಲ್ಲವೂ ಮಹೇಶ್ವರನ ರೂಪಗಳು; ಮಹೇಶ್ವರನಾಗಿರುವವನೇನೋ ಒಬ್ಬನೆ. ತನಗತ್ಯಂತ ಪ್ರಿಯವಾಗಿರುವ ರೂಪದಲ್ಲಿ ಭಕ್ತನು ಈಶ್ವರನನ್ನೇ ಪೂಜಿಸುತ್ತಾನೆ, ಈಶ್ವರನನ್ನೇ ಧ್ಯಾನಿಸುವನಾಗುತ್ತಾನೆ. ಭಕ್ತನು ರೂಪವನ್ನು ಪೂಜಿಸುವುದಿಲ್ಲ, ರೂಪದಲ್ಲಿರುವ ಈಶ್ವರನನ್ನು ಪೂಜಿಸುತ್ತಾನೆ—ಸತಿಯು ಪತಿಯನ್ನೇ ಸೇವಿಸುವಳು, ಪತಿಯು ಧರಿಸಿದ ವಸ್ತ್ರಗಳಲ್ಲಿ ಪತಿಯ ಸಂಬಂಧದಿಂದ ಪ್ರೀತಿಯಿರುವುದಾದರೂ ಪತಿಯನ್ನು ಬಿಟ್ಟು ವಸ್ತ್ರಗಳನ್ನೇ ಸೇವಿಸುವುದಿಲ್ಲ. ಈಶ್ವರನು ತನ್ನ ಮಹಿಮೆಯನ್ನು ಲೋಕಕ್ಕೆ ತಿಳಿಸುವುದಕ್ಕಾಗಿ ಸ್ವೀಕಾರಮಾಡಿದ ದಿವ್ಯರೂಪಗಳನೇಕಗಳಲ್ಲಿ ಕಾಣಬರುವ ಭಕ್ತವತ್ಸಲತೆಯನ್ನೂ ಸೌಂದರ್ಯವನ್ನೂ ಸರ್ವಶಕ್ತಿಯನ್ನೂ ಭಕ್ತನು ಪೂಜಿಸುವನು. ನಾವು ಅಲ್ಪಜ್ಞರಾದುದರಿಂದ ಅಲ್ಪವನ್ನು ಮಾತ್ರವೇ ಗ್ರಹಿಸಬಲ್ಲವರಾಗಿದೇವೆ; ಆದರೂ ನಮ್ಮ ಪೂಜೆಯಲ್ಲಿ ಜಗತ್ಪತಿಯ ಅಂಶಗಳನ್ನು ಗ್ರಹಿಸುವರಾಗುತ್ತೇವೆ.

ಹೀಗಿರುವುದರಿಂದ, ಬೇರೆ ಬೇರೆ ಮತಾವಲಂಬಿಗಳಿಗೆ ಪರಸ್ಪರವಾಗಿರುವ ಜಗಳಗಳೂ, ಒಂದೇಮತದ ಬೇರೆ ಬೇರೆ ಗುಂಪಿನವರಿಗೆ ಪರಸ್ಪರವಾಗಿರುವ ಕಲಹಗಳೂ ಮೌಢ್ಯಪ್ರದರ್ಶಕಗಳಾಗಿರುವುವಲ್ಲದೆ ಅಜ್ಞಾನಪ್ರದರ್ಶಕಗಳಾಗಿಯೂ ಇರುವುವು. ಒಬ್ಬನಾದ ಈಶ್ವರನನ್ನೆ ಸಕಲರೂ ಪೂಜಿಸುತ್ತಾರೆ ; ಪರಸ್ಪರವಿರುವ ಪ್ರಭೇದಗಳು ನಾಮಪ್ರಭೇದಗಳಾಗಿರುತ್ತವೆ. ಈ ನಾಮಪ್ರಭೇದಗಳು ಹುಟ್ಟಿರುವುದು ಭಕ್ತನಲ್ಲಿರುವ ಚಿತ್ತಪರಿಪಾಕದ ಪ್ರಭೇದಗಳಿಂದ, ಈಶ್ವರನ ಪ್ರಭೇದಗಳಿಂದಲ್ಲ.

ಪೂಜೆಯೆಂಬುದು ಆರಾಧನದ ಸಾಮಾನ್ಯವಾದ ಸರಳರೂಪ. ಒಂದು ಚಿತ್ರಪಟವನ್ನೋ ವಿಗ್ರಹವನ್ನೋ ಉಪಯೋಗಿಸುವರು, ಮಂತ್ರಗಳನ್ನು ಉಚ್ಚರಿಸುವರು, ಪುಷ್ಪವನ್ನು ಅರ್ಪಿಸುವರು, ಅರ್ಘ್ಯಪಾದ್ಯಗಳನ್ನೀಯು

ವರು. ಈತೆರದ ಬಾಹ್ಯರೂಪಗಳಲ್ಲಿ ಅಂತರದ ಭಕ್ತಿಯು ಹೊರಪಟ್ಟು, ಅನಂತರದಲ್ಲಿ ಬಾಹ್ಯರೂಪಗಳಾವುದನ್ನೂ ಅಪೇಕ್ಷಿಸದೆ, ಬಗೆಬಗೆಯಲ್ಲಿ ಸೇವ್ಯನಾದ ಪರಬ್ರಹ್ಮನಲ್ಲಿಗೇ ಹೋಗಿ ಸೇರುವುದು. ಆ ಪರಬ್ರಹ್ಮನಿಗೆ ಪ್ರತಿಕೃತಿಯಾಗಿರುವ ರೂಪವು ಒಂದೊಂದುವೇಳೆ ಮನೆಯ ದೇವರಾಗಿಯೂ ಮನೆಯ ದೇವಿಯಾಗಿಯೂ, ಒಂದೊಂದುವೇಳೆ ಇಷ್ಟದೇವತೆಯಾಗಿಯೂ ಇರಬಹುದು; ಈ ಇಷ್ಟದೇವತೆಯನ್ನು ಭಕ್ತನೇ ಮಾಡಿಟ್ಟುಕೊಳ್ಳಬಹುದು, ಅಥವಾ ಬಬ್ಬ ಗುರುವಾದರೂ ತೋರಿಸಬಹುದು.

ಉಪಾಸನವೆಂಬುದರಲ್ಲಿ ಅನೇಕ ಬಗೆಯ ಆರಾಧನಗಳು ಸೇರಿವೆ. ಧ್ಯಾನವೂ ದೈನಂದಿನದ ಸಂಧ್ಯಾವಂದನೆಯೂ ಉಪಾಸನದಲ್ಲಿ ಸೇರಿರುತ್ತವೆ. ಸನಾತನಧರ್ಮದವರೆಲ್ಲರೂ ಸಂಧ್ಯಾವಂದನೆಯನ್ನು ಮಾಡಬೇಕು. ವೈದಿಕತಾಂತ್ರಿಕಗಳೆಂಬ ಎರಡು ಪ್ರಭೇದಗಳು ಸಂಧ್ಯಾವಂದನೆಯಲ್ಲಿವೆ. ತನ್ನ ಜಾತಿಗೂ ಕುಲಧರ್ಮಕ್ಕೂ ಬಂದಿರುವ ಸಂಧ್ಯಾವಂದನೆಯನ್ನು ವಿದ್ಯಾರ್ಥಿಯು ಮಾಡುವನಾಗಲಿ. ಸರಿಯಾದ ಯೋಗ್ಯತೆಯುಳ್ಳ ಗುರುವಿನಿಂದ ಉಪದೇಶವನ್ನು ಹೊಂದಿ, ವಿದ್ಯಾರ್ಥಿಯು ಸಂಧ್ಯಾವಂದನೆಯನ್ನು ನಿತ್ಯವೂ ಕಾಲಕ್ಕೆ ಸರಿಯಾಗಿ ಮಾಡಬೇಕು. ಕ್ರಮವರಿತು ಮಾಡಬೇಕಾದ ಧ್ಯಾನವು ಹುಡುಗರಿಗೆ ಸಾಧ್ಯವಲ್ಲ, ಪ್ರಾಪ್ತವಯಸ್ಕರಿಗೆ ಸಂಬಂಧಪಟ್ಟದೆ.

## ಸ್ಮೃತ್ಯಾದಿ ವಚನಗಳು.

ನೈಷ್ಕರ್ಮ್ಯಮಪ್ಯಚ್ಯುತಭಾವವರ್ಜಿತಂ
ನ ಶೋಭತೇ ಜ್ಞಾನಮಲಂ ನಿರಂಜನಂ ||
ಕುತಃ ಪುನಃ ಶಶ್ವದಭದ್ರಮೀಶ್ವರೇ
ನ ಚಾರ್ಪಿತಂ ಕರ್ಮ ಯದಪ್ಯಕಾರಣಂ ||

(ಶ್ರೀಮದ್ಭಾಗವತ. ಸ್ಕಂಧ ೧, ಅ. ೫, ಶ್ಲೋ. ೧೨).

“ಅಚ್ಯುತಭಾವ ವರ್ಜಿತವಾಗಿದ್ದ ಪಕ್ಷದಲ್ಲಿ, ನೈಷ್ಕರ್ಮ್ಯವೂ ಶೋಭಿಸುವುದಿಲ್ಲ; ನಿರಂಜನವಾದ ಜ್ಞಾನವೂ ಶೋಭಿಸುವುದಿಲ್ಲ; ಹೀಗಿ

ರುವಲ್ಲಿ ಫಲಾಪೇಕ್ಷೆಯಿಂದ ಮಾಡಿದ ಕರ್ಮಗಳೂ, ಕೊನೆಗೆ ನಿಷ್ಕಾಮಕ ರ್ಮಗಳೂಕೂಡ, ಈಶ್ವರಾರ್ಪಿತಗಳಾಗದಿದ್ದರೆ, ಹೇಗೆತಾನೇ ಶೋಭಿಸುವುವು?"

ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ |

..........................................................

ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ||
ಕ್ಲೇಶೋಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಂ |
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ||
ಯೇ ತು ಸರ್ವಾಣಿ ಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಾಃ |
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತಉಪಾಸತೇ ||
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ |
ಭವಾಮಿ ನಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಂ ||

(ಭಗವದ್ಗೀತೆ. ಅ. ೧೨, ಶ್ಲೋ. ೩—೭).

"ಅಕ್ಷರನನ್ನು, ಅನಿರ್ದೇಶ್ಯನನ್ನು, ಅವ್ಯಕ್ತನನ್ನು, ಸರ್ವಭೂತ ಹಿತರತರಾಗಿ ಯಾರು ಉಪಾಸಿಸುವರೋ ಅವರು ನನ್ನ ಸನ್ನಿಧಿಗೆ ಬರುವರು.

"ಅವ್ಯಕ್ತಾಸಕ್ತ ಚೇತಸರಿಗೆ ಕ್ಲೇಶವು ಅಧಿಕತರವಾಗಿರುವುದು; ಏಕೆಂದರೆ ದೇಹದಿಂದ ಕೂಡಿರುವ ಮಾನವರಿಗೆ ಅವ್ಯಕ್ತೋಪಾಸನ ಮಾರ್ಗವು ಬಹುಕಷ್ಟ.

"ಸರ್ವ ಕರ್ಮಗಳನ್ನೂ ನನಗೇ ಅರ್ಪಿಸುತ್ತಾ, ಮತ್ಪರರಾಗಿ ಅನನ್ಯ ಯೋಗದಿಂದ ನನ್ನನ್ನೇ ಧ್ಯಾನದಲ್ಲಿಟ್ಟು, ನನ್ನನೇ ಯಾರು ಉಪಾಸಿಸುವರೋ,

"ಅಂತಹರನ್ನು ನಾನು ಶೀಘ್ರವಾಗಿ ಜನನಮರಣ ರೂಪ ಸಂಸಾರ ಸಾಗರದಿಂದ ಮೇಲಕ್ಕೆತ್ತುತ್ತೇನೈಯ್ಯಾ ಪಾರ್ಥ. ಅವರ ಚಿತ್ತವೆಲ್ಲಾ ನನ್ನಲ್ಲಿಯೇ ಸ್ಥಿರವಾಗಿರುವುದು."

ಈಶ್ವರಸ್ಸರ್ವಭೂತಾನಾಂ ಹೃದ್ದೇಶೇರ್ಜುನ ತಿಷ್ಠತಿ |
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ||

ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥
(ಭಗವದ್ಗೀತೆ. ಅ. ೧೮, ಶ್ಲೋ. ೬೧—೬೨).

“ಅಯ್ಯಾ ಭಾರತ, ಈಶ್ವರನು ತನ್ನ ಮಾಯಾಶಕ್ತಿಯಿಂದ, ಯಂತ್ರಾರೂಢನಾಗಿದ್ದವನಂತೆ, ಸರ್ವ ಭೂತಗಳನ್ನೂ ಆಡಿಸುತ್ತಾ ಅವುಗಳ ಹೃದಯಪ್ರದೇಶದಲ್ಲಿಯೇ ವಾಸವಾಗಿರುವನು.

“ಓ ಭಾರತನೆ, ಸರ್ವ ಭಾವದಿಂದಲೂ ನೀನು ಆ ಈಶ್ವರನಲ್ಲಿಗೆ ಹೋಗಿ ಶರಣಾಗತನಾಗು ; ಆತನ ಪ್ರಸಾದದಿಂದ ನೀನು ಪರಶಾಂತಿಯನ್ನೂ ಶಾಶ್ವತಸ್ಥಾನವನ್ನೂ ಹೊಂದುವನಾಗುವೆ.”

ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥
(ಭಗವದ್ಗೀತೆ, ಅ. ೪, ಶ್ಲೋ. ೧೧)

“ಮಾನವರೆಂತೆಂತೆನ್ನೆಡೆಗೈದುವರೋ ಅಂತಂತವರನು ನಾನಾದರಿಸುವೆನು ; ಏಕೆಂದರೆ, ಮಾನವರು ಹಿಡಿಯುವ ಮಾರ್ಗವು ಎಲ್ಲೆಲ್ಲಿಯದಾದರೂ ನನ್ನದಾಗಿಯೇ ಇರುವುದು.”

ಯೋಯೋ ಯಾಂಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ । ತಸ್ಯತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ ॥
(ಭಗವದ್ಗೀತೆ. ಅ. ೭, ಶ್ಲೋ. ೨೧)

“ಯಾವಯಾವ ಭಕ್ತನು ಯಾವಯಾವ ರೂಪದಲ್ಲಿ ಶ್ರದ್ಧೆಯಿಂದ ನನ್ನನ್ನು ಆರಾಧಿಸಲಿಚ್ಛಯಿಸುವನೋ, ಅವನವನಿಗೆ ಆಯಾ ರೂಪದಲ್ಲಿಯೇ ಅಚಲವಾದ ಶ್ರದ್ಧೆಯನ್ನು ನಿಜವಾಗಿಯೂ ಕೊಡುವನಾಗುತ್ತೇನೆ.”

---

ಇದು ಸನಾತನ ಧರ್ಮದೀಪಿಕೆಯಲ್ಲಿ ಕರ್ಮಪ್ರಕಾಶಿಕೆಯೆಂಬ ದ್ವಿತೀಯಭಾಗದಲ್ಲಿ ಆರಾಧನ ವಿಚಾರವೆಂಬ ಪಂಚಮಾಧ್ಯಾಯ.



# ದ್ವಿತೀಯ ಭಾಗ.

## ಷಷ್ಠಾಧ್ಯಾಯ.



### ಆಶ್ರಮಚತುಷ್ಟಯ ವಿವರಣೆ.



ಬಿಡಿಬಿಡಿಯ ಜನರಿಗೆ ಬೇರೆ ಬೇರೆ ಗುಣಗಳಿರುವಂತೆಯೇ ಜನಸಮುದಾಯಗಳಿಗೂ ಅಥವಾ ಜನಾಂಗಗಳಿಗೂ ಬೇರೆಬೇರೆ ಗುಣವಿಶೇಷಗಳಿರುವುವು ; ಮತ್ತು ಹಿಂದೂ ಜನಾಂಗಕ್ಕೆ ಪೂರ್ವದಲ್ಲಿದ್ದ ಗುಣಗಳಲ್ಲಿ ಕ್ರಮಾಸಕ್ತಿಯೂ ( love of order) ಚಿತ್ತಸಮತ್ವವೂ (balance) ಸೇರಿದ್ದುವು. ಈ ವಿಶೇಷಗುಣಗಳು ಈ ಜನಾಂಗದಲ್ಲಿ ನೆಲೆಗೊಂಡಿರುವಂತೆ ಸನಾತನಧರ್ಮವು ಮಾಡಿ, ಸದ್ಗುಣಗಳು ಕ್ರಮವಾಗಿ ಬೆಳೆದು ಸಮತೂಕದಲ್ಲಿರುವ ಮಹಾಗಂಭೀರ ಸ್ವಭಾವದ ಆದೊಂದು ಮಾನವಕುಲವನ್ನು ವೃದ್ಧಿಗೆ ತಂದಿತು. ಸನಾತನಧರ್ಮಾವಲಂಬಿಗಳಲ್ಲಿ ಈ ವಿಶೇಷಗುಣಗಳು ಎಷ್ಟರಮಟ್ಟಿಗಿದ್ದುವು ಎಂದರೆ, ಶ್ರೀಕೃಷ್ಣನು "ಸಮತ್ವಂಯೋಗ ಉಚ್ಯತೇ" ಎಂದು ಹೇಳಿರುತ್ತಾನೆ. (ಭಗವದ್ಗೀತೆ. ಅ. ೨, ಶ್ಲೋ. ೪೮).

ಸಮಸ್ತ ಚರಾಚರ ವಸ್ತುಗಳ ಹಿತವನ್ನೂ ವೇದವಲ್ಲಿ ವಿಶಾಲಮತಿಯಿಂದ ಭಾವಿಸಿರುವುದೇ ಈ ಗುಣವಿಶೇಷಗಳಿಗೆ ಮೂಲಾಧಾರವಾಗಿರುತ್ತದೆ. ಆತ್ಮನ ಇಚ್ಛೆಯಿಂದ ಆತ್ಮನಿಗಾಗಿಯೇ ಸಮಸ್ತ ವಸ್ತುಗಳೂ ಇರುವುವು ; ಆತ್ಮನು ಬಯಸುವ ಅನುಭವಗಳ ಸಂಪಾದನಾರ್ಥವಾಗಿಯೇ ಅವುಗಳೆಲ್ಲವೂ ಇರುತ್ತವೆ ಅಧೋಲೋಕಗಳಲ್ಲಿ ತನ್ನ ಶಕ್ತಿಗಳು ವಿಕಸಿತವಾಗಬೇಕೆಂತಲೂ, ಅಮರ್ತ್ಯನಾಗಿ ತಾನು ಅಂತರಪ್ರಪಂಚಗಳಿಗೆ ಸರ್ವದಾ ಸ್ವಾಮಿಯಾಗಿರುವಂತೆಯೇ ಸಾಂದ್ರತರಗಳಾದ ಬಾಹ್ಯಪ್ರಪಂಚ

ಗಳಲ್ಲಿಯೂ ಜ್ಞಾನಪರಿಪೂರ್ಣತೆಯುಳ್ಳ ಅಧಿಪತಿಯಾಗಿರಬೇಕೆಂತಲೂ ಆತ್ಮನು ಇಚ್ಛಯಿಸುವನು. ನಿತ್ಯನಾದುದರಿಂದ ಆತ್ಮನು ಅವಸರಪಡುವುದಿಲ್ಲ, ಮತ್ತು ಒಂದೊಂದು ಅನುಭವವನ್ನು ಕ್ರಮಕ್ರಮವಾಗಿ ತೆಗೆದುಕೊಳ್ಳುತ್ತಾ ಹೋಗಿ, ಸಮಸಮನಾಗಿಯೂ ಪರಸ್ಪರಾನುಕೂಲಭಾವದಿಂದಲೂ ವಿಕಸನವಾಗುವುದೇ ಉತ್ತಮವೆಂದು ತಿಳಿದಿರುವನು. ನಮ್ಮ ಲೋಕದಲ್ಲಿರುವ ನೀಚವರ್ಗದ ಜೀವಗಳಲ್ಲಿ ಈ ಕ್ರಮಾನುಬಂಧವಾದ ವಿಕಸನವೇ ಇರಬೇಕೆಂದು ಪರಮಾತ್ಮನಿಂದ, ಈಶ್ವರನಿಂದ, ವಿಧಾಯಕವಾಗಿದೆ; ಬೀಜ, ಬೇರು, ಬುಡ, ಎಲೆ, ಹೂವು, ಹಣ್ಣು—ಇವು ಕ್ರಮಕ್ರಮವಾಗಿ ಒಂದನ್ನೊಂದು ಅನುಸರಿಸಿಯೇ ಬರುವುವು; ಮತ್ತು ಪಡಿಯೊಂದೂ ಅವರವರಕಾಲದಲ್ಲಿ ಉದ್ಭವಿಸಿ ಶೋಭಿಸುವುವು. ಈ ರೀತಿಯಲ್ಲಿಯೇ ಈಶ್ವರನು ಮಾನವಜೀವಕ್ಕೂ ಅಂತಸ್ತುಗಳನ್ನು ವಿಧಿಸಿರುತ್ತಾನೆ.—ಶೈಶವ, ಬಾಲ್ಯ, ಕೌಮಾರ, ಯೌವನ, ವೃದ್ಧತ್ವ—ಈ ಕ್ರಮವನ್ನು ಮಾನವನು ತಪ್ಪಿಸಿಕೊಳ್ಳಲೂ ಆರನು, ಬದಲಾಯಿಸಲೂ ಆರನು; ಆದರೆ ಮಾನವಶರೀರಗತನಾಗಿ ಬೆಳೆಯುತ್ತಿರುವ ಜೀವಾತ್ಮನು, ಇನ್ನೂ ತನ್ನವಶವರ್ತಿಯಾಗದಿರುವ ಪ್ರಾಕೃತ ತತ್ವಗಳಿಂದ ಆಬಾಧಿತನಾಗಿ, ಕಾಮಾಧೀನವಾದ ಮನಸ್ಸನ್ನುಳ್ಳವನಾಗಿ, ಒಂದಂತಸ್ತಿನಲ್ಲಿರುವಾಗ ಮತ್ತೊಂದಂತಸ್ತಿನ ವಿಷಯಗಳನ್ನು ಪರಿಗ್ರಹಿಸುತ್ತಾ, ನಾನಾದಿಕ್ಕುಗಳಿಗೂ ಅಕ್ರಮವಾಗಿ ಓಡುತ್ತಾ, ಒಂದೊಂದಂತಸ್ತಿನ ಬೆಳವಣಿಗೆಗೂ ಪ್ರತಿಬಂಧಕಗಳನ್ನುಂಟುಮಾಡಿಕೊಳ್ಳುವನಾಗಿರುತ್ತಾನೆ. ಮಗುವು ಕುಮಾರನಂತೆ ವರ್ತಿಸುವುದಕ್ಕೆ ಹಾರಯಿಸುವುದು; ಕುಮಾರನು ಯೌವನಪುರುಷನಂತೆ ವರ್ತಿಸುವುದಕ್ಕೆ ಹಾರಯಿಸುವನು; ವೃದ್ಧನು ಯೌವನಕಾಲದ ಸುಖಗಳಿಗೆ ಕಾತರಿಸುವನು; ಈ ರೀತಿಯಲ್ಲಿ ಮಾನವ ಬಾಳಿನ ಗಾಂಭೀರ್ಯವು ಕೆಡುವುದಲ್ಲದೆ, ಅರ್ಥಪ್ರಯೋಜನಾಂಶವೂ ಹಾಳಾಗುವದು.

ಅಜ್ಞಾನಜನ್ಯವಾದ ಈ ಆತುರವನ್ನೂ ಅಕ್ರಮವನ್ನೂ ನಿರೋಧಿಸುವುದಕ್ಕಾಗಿ ಮಹರ್ಷಿಗಳು ಮಾನವನ ಆಯುಃಪರಿಮಾಣದಲ್ಲಿಯೂ, ಕೋಟ್ಯನುಕೋಟಿ ಜನ್ಮಗಳನ್ನೆತ್ತುತ್ತ ಬೆಳೆಯುವ ಜೀವಾತ್ಮನ ಆಯುಃಪರಿಮಾಣದಲ್ಲಿಯೂ ಅವಶ್ಯವಾಗಿರಲೇಬೇಕಾದ ಅಂತಸ್ತುಗಳನ್ನು ಆರ್ಯಮ

ಹಾಕುಲದ ಜ್ಯೇಷ್ಠ ವಂಶದವರ ಉಪಯೋಗಾರ್ಥವಾಗಿ ತೋರಿಸಿಕೊಟ್ಟಿರುತ್ತಾರೆ. ಈ ಅಂತಸ್ತುಗಳು ನಾಲ್ಕು ; ಒಂದು ಜನನದಿಂದ ಒಂದು ಮರಣದವರೆಗೆ ಇರುವ ಮಾನವನ ಆಯುಃಪರಿಮಾಣದಲ್ಲಿ ಈ ಅಂತಸ್ತುಗಳಿಗೆ ಆಶ್ರಮಗಳೆಂಬ ಹೆಸರು ಬಂದಿದೆ. ಆಶ್ರಮವೆಂದರೆ ತಂಗುವಸ್ಥಳ, ಮನೆ; ಲೆಕ್ಕವಿಲ್ಲದ ಜನನ ಮರಣಗಳ ಮೂಲಕವಾಗಿ ಬಳೆಯುವ ಜೀವಾತ್ಮನ ಆಯುಃಪರಿಮಾಣದಲ್ಲಿ ಈ ಅಂತಸ್ತುಗಳನ್ನು ವರ್ಣಗಳೆಂದು ಕರೆದಿದಾರೆ. ವರ್ಣವೆಂದರೆ ಬಣ್ಣ, ಜಾತಿ.

ಈಗ ನಮಗೆ ವಿಚಾರವಿಷಯವಾಗಿರುವುದು ಆಶ್ರಮ. ಹಿಂದೆ ಹೇಳಿದಂತೆ ನಾಲ್ಕು ಆಶ್ರಮಗಳಿವೆ:— (೧) ಬ್ರಹ್ಮಚರ್ಯ,—ಇದು ವಿದ್ಯಾರ್ಥಿಯ ಅಂತಸ್ತು ; (೨) ಗಾರ್ಹಸ್ಥ್ಯ—ಇದು ಗೃಹಸ್ಥನ ಅಂತಸ್ತು ; (೩) ವಾನಪ್ರಸ್ಥ—ಇದು ವನದಲ್ಲಿ ಅಥವಾ ಊರಹೊರಗೆ ವಾಸಮಾಡುವ ಅಂತಸ್ತು; (೪) ಸನ್ಯಾಸ—ಇದು ಸಂಸಾರಪರಿತ್ಯಾಗವನ್ನು ಮಾಡಿರುವ ಅಂತಸ್ತು. (ಮನುಸ್ಮೃತಿ. ಅ. ೬, ಶ್ಲೋ. ೮೭).

ಈ ಅಂತಸ್ತುಗಳಾವುದರಲ್ಲಿಯೂ ಮಾನವನು ಉಳಿದ ಅಂತಸ್ತುಗಳ ಕ್ಲುಪ್ತ ಕರ್ತವ್ಯಗಳಿಗೆ ಹೋಗಲೇಬಾರದು. ವಿದ್ಯಾರ್ಥಿಯು ಗೃಹಸ್ಥನಾಗಿಯೇ ಆಗಲಿ, ವಾನಪ್ರಸ್ಥನಾಗಿಯೇ ಆಗಲಿ, ಸನ್ಯಾಸಿಯಾಗಿಯೇ ಆಗಲಿ ಇರಬಾರದು. ಗೃಹಸ್ಥನು ಬ್ರಹ್ಮಚಾರಿಯಾಗಿಯೇ ಆಗಲಿ, ವಾನಪ್ರಸ್ಥನಾಗಿಯೇ ಆಗಲಿ, ಸನ್ಯಾಸಿಯಾಗಿಯೇ ಆಗಲಿ ಇರಬಾರದು. ವಾನಪ್ರಸ್ಥನು ಗೃಹಸ್ಥಾಶ್ರಮದ ಸುಖಗಳನ್ನು ಬಯಸಬಾರದು. ಸನ್ಯಾಸಿಯು ವಾನಪ್ರಸ್ಥಾಶ್ರಮದ ಸುಖಗಳ ಗೋಜಿಗೂ ಹೋಗಬಾರದು. ಒಂದೊಂದಾಶ್ರಮಕ್ಕೂ ಅದರದರ ಕರ್ತವ್ಯಗಳೂ ಸುಖಗಳೂ ಇರುತ್ತವೆ. ಅದರದರ ಕಾಲದಲ್ಲಿ ಅದರದರ ಕಾರ್ಯಗಳನ್ನೇ ಎಸಗುತ್ತಾ ಹೋದರೆ, ಜೀವಾತ್ಮನ ಬಳೆವು ಕ್ರಮವನ್ನೂ ಬಿಡದೆಯೇ ವೃದ್ಧಿಯನ್ನೈದುವುದು. ಆಶ್ರಮಗಳನ್ನು ನಿರಾಕರಿಸಿದರೆ ಜೀವಾತ್ಮನ ಬಳೆವಿಗೆ ತಡೆಯುಂಟಾಗುವುದು.

ಈ ನಮ್ಮ ಕಾಲದ ವಿದ್ಯಮಾನಗಳು ಪೂರ್ವದಲ್ಲಿದ್ದಂತೆ ಇಲ್ಲದಿರುವುದರಿಂದ, ಪೂರ್ವಕಾಲದ ಆಶ್ರಮ ನಿಯಮಗಳಿಗೆ ಅನುಸಾರವಾಗಿ ಈಗ

ನಡೆದುಕೊಳ್ಳುವುದು ಅಸಾಧ್ಯವಾಗಿರುತ್ತದೆ. ಆದರೂ ಈ ಚತುರಾಶ್ರಮಗಳ ಮುಖ್ಯಾಂಶಗಳನ್ನು ನಾವು ಗ್ರಹಿಸುವರಾದರೆ, ಜೀವಾತ್ಮನ ಬೆಳವಿಗೆ ಕುಂದಕ ಬಾರದಂತೆ ನಾವು ನಡೆದುಕೊಳ್ಳಲು ಈಗಲೂ ಸಮರ್ಥರಾಗುತ್ತೇವೆ.

ವೇದವಿದ್ಯಾರ್ಥಿದಶೆಯು ದ್ವಿಜತ್ವವನ್ನುಂಟುಮಾಡುವ ಉಪನಯನಸಂಸ್ಕಾರದೊಡನೆ ಪ್ರಾರಂಭವಾಗುತ್ತದೆ. ಅಂದಿನಿಂದಾಚೆಗೆ ಹುಡುಗನು ಕೆಲವು ಸದ್ಗುಣಗಳ ಸಂಪಾದನೆಯಲ್ಲಿ ನಿರತನಾಗಿರಬೇಕು. ದೇಹದಂಡನೆಯನ್ನೂ ಮಿತಾಹಾರವನ್ನೂ ವಿದ್ಯಾರ್ಥಿಯು ಆಚರಿಸಬೇಕು. ಈ ಆಚರಣೆಯಿಂದ ವಿದ್ಯಾರ್ಥಿಯು ಆರೋಗದೃಢಗಾತ್ರನಾಗುವನು. ಉಷಃಕಾಲಕ್ಕೆ ಸರಿಯಾಗೆದ್ದು, ಸ್ನಾನಾದ್ಯಾಹ್ನಿಕಗಳನ್ನು ತೀರಿಸಿಕೊಂಡು, ಸಾತ್ವಿಕಾಹಾರವನ್ನು ಮಿತವಾಗಿ ಭುಂಜಿಸಿ, ವ್ಯಾಯಾಮವನ್ನಾಚರಿಸುತ್ತಾ, ಲೋಲುಪ್ತಿಗಳನ್ನು ತೊರೆದು, ವಿದ್ಯಾರ್ಥಿಯು ಇರುವುದರಿಂದ ಅವನಿಗೆ ಕಾಯಶಕ್ತಿಯು ಹೆಚ್ಚುವುದು. ಈ ಬಗೆಯ ಆಚರಣೆಯಲ್ಲಿರುವ ವಿದ್ಯಾರ್ಥಿಯನ್ನು, ಹೊತ್ತು ಮೂಡಿದ ಮೇಲೆಯೂ ಹಾಸಿಗೆಯಲ್ಲಿ ಮಲಗುವ, ಭಕ್ಷ್ಯಭೋಜ್ಯಾದಿಗಳನ್ನು ಮನದಣಿಯೆ ಭುಂಜಿಸುವ, ವ್ಯಾಯಾಮವಿಮುಖನಾಗಿರುವ, ಹಂಸತೂಲಿಕಾತಲ್ಪಲೋಲನಾಗಿ ಕಾಲಹರಣವನ್ನು ಮಾಡುವ ವಿದ್ಯಾರ್ಥಿಯೊಡನೆ ಹೋಲಿಸಿ ನೋಡಿರಿ. ಸದಾಚಾರಸಂಪನ್ನನಾದ ವಿದ್ಯಾರ್ಥಿಯು ಪಟುವಾಗಿಯೂ, ದೃಢಕಾಯನಾಗಿಯೂ, ಬಲಶಾಲಿಯಾಗಿಯೂ, ತೇಜಸ್ವಿಯಾಗಿಯೂ, ಅನಲಸನಾಗಿಯೂ ಇರುವ ಹುಡುಗನಾಗಿರುವುದಲ್ಲದೆ ಬಲಶಾಲಿಯಾದ ಗಂಡಸಾಗುವಂತೆ ಬೆಳೆವನು; ಲೋಲನಾದ ವಿದ್ಯಾರ್ಥಿಯಾದರೋ ಪಟುವಾಗಿಲ್ಲದ, ದೇಹದಾರ್ಢ್ಯವಿಲ್ಲದ, ಬಜ್ಜು ಬೆಳೆದಿರುವ, ಆಲಸ್ಯಪ್ರಕೃತಿಯುಳ್ಳ, ಅಥವಾ ಕೃಶನಾದ ಮತ್ತು ಬಲಹೀನನಾದ ಹುಡುಗನಾಗಿರುವುದಲ್ಲದೆ, ಪ್ರಾಪ್ತವಯಸ್ಕನಾದಾಗ, ನರಳುವ ರೋಗಿಯೂ ಆಗುವನು.

ಪ್ರಯಾಸಪಡುವುದನ್ನೂ, ವಿಧೇಯತೆಯನ್ನೂ, ನಮ್ರತೆಯನ್ನೂ, ಪರೋಪಕಾರ ಬುದ್ಧಿಯನ್ನೂ ವಿದ್ಯಾರ್ಥಿಯು ಕಲಿಯಲು ಸರ್ವ ಪ್ರಯತ್ನವನ್ನೂ ಮಾಡಬೇಕು. ಕೌಮಾರವು ಮುಂದಿನ ಬಾಳಿಗೆ ಶಿಕ್ಷೆಯಾಗುವ ಕಾಲವಾದುದರಿಂದ, ಜ್ಞಾನಸಂಪಾದನೆಗಾಗಿ ಪ್ರಯಾಸಪಟ್ಟು ವ್ಯಾಸಂಗಮಾ

ಡುವುದು ಯೌವನಕಾಲದಲ್ಲಿ ಪ್ರಯೋಜನಕಾರಿಯಾಗಿ ಬಾಳುವಂತಹನಾಗುವುದಕ್ಕೆ ಅತ್ಯವಶ್ಯಕವಾಗಿಯೇ ಇರುವುದು. ತನ್ನ ನಡತೆಯನ್ನು ಕ್ರಮದಲ್ಲಿಟ್ಟುಕೊಂಡಿರುವುದಕ್ಕಾಗಿ ತನಗಿಂತಲೂ ವೃದ್ಧರಾಗಿರುವವರ ಅನುಭವವನ್ನು ಉಪಯೋಗಿಸಿಕೊಳ್ಳುವುದು ವಿಧೇಯತೆ ಯಾಗಿರುವುದು, ಮತ್ತು ಈ ವಿಧೇಯತೆಯಿಂದ ಪೂರ್ವವಯಸ್ಸಿನಲ್ಲಿ ತೊಂದರೆಗಳು ತಪ್ಪುವುವು, ಮತ್ತು ವಿಧೇಯತೆಯನ್ನು ಅರಿತಾತನೆ ಮುಂದಕ್ಕೆ ಸ್ವಾಮಿಯಾಗಿ ಬಾಳಲು ಅರ್ಹತೆಯನ್ನು ಸಂಪಾದಿಸುವನು. ನಮ್ರರನ್ನೊಡಗೂಡಿ, ತಂತಮ್ಮಲ್ಲಿರುವುದನ್ನು ಹಂಚಿಕೊಳ್ಳುವುದಕ್ಕೆ ಸರ್ವರೂ ಸಮ್ಮತಿಸುವುದರಿಂದ ನಮ್ರತ್ವವು ವಿದ್ಯಾರ್ಥಿಯನ್ನು ಬೇಗನೆ ಅಭಿವೃದ್ಧಿಗೆ ತರುತ್ತದೆ. ಸಂಸಾರ ಮಂಡಳಿಯಲ್ಲಿಯೂ ಸಹಪಾಠಿಗಳಲ್ಲಿಯೂ ಪರೋಪಕಾರ ನಿರತನಾಗಿರುವುದರಿಂದ ಮುಂದಕ್ಕೆ ಲೋಕೋಪಕಾರ ನಿರತನಾಗಿರುವಂತೆ ಆಗುವನು.

ಧ್ಯಾನಕ್ರಿಯೆಗಳೆರಡರಲ್ಲಿಯೂ, ಮನಃಕಾಯಗಳೆರಡರಲ್ಲಿಯೂ ವಿದ್ಯಾರ್ಥಿಯು ಪರಿಶುದ್ಧನಾಗಿರಲೇಬೇಕು; ತನ್ನ ಯೋಚನೆಗಳನ್ನು ತಾನು ನೋಡಿಕೊಳ್ಳಬೇಕು, ಏಕೆಂದರೆ ಕೆಡಕುಗಳನ್ನು ಯೋಚಿಸಿದ ಹುಡುಗನು ಕೆಡಕುಗಳನ್ನು ಮಾಡುವುದೇ ಇಲ್ಲ. ಲಿಂಗಭೇದಗಳ ಯೋಚನೆಗೂ, ಬಯಲು ಬಯಕೆಗಳಿಗೂ(day dreaming) ವಿದ್ಯಾರ್ಥಿಯು ಅವಕಾಶವನ್ನು ಕೊಡಕೂಡದು. ಮನಃಕಾಯಗಳೆರಡರಲ್ಲಿಯೂ ಪರಿಶುದ್ಧರಾಗಿರುವ ವಿದ್ಯಾರ್ಥಿಗಳು ಹೊರತು ಮತ್ತಾರೂ ಸುಖಶಾಲಿಗಳಾದ ಗೃಹಸ್ಥರಾಗುವುದಿಲ್ಲ ವಿದ್ಯಾರ್ಥಿಗೆ ಬ್ರಹ್ಮಚಾರಿಯೆಂಬ ಹೆಸರಿದೆ, ಮತ್ತು ಈ ಹೆಸರೇ ಸ್ತ್ರೀ ಸಂಗತ್ಯಾಗವನ್ನು ನಿರ್ದೇಶಿಸುತ್ತದೆ. ಅಕಾಲವೃದ್ಧತ್ವವೂ ದೌರ್ಬಲ್ಯವೂ ರೋಗವೂ ಕುಲಕ್ಷಯವೂ ಸನಾತನ ಧರ್ಮಕ್ಕೆ ವಿರುದ್ಧವಾಗಿರುವ ವಿದ್ಯಾರ್ಥಿವಿವಾಹದಿಂದ ಉದ್ಭವಿಸುವುವು.

ವಿದ್ಯಾರ್ಥಿಯು ಯೌವನಸ್ಥನಾಗಿ ತನ್ನ ಪಾಠಶಾಲೆಯ ಮತ್ತು ಶಾಸ್ತ್ರಶಾಲೆಯ ವ್ಯಾಸಂಗಗಳನ್ನೆಲ್ಲಾ ಪೂರಯಿಸಿದವನಾಗಿ, ಗೃಹಸ್ಥಾಶ್ರಮದ ಕರ್ತವ್ಯಗಳನ್ನೂ ಅಧಿಕಾರಗಳನ್ನೂ ಸ್ವೀಕರಿಸಲು ಅರ್ಹತೆಯನ್ನು ಪಡೆದವನಾಗಿ, ವಿವಾಹವನ್ನು ಮಾಡಿಕೊಂಡೊಡನೆಯೇ ಗೃಹಸ್ಥನಾಗುವನು. ಆಶ್ರಮಗಳೊಳಗೆಲ್ಲಾ ಇದೇ ಅತಿಶಯ ಪ್ರಾಮುಖ್ಯವನ್ನುಳ್ಳದಾ

ಗಿದೆ, ಏಕೆಂದರೆ, ಉಳಿದ ಆಶ್ರಮಗಳಿಗೆಲ್ಲಾ ಇದೇ ಆಶ್ರಯವಾಗಿರುವುದು. (ಮನುಸ್ಮೃತಿ. ಅ. ೩, ಶ್ಲೋ. ೭೭,೭೮-೯೦). ಕುಟುಂಬದ ಮತ್ತು ಜನಾಂಗದ ಯೋಗಕ್ಷೇಮಗಳೆರಡೂ ಗೃಹಸ್ಥನನ್ನು ಆಶ್ರಯಿಸಿರುವುವು ; ಅವುಗಳೆರಡರ ಬಾಳೂ ಇವನ ಕೈಯಲ್ಲಿರುವುದು. ಸದ್ಧರ್ಮ ನಿರತನಾದ ಪತಿಯೂ, ಸದ್ಧರ್ಮನಿರತನಾದ ಪಿತನೂ, ಸದ್ಧರ್ಮನಿರತನಾದ ಯಜಮಾನನೂ, ಸದ್ಧರ್ಮನಿರತನಾದ ದೇಶಾಭಿಮಾನಿಯು ಮಾನವ ಶ್ರೇಷ್ಠನೆನಿಸಿಕೊಂಡಿರುವನು. ಅಸ್ವಾರ್ಥಪರತೆಗೂ (unselfishness) ಕನಿಕರಕ್ಕೂ (compassion) ಮಾರ್ದವಕ್ಕೂ (tenderness) ಮಿತಸ್ವಭಾವಕ್ಕೂ (temperance) ನೈರ್ಮಲ್ಯಕ್ಕೂ (purity) ಪರಹಿತವರ್ತನಕ್ಕೂ (help fulness) ವಿವೇಕಕ್ಕೂ (prudence) ಕಾರ್ಯನಿರತೆಗೂ (industry) ನ್ಯಾಯವಿಮರ್ಶೆಗೂ (right judgment) ದಾನಶೀಲತೆಗೂ (charity) ಗೃಹವೇ ಶಿಕ್ಷಾಶಾಲೆ. ತನ್ನ ಮನೆಯವರಿಗೂ ದೇಶೀಯರಿಗೂ ತನ್ನ ಯಾವಯಾವ ಸದ್ಗುಣಗಳನ್ನು ಪ್ರದರ್ಶನಮಾಡಿ ಗೃಹಸ್ಥಾಶ್ರಮಿಯು ತಾನು ಶ್ರೇಷ್ಠನೆನಿಸಿಕೊಳ್ಳುವನೋ, ಆ ಸದ್ಗುಣಗಳನ್ನೇ ಭೇದಗಳೇನೂ ಇಲ್ಲದೆ ಸಕಲ ಭೂತಗಳಿಗೂ ನಿವೇದಿಸಿದಾಗ, ಮಹಾತ್ಮನೆಂತಲೂ ಪರಮ ಸಾಧುವೆಂತಲೂ ಎನಿಸಿಕೊಳ್ಳುವನಾಗುವನು. ಗೃಹಸ್ಥಾಶ್ರಮದ ನಿಜಸ್ವಭಾವವು ಈಗ ಕೆಟ್ಟಿರುವುದರಿಂದ ಈಗಿನ ಬಾಳು ಹೊಲಬಾಳಾಗಿಯೂ ಸ್ವಾರ್ಥಪರವಾಗಿಯೂ ಪರಿಣಮಿಸಿದೆ ; ಮತ್ತು ಗೃಹಸ್ಥಾಶ್ರಮವನ್ನು ಅರ್ಧಮಟ್ಟಗೇ ಹೊಕ್ಕು, ವಿದ್ಯಾರ್ಥಿ ವಿವಾಹವನ್ನು ತಂದಿಟ್ಟುಕೊಂಡು, ಬ್ರಹ್ಮಚರ್ಯಾಶ್ರಮದ ಕರ್ತವ್ಯಗಳನ್ನೂ ಸಮ್ಮೇಳನ ಮಾಡಿರುವುದರಿಂದಲೇ, ಗೃಹಸ್ಥಾಶ್ರಮದ ಪೂರ್ವ ಘನತೆಯೂ ಗಾಂಭೀರ್ಯವೂ ಈಗ ಹಾಳಾಗಿವೆ. ಕಸುಗಟ್ಟ ಕಾಯನ್ನು ಕಿತ್ತು ಸವಿಯುವಾತನು ಹಣ್ಣಿನ ಮಾಧುರ್ಯವನ್ನು ಸವಿಯದವನಾಗಲೇ ಬೇಕಲ್ಲವೆ ?

ಸತ್ಕುಲಪ್ರಸೂತರಾದರೂ ಸದ್ಧರ್ಮಾಲೋಚನಾಪರರಲ್ಲದ ಬ್ರಾಹ್ಮಣಬಾಲರು ಕೆಲರು, ನಿಯಮಿತಕಾಲವದು ಬರುವುದಕ್ಕೆ ಮೊದಲೇ, ತಂತಮ್ಮ ಗೃಹಗಳನ್ನು ಬಿಟ್ಟು, ತಪಸ್ಸಿದ್ಧಿಗಾಗಿ ಕಾಡಿಗೆ ತೆರಳಿದರು. ಇಂದ್ರನು ಕನಿಕರದಿಂದ ಹೊಂಬಣ್ಣದ ಪಕ್ಷಿಯ ರೂಪವೊಂದನ್ನು ಸ್ವೀಕಾರಮಾಡಿ

ಬಂದವನಾಗಿ, "ಬಾಲಕರುಗಳಿರಾ, ಗೃಹಸ್ಥಾಶ್ರಮಿಗಳಾಗಿ ಬಾಳಿರಿ! ಸದ್ಗುಣಗಳ ಕೃಷಿಗೆ ಗೃಹಸ್ಥಾಶ್ರಮವೇ ಸಮೀಚೀನವಾದ ಕ್ಷೇತ್ರ. ಗೃಹಸ್ಥಾಶ್ರಮವು ಪವಿತ್ರವಾದುದು. ದೇವಯಜ್ಞವನ್ನು ಮಾಡುವುದು, ವೇದಾಧ್ಯಯನವನ್ನು ಮಾಡುವುದು, ನಾವು ರಕ್ಷಿಸಲ್ಪಟ್ಟರುವಂತೆಯೇ ನಮ್ಮ ಕುಟುಂಬದವರನ್ನೂ ಮಕ್ಕಳುಮರಿಗಳನ್ನೂ ನಾವು ಸಾಕಿ ಸಲಹಿ ಪಿತೃಋಣವನ್ನು ಪರಿಹರಿಸಿಕೊಳ್ಳುವುದು—ಇವೆಲ್ಲಾ ಶ್ರೇಷ್ಠತಮ ತಪಸ್ಸಾಗಿಯೇ ಇವೆ. ಗೃಹಸ್ಥಾಶ್ರಮದ ಕಾರ್ಯನಿರ್ವಾಹವ ಗುರುತರಭಾರವನ್ನು ವಹಿಸಿರಿ! ತಂತಮ್ಮ ಕರ್ತವ್ಯಗಳನ್ನು ಬಿಟ್ಟೋಡುವವರು ಪಾಪಕ್ಕೊಳಗಾಗುವರು. ಹಸಿದು ಬಂದವರಿಗೆ ಹಾಕಿಯುಳಿದ ಅನ್ನವನ್ನು ಭುಂಜಿಸುವುದು ಯಜ್ಞಶಿಷ್ಟವನ್ನು ಭುಂಜಿಸಿದಂತಾಗುವುದು" ಎಂದು ತಿಳಿಸಿದನು. (ಮಹಾಭಾರತ. ಶಾಂತಿಪರ್ವ. ಅ. ೧೧).

ತನ್ನ ಪುತ್ರರು ತಾನು ಮಾಡುತ್ತಿರುವ ಗೃಹಕೃತ್ಯಗಳ ಸಂಪೂರ್ಣ ಭಾರವನ್ನು ವಹಿಸುವುದಕ್ಕೆ ಸಮರ್ಥರಾಗಿರುವುದನ್ನು ತಾನು ತಿಳಿದಕೂಡಲೇ, ವೃದ್ಧತ್ವದ ಚಿಹ್ನೆಗಳು ತಲೆದೋರಿದಕೂಡಲೇ, ತನ್ನ ಮಕ್ಕಳ ಮಕ್ಕಳು ತನ್ನ ಸುತ್ತಲೂ ಸೇರಿದ ಕೂಡಲೆ, ತಾನೂ ತನ್ನ ಸತಿಯೂ ಮನೆಯ ಯಾಜಮಾನ್ಯವನ್ನು ತನ್ನ ಪುತ್ರರಿಗೊಪ್ಪಿಸಿ, ಲೌಕಿಕ ವೃತ್ತಿಗಳನ್ನೂ ವ್ಯಾಪಾರಗಳನ್ನೂ ತಾನು ತೊರೆಯುವ ಕಾಲವು ತನಗೆ ಬಂತೆಂದು ಗೃಹಸ್ಥಾಶ್ರಮಿಯು ತಿಳಿಯಬೇಕು. ಗೃಹಕೃತ್ಯಗಳ ತಂಟೆತಗಾದೆಗಳಿಗೆ ವಿಶೇಷವಾಗಿ ಹೋಗದೆ, ಶಾಂತಚಿತ್ತನಾಗಿ, ಪಾಠಪ್ರವಚನಗಳಲ್ಲಿ ಕಾಲಹರಣಮಾಡುತ್ತಾ, ಪರಹಿತಾರ್ಥಕ್ಕಾಗಿ ಸ್ವಾರ್ಥತ್ಯಾಗವನ್ನು ಮಾಡುತ್ತಾ, ತನಗಿಂತಲೂ ಚಿಕ್ಕವರಿಗೆ ಬುದ್ಧಿವಾದವನ್ನು ಹೇಳುತ್ತಾ ಮೂರನೆಯ ಆಶ್ರಮವನ್ನು ಕಳೆಯುವುದು ಮಾನವನಿಗೆ ಈ ಕಾಲಸ್ಥಿತಿಗೆ ಉಚಿತವಾಗಿರುವುದು.

ಕೊನೆಗೆ, ವೃದ್ಧತ್ವದಲ್ಲಿ, ಮಾನವನು, ತಾನು ತನ್ನ ಇಹಲೋಕದ ಯಾತ್ರೆಯಲ್ಲಿ ಎಸಗಿದ ಕರ್ಮಗಳ ಫಲವನ್ನುಂಡು ಮತ್ತೊಮ್ಮೆ ಇಹಲೋಕದಲ್ಲಿ ಜನ್ಮವನ್ನೆತ್ತುವುದಕ್ಕಾಗಿ, ಈ ಭೂಲೋಕದ ಮರಣಾನಂತರದಲ್ಲಿ ಬರುವ ಬಾಳನ್ನು ಬಾಳಲೋಸುಗ, ತನ್ನ ಪಾರ್ಥಿವಶರೀರತ್ಯಾ

ಗವನ್ನು ಮನಃಪೂರ್ವಕವಾಗಿ ಮಾಡುವವರೆಗೂ ತನ್ನ ಜೀವಮಾನವನ್ನು ಧ್ಯಾನಾರಾಧನಗಳಲ್ಲಿ ಕಳೆಯುವುದಕ್ಕಾಗಿ ನಾಲ್ಕನೆಯ ಆಶ್ರಮವಾದ ಸನ್ಯಾಸಾಶ್ರಮವನ್ನು ಸ್ವೀಕರಿಸುವುದು ಉಚಿತವಾಗಿಯೇ ಇರುತ್ತದೆ.

## ಸ್ಮೃತ್ಯಾದಿ ವಚನಗಳು.

ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ಯತಿಸ್ತಥಾ |
ಏತೇ ಗೃಹಸ್ಥ ಪ್ರಭವಾಶ್ಚತ್ವಾರಃ ಪೃಥಗಾಶ್ರಮಾಃ |

(ಮನುಸ್ಮೃತಿ. ಅ. ೬, ಶ್ಲೋ. ೮೭).

“ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿ—ಈ ನಾಲ್ಕು ಆಶ್ರಮಗಳೂ ಗೃಹಸ್ಥನಿಂದಲೇ ಹುಟ್ಟಿದುವುಗಳಾಗಿವೆ.”

ವೇದಾನಧೀತ್ಯ ವೇದೌವಾವೇದಂ ವಾಪಿ ಯಥಾಕ್ರಮಂ |
ಅವಿಪ್ಲುತ ಬ್ರಹ್ಮಚರ್ಯಃ ಗೃಹಸ್ಥಾಶ್ರಮಮಾವಸೇತ್ ‖
ಗೃಹಸ್ಥಸ್ತು ಯದಾಪಶ್ಯೇ ದ್ವಲೀಪಲಿತಮಾತ್ಮನಃ |
ಅಪತ್ಯಸ್ಯ ತಥಾಪತ್ಯಂ ತದಾರಣ್ಯಂ ಸಮಾಶ್ರಯೇತ್ ‖
ವನೇಷುತು ವಿಹೃತ್ಯೈವಂ ತೃತೀಯಂಭಾಗಮಾಯುಷಃ |
ಚತುರ್ಥಮಾಯುಷೋ ಭಾಗಂ ತ್ಯಕ್ತ್ವಾ ಸಂಗಾನ್ಪರಿವ್ರಜೇತ್‖

(ಮನುಸ್ಮೃತಿ. ಅ. ೩, ಶ್ಲೋ. ೨; ಅ. ೬, ಶ್ಲೋ. ೨, ೩೩).

“ವೇದಗಳನ್ನಾಗಲಿ, ಎರಡು ವೇದಗಳನ್ನಾಗಲಿ, ಕೊನೆಗೆ ಒಂದು ವೇದವನ್ನಾಗಲಿ, ಯಥಾಕ್ರಮವಾಗಿ ಬ್ರಹ್ಮಚರ್ಯ ವ್ರತವನ್ನುಲ್ಲಂಘಿಸದೆ ಅಧ್ಯಯನ ಮಾಡಿದವನಾಗಿ, ಗೃಹಸ್ಥಾಶ್ರಮವನ್ನು ಸ್ವೀಕರಿಸುವನಾಗಲಿ.

“ತನ್ನ ಮೈಯಲ್ಲಿ ಸುಕ್ಕುಗಳನ್ನು ಬಿಳಿಯ ಕೂದಲುಗಳನ್ನೂ, ತನ್ನ ಮನೆಯಲ್ಲಿ ತನ್ನ ಮಗನ ಮಗನನ್ನೂ ಕಂಡಕೂಡಲೆ ಗೃಹಸ್ಥನು ಅರಣ್ಯವಾಸಕ್ಕೆ ಹೊರಡುವವನಾಗಲಿ.

“ತನ್ನ ಆಯುಸ್ಸಿನಲ್ಲಿ ಮೂರನೆಯ ಭಾಗವನ್ನು ಅರಣ್ಯವಾಸದಲ್ಲಿ ಕಳೆದು, ನಾಲ್ಕನೆಯ ಭಾಗವನ್ನು ಸರ್ವಸಂಗಪರಿತ್ಯಾಗವನ್ನು ಮಾಡಿ ಯತಿಯಾಗಿರಲಿ.”

ಅನಧೀತ್ಯ ದ್ವಿಜೋವೇದಾನನುತ್ಪಾದ್ಯ ತಥಾಪ್ರಜಾಂ |
ಅನಿಷ್ಟ್ವಾಚೈವ ಯಜ್ಞೈಶ್ಚ ಮೋಕ್ಷಮಿಚ್ಛನ್‌ವ್ರಜತ್ಯಧಃ ||
(ಮನುಸ್ಮೃತಿ. ಅ. ೬, ಶ್ಲೋ. ೩೭)

"ವೇದಾಧ್ಯಯನಮಾಡದೆ, ಪ್ರಜೋತ್ಪತ್ತಿಯನ್ನು ಮಾಡದೆ, ಯಜ್ಞಗಳನ್ನು ಮಾಡದೆ ಮೋಕ್ಷವನ್ನು ಬಯಸುವ ದ್ವಿಜನು ಕೆಳಕ್ಕೆ ಹೋಗುವನು."

ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾತಿಭೋಜನಂ |
ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ಪರಿವರ್ಜಯೇತ್ ||
(ಮನುಸ್ಮೃತಿ. ಅ. ೨. ಶ್ಲೋ. ೫೭).

"ಅತಿ ಭೋಜನವು ಆರೋಗ್ಯವನ್ನು ಹಾಳುಮಾಡುವುದು, ಆಯುಸ್ಸನ್ನು ಹಾಳುಮಾಡುವುದು, ಸ್ವರ್ಗಕ್ಕೆ ಹೋಗದಂತೆ ಮಾಡುವುದು, ಪುಣ್ಯವನ್ನು ಹಾಳುಮಾಡುವುದು, ಲೋಕನಿಂದಿತವಾಗಿಯೂ ಇರುವುದು, ಆದುದರಿಂದ ಅದು ತ್ಯಜಿಸಲ್ಪಡಲಿ."

ಚೋದಿತೋಗುರುಣಾನಿತ್ಯ ಮ ಪ್ರಚೋದಿತ ಏವವಾ ||
ಕುರ್ಯಾ ದಧ್ಯಯನೇಯತ್ನಮಾಚಾರ್ಯಸ್ಯ ಹಿ ತೇಷುಚ |
ವರ್ಜಯೇನ್ಮಧುಮಾಂ ಸಂಚಗಂಧಮಾಲ್ಯಂರಸಾನ್‌ಸ್ತ್ರಿಯಃ |
ಶುಕ್ತಾನಿಚೈವ ಸರ್ವಾಣಿ ಪ್ರಾಣಿನಾಂಚೈವ ಹಿಂಸನಂ ||
ಕಾಮಂ ಕ್ರೋಧಂ ಚ ಲೋಭಂ ಚ ನರ್ತನಂ ಗೀತವಾದನಂ |
ದ್ಯೂತಂಚ ಜನವಾದಂಚ ಪರೀವಾದಂ ತಥಾನೃತಂ ||
ಏಕಃಶಯಿತಸರ್ವತ್ರನರೇತಸ್ಕಂದಯೇ ತ್ಕ್ವಚಿತ್ ||
ಕಾಮಾದ್ಧಿ ಸ್ಕಂದಯನ್‌ರೇತಃ ಹಿನಸ್ತಿ ವ್ರತಮಾತ್ಮನಃ ||
(ಮನುಸ್ಮೃತಿ. ಅ. ೨, ಶ್ಲೋ. ೧೯೧, ೧೭೭—೧೮೦).

"ಗುರುವು ಹೇಳಲಿ, ಹೇಳದಿರಲಿ, ಬ್ರಹ್ಮಚಾರಿಯು ವೇದಾಧ್ಯಯನದಲ್ಲಿಯೂ ಗುರುಶುಶ್ರೂಷೆಯಲ್ಲಿಯೂ ನಿರತನಾಗಿರಲಿ.

"ಬ್ರಹ್ಮಚಾರಿಯು ಮಧುವನ್ನು ಮಾಂಸವನ್ನೂ ಗಂಧವನ್ನೂ ಮಾಲೆ-

ಗಳನ್ನೂ ರುಚಿರುಚಿಯಾಗಿರುವ ತಿಂಡಿಗಳನ್ನೂ ಸ್ತ್ರೀಯರನ್ನೂ ಹುಳಿ ಹಿಡಿದ ಪದಾರ್ಥಗಳನ್ನೂ ಪ್ರಾಣಿಹಿಂಸೆಯನ್ನೂ ವರ್ಜಿಸಿರಬೇಕು.

"ಕಾಮವನ್ನೂ ಕ್ರೋಧವನ್ನೂ ಲೋಭವನ್ನೂ ನರ್ತನವನ್ನೂ ಸಂಗೀತವನ್ನೂ ವಾದ್ಯಗಳನ್ನೂ ದ್ಯೂತವನ್ನೂ ಹರಟೆಮಾತುಗಳನ್ನೂ ಪರನಿಂದೆಯನ್ನೂ ಅನೃತವನ್ನೂ ವರ್ಜಿಸಿರಬೇಕು.

"ಬ್ರಹ್ಮಚಾರಿಯು ಸರ್ವತ್ರ ಒಬ್ಬನೇ ಮಲಗಲಿ, ಮತ್ತು ರೇತ ಸ್ಕಂದನವನ್ನು ಮಾಡದಿರಲಿ ; ಕಾಮಾತುರನಾಗಿ ರೇತಸ್ಕಂದನವನ್ನುಮಾಡುವ ಬ್ರಹ್ಮಚಾರಿಯು ವ್ರತಭ್ರಷ್ಟನಾಗುವನು."

ಯಥಾವಾಯುಂ ಸಮಾಶ್ರಿತ್ಯ ಸರ್ವೇ ಜೀವಂತಿ ಜಂತವಃ |
ತಥಾಗೃಹಸ್ಥಮಾಶ್ರಿತ್ಯ ವರ್ತಂತ ಇತರಾಶ್ರಮಾಃ ||
ಸರ್ವೇಷಾಮಪಿ ಚೈತೇಷಾಂ ವೇದಶ್ರುತಿವಿಧಾನತಃ |
ಗೃಹಸ್ಥ ಉಚ್ಯತೇಶ್ರೇಷ್ಠಃ ಸತ್ರೀನೇತಾನ್ ಬಿಭರ್ತಿಹಿ ||
ಯಥಾನದೀನದಾಸ್ಸರ್ವೇ ಸಮುದ್ರೇಯಾಂತಿಸಂಸ್ಥಿತಿಂ |
ತಥೈವಾಶ್ರಮಿಣಸ್ಸರ್ವೇ ಗೃಹಸ್ಥೇಯಾಂತಿ ಸಂಸ್ಥಿತಿಂ ||
(ಮನುಸ್ಮೃತಿ, ಅ. ೩, ಶ್ಲೋ. ೭೭, ೭೮, ೯೦).

"ಸರ್ವಜಂತುಗಳೂ ವಾಯುವನ್ನು ಆಶ್ರಯಿಸಿಕೊಂಡು ಹೇಗೆ ಜೀವಿಸುತ್ತವೆಯೋ ಹಾಗೆಯೇ ಇತರ ಆಶ್ರಮಗಳು ಗೃಹಸ್ಥನನ್ನು ಆಶ್ರಯಿಸಿರುವುವು.

"ಈ ಆಶ್ರಮಿಗಳೊಳಗೆಲ್ಲಾ ವೇದಶ್ರುತಿಯು ಸಾರುವಂತೆ ಗೃಹಸ್ಥನೇ ಶ್ರೇಷ್ಠನು. ಉಳಿದಾಶ್ರಮಗಳಿಗೆ ಇವನೇ ನಿಜವಾಗಿಯೂ ಆಧಾರವಾಗಿರುವನು.

"ನದೀನದಗಳೆಲ್ಲವೂ ಸಮುದ್ರದಲ್ಲಿ ಹೇಗೆ ಸುಸ್ಥಿತಿಗಳಾಗಿರುವುವೋ ಹಾಗೆಯೇ ಆಶ್ರಮಿಗಳೆಲ್ಲರೂ ಗೃಹಸ್ಥನಲ್ಲಿಯೇ ಸುಸ್ಥಿತರಾಗಿರುವರು."

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮಕರೋತಿಯಃ |
ಸ ಸನ್ಯಾಸೀಚ ಯೋಗೀಚ ನನಿರಗ್ನಿರ್ನಚಾಕ್ರಿಯಃ ||
(ಭಗವದ್ಗೀತೆ. ಅ. ೬, ಶ್ಲೋ. ೧).

“ಮಾಡತಕ್ಕ ಕರ್ಮವನ್ನು ಫಲಾಪೇಕ್ಷೆಯಿಲ್ಲದೆ ಯಾವನು ಮಾಡುವನೋ ಅವನೇ ಸನ್ಯಾಸಿ, ಅವನೇ ಯೋಗಿ, ಅಗ್ನಿಯನ್ನೂ ಕರ್ಮಗಳನ್ನೂ ಬಿಟ್ಟಮಾತ್ರಕ್ಕೆ ಸನ್ಯಾಸಿಯಾಗುವುದಿಲ್ಲ.”



ಇದು ಸನಾತನಧರ್ಮದೀಪಿಕೆಯಲ್ಲಿ ಕರ್ಮಪ್ರಕಾಶಿಕೆಯೆಂಬ ದ್ವಿತೀಯಭಾಗದಲ್ಲಿ ಆಶ್ರಮಚತುಷ್ಟಯವಿವರಣೆಯೆಂಬ ಷಷ್ಟಾಧ್ಯಾಯ.



# ದ್ವಿತೀಯ ಭಾಗ.

## ಸಪ್ತಮಾಧ್ಯಾಯ.

***

## ವರ್ಣಚತುಷ್ಟಯ ವಿವರಣೆ.

---



ಹಿಂದೆ ಹೇಳಿದಂತೆ, ಜೀವಾತ್ಮನ ಕೋಟ್ಯನುಕೋಟಿ ಪುನರ್ಜನ್ಮಗಳ ದೀರ್ಘಯಾತ್ರೆಯಲ್ಲಿ ಸ್ಪಷ್ಟವಾಗಿ ಗುರುತಾಗಿರುವ ಪ್ರಸ್ಥಾನಗಳು ನಾಲ್ಕಿವೆ. ಪೂರ್ವದಲ್ಲಿ ಇವುಗಳನ್ನು ವರ್ಣಗಳೆಂದು ಕರೆದರು, ಮನುವು ಜನರ ಜಾತಿ ವಿವೇಚನೆಯಲ್ಲಿ ಈ ವರ್ಣಭೇದಗಳನ್ನು ಇಟ್ಟುಕೊಂಡನು.

ಈ ಪ್ರಸ್ಥಾನಗಳು, ವರ್ಣಭೇದಗಳು, ಸಕಲ ದೇಶೀಯರಿಗೂ ಉಂಟು ; ಜೀವಾತ್ಮಗಳೆಲ್ಲವೂ ಈ ವರ್ಣಗಳನ್ನು ದಾಟಿಹೋಗಲೇಬೇಕು; ಸನಾತನಧರ್ಮದ ವಿಶೇಷವೇನೆಂದರೆ—ಭರತಖಂಡದ ಜನರನ್ನು ವಿಂಗಡಿಸುವುದಕ್ಕೆ ಈ ವರ್ಣಭೇದಗಳನ್ನೇ ಆಧಾರವಾಗಿಟ್ಟುಕೊಂಡಿರುತ್ತದೆ. ಪೂರ್ವಕಾಲದಲ್ಲಿ, ಹೊರಗಣ ಜಾತಿವಿವೇಚನೆಯು ಒಳಗಣ ವರ್ಣಭೇದಗಳಿಗೆ ಅನುಸಾರವಾಗಿತ್ತು ; ಒಂದೊಂದು ಪ್ರಸ್ಥಾನದ ಜೀವಾತ್ಮಗಳು ಆಯಾ ಪ್ರಸ್ಥಾನಕ್ಕನುಗುಣವಾದ ಶರೀರಗಳಲ್ಲಿಯೇ ಹುಟ್ಟುತ್ತಿದ್ದುವು ; ಮತ್ತು ಭರತಖಂಡದ ಜನರೆಲ್ಲಾ ತೃಪ್ತರಾಗಿಯೂ ವರ್ಧಿಷ್ಣುಗಳಾಗಿಯೂ ಇದ್ದರು. ಆದರೆ, ಈಚಿನ ಕಾಲದಲ್ಲಿ, ಅರ್ಜುನನು ಕುರುಕ್ಷೇತ್ರದಲ್ಲಿ ಮುಂದಾಗುವುದನ್ನು ನಿಜವಾಗಿಯೂ ಕಂಡತೆರದಲ್ಲಿ, ವರ್ಣಸಂಕರವು ಆರ್ಯಾವರ್ತದಲ್ಲಿಯೂ ಇಂಡಿಯಾದೇಶದ ಎಲ್ಲಾ ಭಾಗಗಳಲ್ಲಿಯೂ ಕಾಣಿಸಿಕೊಂಡಿರುವುದು. ಒಂದೊಂದೂ ಪ್ರಸ್ಥಾನದ ಜೀವಾತ್ಮಗಳು ಉಳಿದ ಪ್ರಸ್ಥಾನಗಳ,

ಶರೀರಗಳಲ್ಲಿ ಜನ್ಮಗಳನ್ನು ಎತ್ತುತ್ತಿವೆ. ಹೀಗಾಗುವುದರಿಂದ, ವರ್ಣಸಂಕರವಿಲ್ಲದಿದ್ದ ಪೂರ್ವಕಾಲದಲ್ಲಿ ಜನರಿಗೆಲ್ಲಾ ತೃಪ್ತಿಯೂ ಬಳೆವಳಿಗೆಯೂ ಎಷ್ಟು ಚನ್ನಾಗಿ ಉಂಟಾಗಿತ್ತೋ, ವರ್ಣಸಂಕರವಿರುವ ಈಗಿನ ಕಾಲದಲ್ಲಿ ಜನರಿಗೆಲ್ಲಾ ತೃಪ್ತಿಯೂ ಬಳೆವಳಿಗೆಯೂ ತಪ್ಪಿಹೋಗಿವೆ. ಇದರಿಂದ ಉತ್ಪಾತಕಗಳನೇಕಗಳು ಸಂಭವಿಸುತ್ತಿವೆ. ಈ ಸ್ಥಿತಿಯನ್ನು ಬದಲಾಯಿಸುವುದಕ್ಕೆ ಮಾಡಬೇಕಾದ ಕರ್ತವ್ಯಗಳನ್ನು ಪ್ರಾಜ್ಞರಾದ ಮಾನವರು ಚರ್ಚಿಸಿ ತೀರ್ಮಾನಗೈಬೇಕಾಗಿದೆ; ಲೋಕಾನುಭವವಿಲ್ಲದ ಹುಡುಗರ ಕೆಲಸವಾಗಿಲ್ಲ. ಜಾತಿಯೆಂಬುದರ ಅರ್ಥವನ್ನು ನಾವು ಚೆನ್ನಾಗಿ ಗ್ರಹಿಸುವುದು ಈಗ ಅವಶ್ಯಕವಾಗಿರುವುದು.

ನಾಲ್ಕು ಪ್ರಸ್ಥಾನಗಳುಂಟೆಂದು ನಾವು ಆಗಲೇ ಹೇಳಿರುತ್ತೇವೆಯಷ್ಟೆ. ಜೀವಾತ್ಮನ ಶೈಶವ ಬಾಲ್ಯ ಕೌಮಾರಗಳನ್ನು ಒಳಕೊಂಡಿರುವುದು ಪ್ರಥಮಪ್ರಸ್ಥಾನ. ಈ ಪ್ರಸ್ಥಾನದಲ್ಲಿ ಕೌಮಾರದಲ್ಲಿರಬೇಕಾದ ಸದ್ಗುಣಗಳು ಜೀವಾತ್ಮನಲ್ಲಿ ವಿಕಸಿತವಾಗುವುವು; ವಿಧೇಯತ್ವವನ್ನೂ ದಾಸ್ಯವನ್ನೂ ಸಹಿಷ್ಣುತೆಯನ್ನೂ ದೃಢಪಡಿಸಿಕೊಳ್ಳುವನು. ಸ್ವಾಧಿಕಾರದ ಭಾರಗಳು ಇರುವುದು ಈ ಪ್ರಸ್ಥಾನದಲ್ಲಿ ಅತಿವಿರಳ; ಇವನ ಕರ್ತವ್ಯಗಳನ್ನೆಲ್ಲಾ ಶುಶ್ರೂಷೆಯೆಂಬ ಒಂದೇ ಮಾತಿನಲ್ಲಿ ಅಡಗಿಸಬಹುದಾಗಿದೆ. ವರ್ಣಸಂಕರವಿಲ್ಲದಿದ್ದಲ್ಲಿ ಈ ಬಾಲಜೀವಾತ್ಮಗಳು ಕೀಳಾದ ಅಂತಸ್ತಿನವರ ಶರೀರಗಳಲ್ಲಿ ಹುಟ್ಟುವುವು. ಈ ಜೀವಾತ್ಮಗಳು ಕೂಲಿಯ ಆಳುಗಳಾಗಿಯೂ, ಬಡಗಿಗಳಾಗಿಯೂ, ಸಂಬಳದ ಆಳುಗಳಾಗಿಯೂ, ಕೈಗಾರಿಕೆಯ ಕೆಲಸದವರಾಗಿಯೂ ಇರುವುವು. ಸನಾತನ ಧರ್ಮವನ್ನನುಸರಿಸಿ ಜಾತಿವಿವಕ್ಷೆಯನ್ನು ಏರ್ಪಡಿಸಿದ ಕಾಲದಲ್ಲಿ ಈ ಜೀವಾತ್ಮಗಳು ಶೂದ್ರಜಾತಿಯೊಳಗೆ ಹುಟ್ಟಿದುವು. ವರ್ಣಸಂಕರವಾಗಿರುವ ಈಚಿನ ಕಾಲದಲ್ಲಿ ಇಂತಹ ಬಾಲಜೀವಾತ್ಮಗಳು, ಇಂಡಿಯಾದೇಶದ ಶೂದ್ರಜಾತಿಯಲ್ಲಿಯೇ ಆಗಲಿ, ಇತರ ದೇಶಗಳ ಕೀಳುಅಂತಸ್ತಿನವರಲ್ಲಿಯೇ ಆಗಲಿ, ಹುಟ್ಟುವುದಾದರೆ, ಸಂತೋಷಯುಕ್ತಗಳಾಗಿಯೂ ತೃಪ್ತಿಯುಳ್ಳುವುಗಳಾಗಿಯೂ ಪ್ರಯೋಜನಕಾರಿಗಳಾಗಿಯೂ ಇರುವುವು. ಆದರೆ, ಈಗ ಅನೇಕವೇಳೆ ಸಂಭವಿಸುವಂತೆ, ಈ ಬಾಲಜೀವಗಳು, ಮೇಲಣ ಜಾತಿಗಳಲ್ಲಿಯಾಗಲಿ

ಉನ್ನತಸಪದವಿಯಲ್ಲಿರುವ. ಜನರಲ್ಲಿಯಾಗಲಿ ಹುಟ್ಟಿದರೆ, ದೊಡ್ಡ ದೊಡ್ಡ ಕೆಲಸಗಳನ್ನು ನಿರ್ವಹಿಸುವುದಕ್ಕೂ ಘನತರಗಳಾದ ಅಧಿಕಾರಭಾರಗಳನ್ನು ವಹಿಸುವುದಕ್ಕೂ ಯೋಗ್ಯತೆಯಿಲ್ಲದೆ, ಇತರರಿಗೆ ಬಹಳ ಕೇಡನ್ನುಂಟು ಮಾಡುವುವು. ವೃದ್ಧಜೀವಗಳು ಕೀಳಾದ ಶರೀರಗಳಲ್ಲಿ ಹುಟ್ಟಿದರೂ ತಂಟೆಗಳುಂಟಾಗುವುವು ; ತಮ್ಮ ಸುತ್ತುಮುತ್ತಲೂ ಇರುವವರ ಮೇಲೆ ಕೋಪಿಸಿಕೊಳ್ಳುವುವು, ಅತೃಪ್ತಿಯಿಂದ ತುಂಟಾಟಗಳನ್ನು ಮಾಡುವುವು, ಎದುರುಬೀಳುವುವು. ನಿಜವಾದ ಪ್ರವರ್ಧನಕ್ಕೆ ಬಂದ ಉತ್ತಮ ಜೀವಾತ್ಮವಾಗಿದ್ದರೆ ಯಾವ ಶರೀರದಲ್ಲಿ ಜನ್ಮವನ್ನೆತ್ತಿದರೂ ತೃಪ್ತಿಯಿಂದಿರುವುದು ; ಆದರೆ ಮಧ್ಯಮಜೀವಾತ್ಮಗಳಾಗಿದ್ದರೆ, ತಮ್ಮ ಇಷ್ಟದಂತೆಯಿಲ್ಲದ ಪರಿವಾರದ ಮೇಲೆ ಸ್ವಾಭಾವಿಕವಾಗಿಯೇ ಕದನಕ್ಕೆ ನುಗ್ಗುವುವು ; ಮತ್ತು ಈಶ್ವರನು ಈ ಜೀವಗಳ ಸಡಗರವನ್ನು ಬಳವಳಿಗೆಗಾಗಿ ಉಪಯೋಗಿಸಿ, ಅವಶ್ಯಕಗಳಾದ ಬದಲಾವಣೆಗಳನ್ನು ಹುಟ್ಟಿಸುವನು.

ದ್ವಿತೀಯ ಪ್ರಸ್ಥಾನವು ಜೀವಾತ್ಮನ ಯೌವನದ ಪೂರ್ವಾರ್ಧವನ್ನು ಬಳಕೊಳ್ಳುವುದು. ಈ ಯೌವನದ ಪೂರ್ವಾರ್ಧದಲ್ಲಿ ಜೀವಾತ್ಮನು ಧನವನ್ನು ಆರ್ಜಿಸುವುದಕ್ಕೂ, ಅದನ್ನು ಅನುಭವಿಸುವುದಕ್ಕೂ ಉಪಯೋಗಿಸುವುದಕ್ಕೂ, ಕೆಲಸಗಾರರನ್ನು ಸೇರಿಸಿಕೊಂಡು ಅವರಿಂದ ಕೆಲಸವನ್ನು ಮಾಡಿಸುವುದಕ್ಕೂ, ದೊಡ್ಡದೊಡ್ಡ ಅಧಿಕಾರಭಾರಗಳನ್ನು ವಹಿಸುವುದಕ್ಕೂ, ಕೂಡಿಟ್ಟ ಆಸ್ತಿಗಳನ್ನು ಸದ್ವಿನಿಯೋಗಮಾಡುವುದಕ್ಕೂ, ಯೋಗ್ಯತೆಯನ್ನು ಪಡೆಯುವನು. ಈ ಅಂತಸ್ತಿನಲ್ಲಿ ವಾಣಿಜ್ಯವೃತ್ತಿಯವರು, ದೊಡ್ಡದೊಡ್ಡ ವರ್ತಕರು, ದೊಡ್ಡದೊಡ್ಡ ಕೆಲಸಗಳನ್ನು ಮಾಡಿಸುವವರು, ಬಂಡವಾಳದವರು, ಸಾಹುಕಾರರು, ದೊಡ್ಡದೊಡ್ಡ ಕಾರ್ಖಾನೆಗಳನ್ನಿಟ್ಟಿರುವವರು ಸೇರುತ್ತಾರೆ. ಸನಾತನಧರ್ಮಕ್ಕನುಸಾರವಾಗಿ ಜಾತಿವಿವೇಚನೆಯು ಏರ್ಪಾಡಾದಕಾಲದಲ್ಲಿ ಈ ಜಾತಿಯ ಜೀವಾತ್ಮಗಳು ವೈಶ್ಯರಾಗಿ ಹುಟ್ಟಿದರು. ಆತ್ಮಸುಖವನ್ನು ಬಯಸುವುದಕ್ಕೆ ಬದಲಾಗಿ ಲೋಕಸುಖವನ್ನೂ ಸರ್ವಭೂತಹಿತವನ್ನೂ ಬಯಸಬೇಕೆಂದು ಕ್ರಮಕ್ರಮವಾಗಿ ಶಿಕ್ಷಿತರಾದರು.

ತೃತೀಯಪ್ರಸ್ಥಾನವು ಜೀವಾತ್ಮನ ಯೌವನದ ಉತ್ತರಾರ್ಧವನ್ನು ಬಳಕೊಳ್ಳುತ್ತದೆ. ಈ ಉತ್ತರಾರ್ಧದಲ್ಲಿ ಜೀವಾತ್ಮನ ಅಧಿಕಾರಭಾರ

ಗಳೂ ಸಾಮರ್ಥ್ಯಗಳೂ ಹೆಚ್ಚಿ, ದೊಡ್ಡದೊಡ್ಡ ಜನಾಂಗದಮೇಲೆ ಅಧಿಕಾರವನ್ನು ನಡೆಯಿಸಿ, ಶಾಸನಗಳನ್ನು ಮಾಡಿ, ರಾಜ್ಯವನ್ನಾಳಿ, ತನ್ನ ಪದವಿಯನ್ನು ಹೆಚ್ಚಿಸಿಕೊಳ್ಳುವುದಕ್ಕೆ ಆಶೆಪಡದೆ, ಪ್ರಜಾರಕ್ಷಣೆಗೂ ಕಾರ್ಯನಿರ್ವಾಹಕ್ಕೂ ತನ್ನ ಅಧಿಕಾರವನ್ನು ಉಪಯೋಗಿಸುತ್ತಾ, ಸ್ವಾರ್ಥತ್ಯಾಗವನ್ನು ಮಾಡಿ, ರಾಜ್ಯದ ಏಳಿಗೆಗಾಗಿ ಕೆಲಸಮಾಡುವವನಾಗುತ್ತಾನೆ. ಈ ಜಾತಿಯು ಭೂಪತಿಗಳನ್ನೂ, ನ್ಯಾಯಾಧಿಪತಿಗಳನ್ನೂ, ಧರ್ಮಶಾಸನಕಾರರನ್ನೂ, ವೀರರನ್ನೂ, ಕ್ರಮಸ್ಥಿತಿಯಲ್ಲಿ ರಾಜ್ಯವನ್ನಿಡುವುದಕ್ಕಾಗಿ ಪ್ರಯಾಸಪಡುವ ಸಕಲರನ್ನೂ ಒಳಕೊಳ್ಳುವುದು. ಸನಾತನ ಧರ್ಮಕ್ಕನುಸಾರವಾಗಿ ಜಾತಿವಿವೇಚನೆಯು ಏರ್ಪಟ್ಟ ಕಾಲದಲ್ಲಿ ಪ್ರವರ್ಧಮಾನದಶೆಯನ್ನೈದಿದ್ದ ಈಬಗೆಯ ಜೀವಾತ್ಮಗಳು ಕ್ಷತ್ರಿಯಜಾತಿಯವರಾಗಿ ಹುಟ್ಟಿ, ರಾಜ್ಯಭಾರವನ್ನು ವಹಿಸಿ ರಾಜ್ಯರಕ್ಷಣಾರ್ಥವಾಗಿ ಯುದ್ಧಗಳನ್ನು ಮಾಡಿದರು.

ಚತುರ್ಥಪ್ರಸ್ಥಾನವು ಜೀವಾತ್ಮನ ಶಾಂತಿಪರಿಪೂರಿತವಾದ ವಾರ್ಧಕವನ್ನು ಅವಲಂಬಿಸಿರುತ್ತದೆ. ಈ ವಾರ್ಧಿಕದ ಅಂತಸ್ತಿನಲ್ಲಿ, ಐಹಿಕವಿಷಯಗಳಲ್ಲಿ ವ್ಯಾಮೋಹ ತಪ್ಪಿ, ಜೀವಾತ್ಮನು ತನಗಿಂತಲೂ ಚಿಕ್ಕವರಾಗಿರುವವರಿಗೆಲ್ಲಾ ಸಹಾಯಕನಾಗಿಯೂ ಸನ್ಮಿತ್ರನಾಗಿಯೂ ಹಿತವಾದಿಯಾಗಿಯೂ ಇರುವಂತೆ ಆಗುವನು. ಈ ಅಂತಸ್ತಿನಲ್ಲಿ ಪುರೋಹಿತರೂ ಮಂತ್ರಿಗಳೂ ಎಲ್ಲಾ ಬಗೆಯ ಗುರುಗಳೂ—ಗ್ರಂಥಕಾರರು, ಶಾಸ್ತ್ರಜ್ಞರು, ಕವಿಗಳು, ತತ್ವಜ್ಞಾನಿಗಳೂ—ಸೇರುವರು. ಸನಾತನ ಧರ್ಮಕ್ಕನುಸಾರವಾಗಿ ಜಾತಿವಿವೇಚನೆಯು ಏರ್ಪಟ್ಟಕಾಲದಲ್ಲಿ ಈ ಅಂತಸ್ತಿನ ಜೀವಾತ್ಮಗಳು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದರು. ಹೆಚ್ಚಾಗಿ ಕೊಟ್ಟು ಕೊಂಚವಾಗಿ ಕೊಳ್ಳುತ್ತಾ, ಸ್ವಾರ್ಥಪರರಲ್ಲದವರಾಗಿಯೂ ಜ್ಞಾನಿಗಳಾಗಿಯೂ ಬ್ರಾಹ್ಮಣರಿದ್ದರು. ಇಂಡಿಯಾದೇಶದಲ್ಲಿ ಆಗಿರುವ ವರ್ಣಸಂಕರವು ಬ್ರಾಹ್ಮಣಜಾತಿಯನ್ನು ಬಹುಕಠಿಣವಾಗಿ ತಾಡಿಸಿರುತ್ತದೆ ; ಹೇಗೆಂದರೆ, ಕೀಳುಜಾತಿಯವರ ಪದಚ್ಯುತಿಗಿಂತ ಮೇಲುಜಾತಿಯವರ ಪದಚ್ಯುತಿಯು ಸರ್ವಥಾ ಹಾನಿಕರವಾಗಿರುವುದು. ಬ್ರಾಹ್ಮಣ ಶರೀರಗತವಾಗಿರುವ ಶೂದ್ರ ಜೀವಾತ್ಮವು ಸನಾತನಧರ್ಮದ ಮಹಾಶತ್ರುವಾಗಿದೆ.

ಬಂದೊಂದೂ ಜಾತಿಯು ಜನರೂ ಇತರ ಜಾತಿಯವರ ಉದ್ಯೋಗಗಳನ್ನು ಆಕ್ರಮಿಸಿಕೊಂಡಿರುವುದರಿಂದಲೂ, ತನ್ನ ಜಾತಿಯು ಕರ್ತವ್ಯ ಚಿಂತೆಯನ್ನು ಬಿಟ್ಟು, ತನ್ನ ಜಾತಿಗಿರುವ ಬಾಧ್ಯತೆಗಳಿಗಾಗಿ ಬಡಿದಾಡುವುದರಿಂದಲೂ ಈಗಿನ ಕೆಡಕಿನ ಬಹುಭಾಗವು ಉದ್ಭವಿಸಿರುತ್ತದೆ. ಬ್ರಾಹ್ಮಣರೂ ಕ್ಷತ್ರಿಯರೂ ತಮತಮಗೆ ಬರಬೇಕಾದ ಕಟ್ಟಳೆಗಳಿಗಾಗಿ ಶ್ರದ್ಧಾಭಕ್ತಿಪೂರ್ವಕವಾಗಿ ಗುದ್ದಾಡಿರುವರು, ಮತ್ತು ತಂತಮ್ಮ ಜಾತಿಗೆ ಬಂದಿರುವ ಘನತರ ಭಾರಗಳನ್ನು ಹೊರದೆ ಹಿಂದೆಗೆದಿರುವರು. ಕೆಲಸವನ್ನು ಮಾಡದೆ ಕೂಲಿಗಾಗಿ ಹೊಡೆದಾಡುತ್ತಿರುವ ಈ ಬಗೆಯ ವರ್ತನವು ವಿದ್ವೇಷವನ್ನು ಹುಟ್ಟಿಸಿರುವುದು ಸಹಜವಾಗಿಯೇ ಇರುತ್ತದೆ. ಪರಸ್ಪರ ಸಹಾಯವೂ ಅನ್ಯೋನ್ಯ ಭಾವವೂ ಹೋಗಿ, ಪರಸ್ಪರಗಳಾದ ವಿದ್ವೇಷಗಳು ಬಂದಿರುವುವು. ಹೀಗಾಗಿರುವುದರಿಂದ, ಸರ್ವರ ಸುಖಕ್ಕೂ ಹೇತುವಾಗಿರಬೇಕಾದ ಜಾತಿವಿವೇಚನೆಯು, ವರ್ಣಸಂಕರದ ಪ್ರಭಾವದಿಂದ, ಸರ್ವದುಃಖಕೆ ಹೇತುವಾಗಿ ಪರಿಣಮಿಸುತ್ತಿದೆ.

ಬಹು ಶೋಚನೀಯವಾದೀ ಸ್ಥಿತಿಯನ್ನು ಸರಿಮಾಡುವುದಕ್ಕಾಗಿ ಪ್ರತಿಬಾಲನೂ ತನಗೆ ಸಾಧ್ಯವಾಗಿರುವ ಇಷ್ಟನ್ನಾದರೂ ಮಾಡಬಹುದಾಗಿದೆ. ತನ್ನತನ್ನ ಜಾತಿಗೆ ವಿಧಾಯಕವಾಗಿರುವ ಧರ್ಮಗಳನ್ನು ನಿರಾಲಸ್ಯದಿಂದ ಆಚರಿಸುತ್ತಾ, ಗರ್ವವನ್ನೂ ಡಂಭವನ್ನೂ ಬಾಧ್ಯತೆಗಳಿಗಾಗಿ ಹೊಡೆದಾಡುವುದನ್ನೂ ಬಿಡಬಹುದಾಗಿದೆ. ಶೂದ್ರನು ಕಾರ್ಯನಿರತನಾಗಿಯೂ ಸ್ವಾಮಿ ಭಕ್ತಿಯುಳ್ಳವನಾಗಿಯೂ ದಾಸಭಾವವುಳ್ಳವನಾಗಿಯೂ ವರ್ತಿಸಲಿ; ವೈಶ್ಯನು ಆಲಸ್ಯವಿಲ್ಲದವನಾಗಿಯೂ, ವಿವೇಕವುಳ್ಳವನಾಗಿಯೂ, ದಾನಶೀಲನಾಗಿಯೂ ವರ್ತಿಸುವನಾಗಲಿ; ಕ್ಷತ್ರಿಯನು ಧೀರನೆಂತಲೂ ದಾತೃವೆಂತಲೂ ಶೂರನೆಂತಲೂ ಪ್ರಸಿದ್ಧಿಯನ್ನು ಪಡೆಯುವನಾಗಲಿ; ಬ್ರಾಹ್ಮಣನು ತಾಳ್ಮೆಯುಳ್ಳವನೆಂತಲೂ ಪರಿಶುದ್ಧಾತ್ಮನೆಂತಲೂ ಪಂಡಿತನೆಂತಲೂ ಸತ್ಯಸಂಧನೆಂತಲೂ ಸ್ವಾರ್ಥತ್ಯಾಗಿಯೆಂತಲೂ ಪ್ರಸಿದ್ಧನಾಗಿ ಬಾಳಲಿ. ಬೇರೆಬೇರೆ ಜಾತಿಯವರು ತಂತಮ್ಮ ಜಾತಿಧರ್ಮಗಳನ್ನೇ ಆಚರಿಸುತ್ತಾ ಬಂದರೆ, ವರ್ಣಸಂಕರದಿಂದಾಗಿರುವ ಮಹಾಕೆಡಕುಗಳು ಕಾಲಕ್ರಮದಲ್ಲಿ ಸಮೆದು ಸಮೆದು ಪರಿಹಾರವಾಗಬಹುದಾಗಿದೆ.

## ಶ್ರುತ್ಯಾದಿ ವಚನಗಳು.

ಬ್ರಾಹ್ಮಣೋಽಸ್ಯಮುಖಮಾಸೀ ದ್ಬಾಹೂರಾಜನ್ಯಃಕೃತಃ |
ಊರೂತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ||

(ಋಗ್ವೇದ, X. xc. 12).

"ಬ್ರಾಹ್ಮಣನು ಬ್ರಹ್ಮನ ಬಾಯಿಯಾದನು, ಕ್ಷತ್ರಿಯನು ಎರಡು ಬಾಹುಗಳಾದನು ; ವೈಶ್ಯನು ಎರಡು ತೊಡೆಗಳಾದನು; ಶೂದ್ರನು ಪಾದದ್ವಯಗಳಿಂದ ಹುಟ್ಟಿದವನಾದನು."

ಸರ್ವಸ್ಯಾಸ್ಯತು ಸರ್ಗಸ್ಯ ಗುಪ್ತ್ಯರ್ಥಂ ಸಮಹಾದ್ಯುತಿಃ |
ಮುಖಬಾಹೂರುಪಜ್ಜಾನಾಂ ಪೃಥಕ್ಕರ್ಮಾಣ್ಯಕಲ್ಪಯತ್ ||
ಅಧ್ಯಾಪನಮಧ್ಯಯನಂ ಯಜನಂ ಯಾಜನಂ ತಥಾ |
ದಾನಂ ಪ್ರತಿಗ್ರಹಂ ಚೈವ ಬ್ರಾಹ್ಮಣಾನಾಮಕಲ್ಪಯತ್ ||
ಪ್ರಜಾನಾಂ ರಕ್ಷಣಂ ದಾನಮಿಜ್ಯಾಧ್ಯಯನಮೇವಚ |
ವಿಷಯೇಷ್ವಪ್ರಸಕ್ತಿಂಚ ಕ್ಷತ್ರಿಯಸ್ಯ ಸಮಾದಿಶತ್ ||
ಪಶೂನಾಂ ರಕ್ಷಣಂ ದಾನಮಿಜ್ಯಾಧ್ಯಯನಮೇವಚ |
ವಣಿಕ್ಪಥಂ ಕುಸೀದಂಚ ವೈಶ್ಯಸ್ಯ ಕೃಷಿಮೇವಚ ||
ಏಕಮೇವತು ಶೂದ್ರಸ್ಯ ಪ್ರಭುಃ ಕರ್ಮಸಮಾದಿಶತ್ |
ಏತೇಷಾಮೇವ ವರ್ಣಾನಾಂ ಶುಶ್ರೂಷಾಮನಸೂಯಯಾ ||

(ಮನುಸ್ಮೃತಿ. ಅ. ೧, ಶ್ಲೋ. ೮೭-೯೧).

"ಮಹಾದ್ಯುತಿಯಿಂದ ಕೂಡಿದವನಾದ ಅವನು ತನ್ನ ಬಾಯಿಂದ ಬಾಹುಗಳಿಂದ, ತೊಡೆಗಳಿಂದ, ಹೆಜ್ಜೆಗಳಿಂದ ಹುಟ್ಟಿದವರಿಗೆ ಸರ್ವಸರ್ಗರಕ್ಷಣಾರ್ಥವಾಗಿ ಬೇರೆ ಬೇರೆ ಕರ್ಮಗಳನ್ನು ಕಲ್ಪಿಸಿದನು.

"ಅಧ್ಯಾಪನಾಧ್ಯಯನಗಳನ್ನೂ ಯಜನ ಯಾಜನಗಳನ್ನೂ ದಾನ ಪ್ರತಿಗ್ರಹಗಳನ್ನೂ ಬ್ರಾಹ್ಮಣರಿಗೆ ಅವನು ಕಲ್ಪಿಸಿದನು.

"ಪ್ರಜಾರಕ್ಷಣವನ್ನೂ ದಾನವನ್ನೂ ಯಜ್ಞವನ್ನೂ ಅಧ್ಯಯನವನ್ನೂ ವಿಷಯಗಳ ಮಧ್ಯದಲ್ಲಿದ್ದರೂ ಅಸಕ್ತರಾಗಿರುವುದನ್ನೂ ಕ್ಷತ್ರಿಯರಿಗೆ ನಿಯಮಿಸಿದನು.

"ಪಶುರಕ್ಷಣವನ್ನೂ ದಾನವನ್ನೂ ಯಜ್ಞವನ್ನೂ ಅಧ್ಯಯನವನ್ನೂ ವಾಣಿಜ್ಯವನ್ನೂ ಕುಸೀದವನ್ನೂ (banking) ಕೃಷಿಯನ್ನೂ ವೈಶ್ಯನಿಗೆ ವಿಧಿಸಿದನು.

"ಶೂದ್ರರಿಗೆ ಒಂದೇ ಒಂದು ಕರ್ಮವನ್ನು ಭಗವಂತನು ವಿಧಿಸಿದನು ; ಉಳಿದ ವರ್ಣಗಳ ಶುಶ್ರೂಷೆಗಳನ್ನು ಅಸೂಯೆಯಿಲ್ಲದೆ ಮಾಡುವುದೇ ಅವರ ಕರ್ಮ."

ಯಸ್ಯ ಯಲ್ಲಕ್ಷಣಂ ಪ್ರೋಕ್ತಂ ಪುಂಸೋವರ್ಣಾಭಿವ್ಯಂಜಕಂ |
ಯದನ್ಯತ್ರಾಪಿ ದೃಶ್ಯೇತ ತತ್ತೇನೈವ ವಿನಿರ್ದಿಶೇತ್ ||
(ಶ್ರೀಮದ್ಭಾಗವತ, ಸ್ಕಂದ ೭, ಅ. ೯, ಶ್ಲೋಕ ೩೫).

"ಮಾನವನ ವರ್ಣವನ್ನು ಗೊತ್ತುಮಾಡುವುದಕ್ಕಾಗಿ ಯಾರಯಾರಿಗೆ ಯಾವ ಯಾವ ಲಕ್ಷಣಗಳನ್ನು ಹೇಳಿದೆಯೋ, ಆಯಾ ಲಕ್ಷಣಗಳು ಅನ್ಯತ್ರ ಕಾಣಬಂದಲ್ಲಿ, ಲಕ್ಷಣಗಳಿಂದ ನಿರ್ದೇಶವಾಗುವ ವರ್ಣವನ್ನೇ ಹೇಳಬೇಕು." (ತಾಯಿತಂದೆಗಳ ಜಾತಿಯನ್ನು ಹೇಳಕೂಡದು).

ನಯೋನಿರ್ನಾಪಿ ಸಂಸ್ಕಾರೋ ನಶ್ರುತಂ ನಚಸಂತತಿಃ |
ಕಾರಣಾನಿ ದ್ವಿಜತ್ವಸ್ಯ ವೃತ್ತಮೇವತು ಕಾರಣಂ ||
(ಮಹಾಭಾರತ. ವನಪರ್ವ ಅ. ೩೧೩, ಶ್ಲೋಕ ೧೦೮).

"ಹುಟ್ಟು, ಸಂಸ್ಕಾರಗಳೂ, ವೇದಾಧ್ಯಯನವೂ, ಸಂತತಿಯೂ ದ್ವಿಜತ್ವಕ್ಕೆ ಕಾರಣಗಳಾಗುವುದಿಲ್ಲ ; ವೃತ್ತವೊಂದೇ (ನಡತೆ) ಸತ್ಯವಾಗಿಯೂ ಕಾರಣವೆನಿಸಿಕೊಂಡಿರುವುದು."

ಸತ್ಯಂ ದಾನಂ ಕ್ಷಮಾ ಶೀಲ ಮಾನೃಶಂ ಸ್ಯಂ ತಪೋಘೃಣಾ |
ದೃಶ್ಯಂತೇ ಯತ್ರ ನಾಗೇಂದ್ರ ಸ ಬ್ರಾಹ್ಮಣ ಇತಿಸ್ಮೃತಃ ||
ಶೂದ್ರೇತು ಯದ್ಭವೇಲ್ಲಕ್ಷ್ಯಂ ದ್ವಿಜೇತಚ್ಚ ನವಿದ್ಯತೇ |
ನೈವಶೂದ್ರೋ ಭವೇಚ್ಛೂದ್ರೋ ಬ್ರಾಹ್ಮಣೋನಚ ಬ್ರಾಹ್ಮಣಃ ||
ಯತ್ರೈತಲ್ಲಕ್ಷ್ಯತೇ ಸರ್ಪ ವೃತ್ತಂ ಸ ಬ್ರಾಹ್ಮಣಃಸ್ಮೃತಃ |
ಯತ್ರೈತದ್ಭವೇತ್ಸರ್ಪ ತಂ ಶೂದ್ರಮಿತಿ ನಿರ್ದಿಶೇತ್ ||
(ಮಹಾಭಾರತ. ವನಪರ್ವ ಅ. ೧೮೦, ಶ್ಲೋ. ೨೧, ೨೫, ೨೬).

"ಸತ್ಯ, ದಾನ, ಕ್ಷಮೆ, ಶೀಲ, ಅನೃಶಂಸ್ಯ(gentleness), ತಪಸ್ಸು, ಘೃಣೆ (mercy)—ಇವು ಯಾವನಲ್ಲಿ ಕಾಣಬರುವುವೊ, ಎಲೈ ನಾಗೇಂದ್ರನೆ, ಅವನೇ ಬ್ರಾಹ್ಮಣನು.

"ಈ ಲಕ್ಷಣಗಳು ಶೂದ್ರನಲ್ಲಿ ಕಾಣಬಂದು, ದ್ವಿಜನಲ್ಲಿ ಕಾಣದೇ ಹೋದರೆ, ಶೂದ್ರ ಶೂದ್ರನಲ್ಲ, ಬ್ರಾಹ್ಮಣ ಬ್ರಾಹ್ಮಣನಲ್ಲ.

"ಈ ಬಗೆಯ ವೃತ್ತವು ಯಾವನಲ್ಲಿ ಕಾಣಬರುವುದೋ, ಎಲೈ ಸರ್ಪನೇ, ಅವನೇ ಬ್ರಾಹ್ಮಣನೆನಿಸಿಕೊಳ್ಳುವನು ; ಈ ಬಗೆಯ ವೃತ್ತವೇ ಯಾವನಲ್ಲಿ ಕಾಣುವುದಿಲ್ಲವೋ, ಎಲೈ ಸರ್ಪನೇ, ಅವನೇ ಶೂದ್ರನೆನಿಸಿಕೊಳ್ಳುವನು."

ಆಚಾರಹೀನಂನಪುನಂತಿವೇದಾ ಯದ್ಯಪ್ಯಧೀತಾಸ್ಸಹಷಡ್ಭಿರಂಗೈಃ |
ಛಂದಾಂಸ್ಯೇನಂಮೃತ್ಯುಕಾಲೇತ್ಯಜಂತಿ ನೀಡಂಶಕುಂತಾಇವಜಾತಪಕ್ಷಾಃ ||
ಆಚಾರಹೀನಸ್ಯತುಬ್ರಾಹ್ಮಣಸ್ಯ ವೇದಾಃಷಡಂಗಾಸ್ತ್ವಖಿಲಾಸ್ಸಯಜ್ಞಾಃ |
ಕಾಂಪ್ರೀತಿಮುತ್ಪಾದಯಿತುಂಸಮರ್ಥಾ ಅಂಧಸ್ಯದಾರಾ ಇವದರ್ಶನೀಯಾಃ ||

(ವಾಸಿಷ್ಠಸ್ಮೃತಿ. ಅ. ೬, ಶ್ಲೋ. ೩, ೪).

"ಷಡಂಗಸಹಿತವಾಗಿ ವೇದಗಳನ್ನು ಪಠಿಸಿದ್ದರೂಕೂಡ, ಆಚಾರಹೀನನಾಗಿದ್ದಲ್ಲಿ, ವೇದಗಳು ಮಾನವನನ್ನು ಪುನೀತನನ್ನಾಗಿ ಮಾಡುವುದಿಲ್ಲ. ರಕ್ಕೆ ಬೆಳೆದ ಪಕ್ಷಿಗಳು ಗೂಡನ್ನು ತ್ಯಜಿಸುವ ತೆರದಲ್ಲಿ ಛಂದಸ್ಸುಗಳು ಮರಣಕಾಲದಲ್ಲಿ ಅಂತಹ ಮಾನವನನ್ನು ತ್ಯಜಿಸುವುವು.

"ಆಚಾರಹೀನನಾದ ಬ್ರಾಹ್ಮಣನಿಗೆ ವೇದಗಳು ಒಟ್ಟುಗೂಡಿದ್ದರೂ ಷಡಂಗಗಳಿಂದಲೂ ಸಕಲ ಯಜ್ಞಗಳಿಂದಲೂ ಕೂಡಿದ್ದರೂ ಕೂಡ, ಮನೋಹಾರಿಣಿಯಾದ ಪತ್ನಿಯು ಅಂಧನಾದ ಪತಿಗೆ ತರುವ ಪ್ರೀತಿಗಿಂತ ಹೆಚ್ಚಾದ ಪ್ರೀತಿಯನ್ನು ತರಲಾರದುವುಗಳಾಗಿರುತ್ತವೆ."



ಇದು ಸನಾತನ ಧರ್ಮದೀಪಿಕೆಯಲ್ಲಿ ಕರ್ಮಪ್ರಕಾಶಿಕೆಯೆಂಬ
ದ್ವಿತೀಯ ಭಾಗದಲ್ಲಿ ವರ್ಣಚತುಷ್ಟಯವಿವರಣೆಯೆಂಬ
ಷಷ್ಠಮಾಧ್ಯಾಯವು.

|| ದ್ವಿತೀಯಭಾಗಂ ಸಮಾಪ್ತಂ ||





# ತೃತೀಯ ಭಾಗ.

## ನೀತಿಪ್ರಕಾಶಿಕೆ. ಪ್ರಥಮಾಧ್ಯಾಯ.

*:*:*

## ನೀತಿಶಾಸ್ತ್ರ ವಿಚಾರ.

---



ಪರಸ್ಪರಾನುಬಂಧವುಳ್ಳ ಸಂಗತಿಗಳನ್ನು ಕ್ರಮವರಿತು ವಿಂಗಡಿಸಿ ವಿಚಾರಮಾಡುವುದೇ ಶಾಸ್ತ್ರವೆನಿಸಿಕೊಳ್ಳುತ್ತದೆ. ಸಂಗತಿಗಳನ್ನು ಒಟ್ಟುಗೂಡಿದ ಮಾತ್ರಕ್ಕೆ ಶಾಸ್ತ್ರವಾಗುವುದಿಲ್ಲ. ಪರಸ್ಪರವಿರುವ ಸಂಬಂಧಗಳು ವಿಶದವಾಗುವಂತೆ ಸಂಗತಿಗಳನ್ನು ಕ್ರಮಾನುಸಾರವಾಗಿ ವಿಂಗಡಿಸಿ ಆ ಸಂಬಂಧಗಳ ನಿಯಮಗಳನ್ನು ತಿಳಿದಹೊರತು ಶಾಸ್ತ್ರವಾಗುವುದಿಲ್ಲ. ನೀತಿಯೆಂಬುದು ನಮ್ಮ ನಡತೆಗೆ ಸಂಬಂಧಪಟ್ಟದೆ; ಬುದ್ಧಿಯುಳ್ಳವರು ತಂತಮ್ಮೊಳಗೂ ಇತರ ಭೂತಸಮುದಾಯಗಳಿಗೂ ಹೇಗೆ ನಡೆದುಕೊಳ್ಳಬೇಕೋ ಆ ರೀತಿಗೆ ನೀತಿಯೆಂಬುದು ಸಂಬಂಧಪಟ್ಟಿರುವುದು. ನೀತಿಶಾಸ್ತ್ರವೆಂದು ನಾವು ಮಾತನಾಡುವಾಗ, ಸದ್ಗುಣ ದುರ್ಗುಣಗಳ ಪಟ್ಟಿಯದೊಂದೆಂದು ನಮ್ಮ ಅರ್ಥವಲ್ಲ; ನಡತೆಗೆ ಸಂಬಂಧಪಡುವ ಅನೇಕ ಸಂಗತಿಗಳನ್ನು ಅದೊಂದುಕ್ರಮದಿಂದ ವಿಂಗಡಿಸಿ, ಆ ಸಂಗತಿಗಳಲ್ಲಿರುವ ಪರಸ್ಪರ ಸಂಬಂಧಗಳನ್ನೂ, ಆ ಸಂಬಂಧಗಳ ರೀತಿಯನ್ನೂ ಸ್ಪಷ್ಟಪಡಿಸುವುದೇ ನೀತಿಶಾಸ್ತ್ರವೆನಿಸಿಕೊಂಡಿದೆ.

ನೀತಿಯೆಂಬುದಕ್ಕೆ ಸದ್ಧರ್ಮ ಸದಾಚಾರವೆಂಬುವು ಪರ್ಯಾಯಪದಗಳು. ಸದ್ಧರ್ಮವನ್ನು ತಿಳಿವುದಕ್ಕೆ, ನಾವು ಮನುಷ್ಯನ ವಿಷಯವಾಗಿಯೂ ಅವನನ್ನು ಆವರಿಸಿರುವ ಭೂತಸಮುದಾಯಗಳ ವಿಷಯವಾಗಿಯೂ ಕೆಲವು ಸಂಗತಿಗಳನ್ನು ತಿಳಿಯುವುದು ಅವಶ್ಯಕವಾಗಿದೆ.

ಸಮಸ್ತ ಭೂತಗಳ ಕ್ಷೇಮವನ್ನೂ ಭದ್ರಪಡಿಸುವುದೇ ಸದ್ಧರ್ಮದ ಉದ್ದೇಶ. ಮನುಷ್ಯರು ತಂತಮ್ಮೊಳಗೆ ಅನ್ಯೋನ್ಯಭಾವದಿಂದಿರುವುದಲ್ಲದೆ ತಮ್ಮನ್ನಾವರಿಸಿರುವ ಭೂತಸಮುದಾಯಗಳಿಗೂ ಅನುಕೂಲರಾಗಿರುವ ರೀತಿಯನ್ನು ನೀತಿಶಾಸ್ತ್ರದ ಮೂಲಕವಾಗಿ ತಿಳಿಸುವುದರಿಂದ ಈ ಉದ್ದೇಶವು ಕೈಸೇರುವುದು. ಈಶ್ವರನು ಪರಮಪ್ರೇಮ ಸ್ವರೂಪನು, ತನ್ನ ಜಗತ್ತಿನ ಬಳಿವಳಿಗೆಯನ್ನೇ ಬಯಸುತ್ತಾನೆ, ಕ್ರಮಕ್ರಮವಾಗಿ ಸರ್ವಲೋಕಕ್ಕೂ ಕ್ಷೇಮವನ್ನು ತರುತ್ತಿದಾನೆ. ಹೀಗೆಂದಮಾತ್ರಕ್ಕೆ ಋತವೆನಿಸಿಕೊಂಡುದೆಲ್ಲಾ (right) ಸರ್ವದಾ ಸುಖಕರವಾಗಿರುವುದೆಂತಲೂ, ಅನೃತವು (wrong) ಸರ್ವದಾ ಅಸುಖಕರವಾಗಿರುವುದೆಂತಲೂ ಅರ್ಥವಲ್ಲ. ಯಾವ ಆಚಾರವು ಉತ್ತರತ್ರದಲ್ಲಿ ಶಾಶ್ವತ ಸುಖಕ್ಕೆ, ಈಶ್ವರ ಸಾಯುಜ್ಯದ ಪರಮಾನಂದಕ್ಕೆ, ಮೋಕ್ಷಕ್ಕೆ, ಕರೆದೊಯ್ಯುವುದೊ ಅದೇ ಋತವೆನಿಸಿಕೊಳ್ಳುವುದು. "ಎತ್ತನ್ನು ಬಂಡಿಯ ಚಕ್ರಗಳು ಹೇಗೆ ಅನುಸರಿಸುವುವೋ, ಹಾಗೆಯೇ ಯಾತನೆಯು ಪಾಪಕರ್ಮವನ್ನು ಅನುಸರಿಸುವುದು." ಮತ್ತು ಹಾಗೆಯೇ ಆನಂದವು ಪುಣ್ಯಕರ್ಮವನ್ನು ಅನುಸರಿಸುವುದು. ಪಾಪಕರ್ಮವೆಂಬ ಹಣ್ಣು, ತಿನ್ನುವಾಗ ಅಮೃತವಾಗಿ ಕಾಣಬಂದರೂ, ವಿಷವಾಗಿಯೇ ಪರಿಣಮಿಸುತ್ತದೆ; ಉತ್ತರತ್ರದಲ್ಲಿ ಮಹಾವ್ಯಥೆಯನ್ನು ತರುತ್ತದೆ, ಮತ್ತು ಕೆಲವು ಸಂದರ್ಭಗಳಲ್ಲಿ ದೀರ್ಘವ್ಯಾಧಿಯನ್ನೂ ತರುವುದು. ಸಾಯಂಕಾಲದಹೊತ್ತಿಗೆ ವ್ಯಥೆಯಿಂದ ಹೊರಳಾಡುವಂತೆ ಮಾಡುವುದಾದರೂ ಪರಮಸುಂದರಗಳಾದ ಬಣ್ಣಗಳಿಂದೊಡಗೂಡಿ ಮಧುರವಾಗಿ ತೋರುವ ವಿಷಮಯವಾದ ಹಣ್ಣನ್ನು ಕೊಯ್ದು ತಿನ್ನುವ ಜ್ಞಾನಶೂನ್ಯನಾದ ಬಾಲಕನಂತೆಯೇ, ತಾತ್ಕಾಲಿಕ ಸುಖಕ್ಕಾಗಿ ಪಾಪಕರ್ಮವನ್ನೆಸಗುವ ಮಂದಮತಿಯಾದ ಮಾನವನೂ ಇರುವನು. ಪಡಿಯೊಂದು ಪಾಪಕರ್ಮವನ್ನೂ ವಿಷವೆಂದು ಗುರುತುಮಾಡಿ ತೋರಿಸುವುದು ನೀತಿಬೋಧಕನ ಕರ್ತವ್ಯವಾಗಿರುತ್ತದೆ.

ಸ್ಮೃತ್ಯಾದಿ ವಚನಗಳು.

ಆಚಾರಲಕ್ಷಣೋಧರ್ಮಃ ಸಂತಶ್ಚಾಚಾರಲಕ್ಷಣಾಃ ।
ಆಗಮಾನಾಂಹಿ ಸರ್ವೇಷಾಮಾಚಾರಃ ಶ್ರೇಷ್ಠ ಉಚ್ಯತೇ ॥

ಆಚಾರಪ್ರಭವೋಧರ್ಮೋ ಧರ್ಮಾದಾಯುರ್ವಿವರ್ಧತೇ ।
ಆಚಾರಾಲ್ಲಭತೇಹ್ಯಾಯು ರಾಚಾರಾಲ್ಲಭತೇಶ್ರಿಯಮ್ ॥
ಆಚಾರಾತ್ಕೀರ್ತಿಮಾಪ್ನೋತಿ ಪುರುಷಃ ಪ್ರೇತ್ಯಚೇಹಚ ॥
(ಮಹಾಭಾರತ. ಅನುಶಾಸನಪರ್ವ. ಅ. ೧೦೪).

"ಧರ್ಮಕ್ಕೆ ಲಕ್ಷಣ ಆಚಾರ, ಧರ್ಮಿಷ್ಟರ ಲಕ್ಷಣವೂ ಆಚಾರ, ಸಕಲಾಗಮಗಳಿಗಿಂತಲೂ ಆಚಾರವೇ ಶ್ರೇಷ್ಠವೆಂದು ಹೇಳಿಯಿದೆಯಲ್ಲವೆ ?

"ಆಚಾರದಿಂದ ಧರ್ಮವು ಹುಟ್ಟಿದೆ, ಮತ್ತು ಧರ್ಮದಿಂದ ಆಯು ವೃದ್ಧಿಯಾಗುವುದು. ಆಚಾರದಿಂದ ಮಾನವನಿಗೆ ಆಯುಸ್ಸು ಲಭಿಸುವುದು. ಆಚಾರದಿಂದ ಮಾನವನಿಗೆ ಶ್ರೀಯೂ ಲಭಿಸುತ್ತದೆ.

"ಆಚಾರದಿಂದ ಮಾನವನು ಇಹದಲ್ಲಿಯೂ ಪರದಲ್ಲಿಯೂ ಕೀರ್ತಿಯನ್ನು ಪಡೆವನು."

ಆಚಾರಃಪರಮೋಧರ್ಮಃ ಶ್ರುತ್ಯುಕ್ತಃ ಸ್ಮಾರ್ತಏವಚ ।
ತಸ್ಮಾದಸ್ಮಿನ್‌ಸದಾಯುಕ್ತೋ ನಿತ್ಯಂಸ್ಯಾದಾತ್ಮವಾನ್‌ದ್ವಿಜಃ ॥
ಏವಮಾಚಾರತೋದೃಷ್ಟ್ವಾ ಧರ್ಮಸ್ಯಮುನಯೋಗತಿಮ್ ।
ಸರ್ವಸ್ಯ ತಪಸೋಮೂಲಮಾಚಾರಂ ಜಗೃಹುಃಪರಮ್ ॥
(ಮನುಸ್ಮೃತಿ. ಅ. ೧. ಶ್ಲೋ. ೧೦೮, ೧೧೦).

"ಆಚಾರವೇ ಪರಮಧರ್ಮವೆಂದು ಶ್ರುತಿಸ್ಮೃತಿಗಳೆರಡೂ ಸಾರುವುವು. ಹೀಗಿರುವುದರಿಂದ ಆತ್ಮಜ್ಞಾನವುಳ್ಳ ದ್ವಿಜನು ಸರ್ವದಾ ಸದಾಚಾರನಿರತನಾಗಿಯೇ ಇರಲಿ.

"ಆಚಾರದಿಂದಲೇ ಧರ್ಮಮಾರ್ಗವು ಹೊರಡುವುದೆಂಬುದನ್ನು ತಿಳಿದವರಾಗಿ, ಆಚಾರವು ಸಕಲ ತಪಸ್ಸಿಗೂ ಮೂಲವೆಂದು ಭಾವಿಸಿ, ಅದನ್ನು ಮುನಿಗಳು ಸ್ವೀಕರಿಸುವರಾದರು."

ಪ್ರಭವಾರ್ಥಾಯ ಭೂತಾನಾಂ ಧರ್ಮಪ್ರವಚನಂ ಕೃತಮ್ ।
ಯಸ್ಸ್ಯಾತ್ಪ್ರಭವಸಂಯುಕ್ತಃ ಸಧರ್ಮಇತಿನಿಶ್ಚಯಃ ॥
ಧಾರಣಾದ್ಧರ್ಮಮಿತ್ಯಾಹುರ್ಧರ್ಮೇಣ ವಿಧೃತಾಃಪ್ರಜಾಃ ।
ಯಸ್ಸ್ಯಾದ್ಧಾರಣಸಂಯುಕ್ತಃ ಸಧರ್ಮ ಇತಿ ನಿಶ್ಚಯಃ ॥

ಅಹಿಂಸಾರ್ಥಾಯ ಭೂತಾನಾಂ ಧರ್ಮಪ್ರವಚನಂಕೃತಂ ।
ಯಸ್ಯಾದಹಿಂಸಯಾಯುಕ್ತಃ ಸಧರ್ಮಇತಿನಿಶ್ಚಯಃ ॥
ಸರ್ವೇಷಾಂ ಯಸ್ಸುಹೃನ್ನಿತ್ಯಂ ಸರ್ವೇಷಾಂ ಚ ಹಿತೇರತಃ।
ಕರ್ಮಣಾ ಮನಸಾ ವಾಚಾ ಸಧರ್ಮಂ ವೇದ ಜಾಜಲೇ ॥

(ಮಹಾಭಾರತ. ಶಾಂತಿಪರ್ವ. ಅ. ೧೯೦, ೯೯).

"ಸಕಲ ಭೂತಗಳ ಅಭ್ಯುದಯಕ್ಕಾಗಿ ಧರ್ಮವು ಪ್ರವಚನವಾಯಿತು. ಅವುದು ಅಂತಹ ಅಭ್ಯುದಯದಿಂದೊಡಗೂಡಿರುವುದೋ ಅದೇ ಧರ್ಮ. ಇದು ನಿಶ್ಚಯ.

"ಧಾರಣಮಾಡುವುದರಿಂದ ಇದಕ್ಕೆ ಧರ್ಮವೆಂದು ಹೆಸರು ಬಂದಿದೆ. ಪ್ರಜೆಗಳು ಧರ್ಮದಿಂದಲೇ ಧೃತರಾಗಿದ್ದಾರೆ. ಯಾವುದು ಧಾರಣದಿಂದೊಡಗೂಡಿರುವುದೋ ಅದು ಧರ್ಮ. ಇದು ನಿಶ್ಚಯ.

"ಭೂತಗಳಿಗೆ ಹಿಂಸೆಯುಂಟಾಗದಿರಲೆಂದು ಧರ್ಮವು ಪ್ರವಚನವಾಯಿತು. ಅವುದು ಅಹಿಂಸೆಯಿಂದೊಡಗೂಡಿರುವುದೋ ಅದು ಧರ್ಮ. ಇದು ನಿಶ್ಚಯ.

"ಯಾವನು ಸರ್ವ ಭೂತಗಳಿಗೂ ಮಿತ್ರನಾಗಿರುವನೋ, ಯಾವನು ಕರ್ಮದಲ್ಲಿಯೂ ಮನಸ್ಸಿನಲ್ಲಿಯೂ ಮಾತಿನಲ್ಲಿಯೂ ಸರ್ವ ಭೂತಗಳ ಹಿತವನ್ನೇ ಚಿಂತಿಸುವನೋ, ಅವನೇ ಧರ್ಮಜ್ಞನೈಯ್ಯಾ, ಜಾಜಲಿ."

ನಕುರ್ಯಾತ್ಕರ್ಹಿಚಿತ್ಸಂಗಂ ತಮಸ್ತೀವ್ರಂ ತಿತೀರಿಷುಃ ।
ಧರ್ಮಾರ್ಥ ಕಾಮಮೋಕ್ಷಾಣಾಂ ಯದತ್ಯಂತ ವಿಘಾತಕಂ ॥
ತತ್ರಾಪಿ ಮೋಕ್ಷಏವಾರ್ಥ ಅತ್ಯನ್ತಿಕತಯೇಷ್ಯತೇ ।
ತ್ರೈವರ್ಗ್ಯೋರ್ಥೋ ಯತೋ ನಿತ್ಯಂ ಕೃತಾನ್ತಭಯ ಸಂಯುತಃ ॥

(ವಿಷ್ಣುಭಾಗವತ. ಸ್ಕಂದ ೪, ಅ. ೨೨, ಶ್ಲೋ. ೩೪-೩೫).

"ಈ ತೀವ್ರವಾದ ತಮಸ್ಸನ್ನು ದಾಟಿ ಹೋಗಬೇಕೆಂದು ಯಾವನು ಬಯಸುವನೋ ಅವನು ಅತಿಯಾಗಿ ಯಾವ ಸಂಗವನ್ನೂ ಮಾಡದೇ ಇರಲಿ ; ಏಕೆಂದರೆ ಧರ್ಮ, ಅರ್ಥ, ಕಾಮ, ಮೋಕ್ಷ—ಇವೆಲ್ಲಕ್ಕೂ ಇದು ವಿಘಾತುಕವಾಗಿರುವುದು.

"ಈ ನಾಲ್ಕರಲ್ಲಿಯೂ ಮೋಕ್ಷವೇ ಕೊಟ್ಟಕೊನೆಯ ಪುರುಷಾರ್ಥವಾಗಿರುವುದು ; ಏಕೆಂದರೆ ಮೋಕ್ಷವನ್ನುಳಿದ ಮೂರೂ ಪುರುಷಾರ್ಥಗಳಿಗೂ ಕೃತಾಂತಭಯವು ಸರ್ವದಾ ಇದ್ದೇ ಇರುವುದು."

ಧರ್ಮಂಚಾರ್ಥಂಚ ಕಾಮಂಚ ಯಥಾವದ್ವದತಾಂ ವರ |
ವಿಭಜ್ಯಕಾಲೇ ಕಾಲಜ್ಞಃ ಸರ್ವಾನ್ ಸೇವೇತ ಪಣ್ಡಿತಃ ||
ಮೋಕ್ಷೋವಾ ಪರಮಂಶ್ರೇಯಏಷಾಂ ರಾಜನ್‌ಸುಖಾರ್ಥಿನಾಮ್ ||

(ಮಹಾಭಾರತ. ವನಪರ್ವ. ಅ. ೩೩, ಶ್ಲೋ. ೪೧-೪೨).

"ಎಲೈ ವಾಗ್ಮಿಶ್ರೇಷ್ಠನೇ, ಕಾಲಜ್ಞನಾದ ಪಂಡಿತನು, ಧರ್ಮಾರ್ಥಕಾಮಗಳು ಮೂರನ್ನೂ ಯಥಾವತ್ತಾಗಿ ತಕ್ಕತಕ್ಕ ಕಾಲಗಳಲ್ಲಿ (ಪ್ರವೃತ್ತಿಮಾರ್ಗ ಹಿಡಿದಿದ್ದಾಗ) ಸೇವಿಸುವವನಾಗುವನು.

"ಆದರೂ, ಎಲೈ ರಾಜನೇ ಸರ್ವ ಭೂತಗಳೂ ಸುಖಾರ್ಥಿಗಳಾಗಿಯೇ ಇರುವರು, ಮತ್ತು ಮೋಕ್ಷವೇ ಸುಖಾರ್ಥಿಗಳಿಗೆಲ್ಲಾ (ನಿವೃತ್ತಿಮಾರ್ಗವನ್ನು ಹಿಡಿದಿದ್ದಾಗ) ಪರಮ ಶ್ರೇಯವಾಗಿರುತ್ತದೆ."



ಇದು ಸನಾತನ ಧರ್ಮದೀಪಿಕೆಯಲ್ಲಿ ನೀತಿಪ್ರಕಾಶಿಕೆಯೆಂಬ ತೃತೀಯ ಭಾಗದಲ್ಲಿ ನೀತಿಶಾಸ್ತ್ರವಿಚಾರವೆಂಬ ಪ್ರಥಮಾಧ್ಯಾಯ.



# ತೃತೀಯ ಭಾಗ.

## ದ್ವಿತೀಯಾಧ್ಯಾಯ.



### ನೀತಿಶಾಸ್ತ್ರಾಧಾರ ನಿರೂಪಣ.



“ಏಕ ಮೇವ ಬ್ರಹ್ಮ” ಎಂಬುದನ್ನು ಸನಾತನ ಧರ್ಮವು ಸಾರಿರುವುದನ್ನು ನಾವು ಆಗಲೇ ತಿಳಿದಿರುತ್ತೇವೆ. ಹೊರಕ್ಕೇನೋ ಜೀವಾತ್ಮಗಳು ಅನೇಕಾನೇಕಗಳಾಗಿ ಕಾಣುತ್ತಿರುವುದು ನಿಜವೇ ಅಹುದು, ಆದರೆ ಆ ಜೀವಾತ್ಮಗಳೆಲ್ಲಾ ಏಕನಾಗಿರುವಾ ಪರಮಾತ್ಮನ ಅಂಶಗಳಾಗಿ ಅಥವಾ ಪ್ರತಿಬಿಂಬಗಳಾಗಿವೆ. ಅವುಗಳ ಭಿನ್ನತ್ವವು ಅನಿತ್ಯ, ಅವುಗಳ ಅಭಿನ್ನತ್ವವು ನಿತ್ಯ. ಸರೋವರವೊಂದರಲ್ಲಿ ಅನೇಕ ಗಡಿಗೆಗಳನ್ನು ಮುಳುಗಿಸಿ ನೀರನ್ನು ತುಂಬಿಕೊಳ್ಳಬಹುದು, ಆದರೆ ಆ ಗಡಿಗೆಗಳನ್ನೆಲ್ಲಾ ತುಂಬಿರುವ ನೀರೇನೋ ಒಂದೇ. ಉಪಾಧಿಗಳನೇಕಗಳು ಏಕವೆಂಬಾ ಸಾಗರದೊಳಕ್ಕೆ ಬೀಳುವುವು, ಆದರೆ ಆ ಉಪಾಧಿಗಳನ್ನೆಲ್ಲಾ ತುಂಬಿರುವ ಚೈತನ್ಯವು ಒಂದೇ ಆಗಿರುತ್ತದೆ. ಸದ್ಧರ್ಮದೀ ಪ್ರಪ್ರಥಮ ತತ್ವವು ನೀತಿಶಾಸ್ತ್ರದ ಆಧಾರವಾಗಿರುತ್ತದೆ.

ಹೀಗಿರುವುದರಿಂದ ಈ ನಮ್ಮ ನೀತಿಶಾಸ್ತ್ರದಲ್ಲಿ ಪರಬ್ರಹ್ಮದ ಏಕತ್ವವನ್ನು ಒಪ್ಪಲೇಬೇಕಾಗಿದೆ ; ಆದರೆ ಈ ಒಪ್ಪಿಗೆಯೊಂದೇ ಸಾಲದು ; ಏಕೆಂದರೆ ಈ ಏಕತ್ವದಲ್ಲಿ, “ನಾನು” “ನೀನು” ಎಂಬ ಭಾವನೆಗಳೇ ಇಲ್ಲ. ನಮ್ಮ ನೀತಿಶಾಸ್ತ್ರವಾದರೊ “ನಾನು” “ನೀನು” ಎಂಬುವುಗಳಿಗಿರುವ ಪರಸ್ಪರ ಸಂಬಂಧಗಳನ್ನು ವಿಚಾರ ಮಾಡುವುದಾಗಿದೆ. ಆದುದರಿಂದ “ಅನಾತ್ಮದ ಬಹುಳತೆಯನ್ನೂ” ನಾವು ಒಪ್ಪಲೇಬೇಕು ;—ಎಂದರೆ ಅನಾತ್ಮದಲ್ಲಿ ಅಥವಾ ಪ್ರಕೃತಿಯಲ್ಲಿ ಉಪಾಧಿಗಳನೇಕಗಳು ಇರುವುವು ;

—

ಮತ್ತು ಪೃಥಕ್ ಪೃಥಕ್ಕಾಗಿರುವ ಈ ಪ್ರತಿಯುಪಾಧಿಯಲ್ಲಿಯೂ ಪರಮಾತ್ಮನ ಒಂದು ಅಂಶವೋ ಛಾಯೆಯೋ ಇದ್ದೇ ಇರುವುದು. ದೇಹದಿಂದೊಡಗೂಡಿದ ಮನಸ್ಸುಗಳು ಲೆಕ್ಕವಿಲ್ಲದಷ್ಟಿರುವುವು; ಮತ್ತು ದೇಹದಿಂದೊಡಗೂಡಿದೀ ಮನಸ್ಸುಗಳು ಪರಸ್ಪರ ಸಂಬಂಧಗಳಿಗೊಳಗಾಗುತ್ತವೆ. ಈ ಸಂಬಂಧಗಳು ಸರಿಯಾದುವುಗಳಾಗಬೇಕಾದರೆ, ಶರೀರವೂ ಮನಸ್ಸೂ ಸೇರಿ ಆಗಿರುವ ಪ್ರತಿಪ್ರಾಣಿಯೂ ಹೀಗೆಯೇ ಸೇರಿ ಆಗಿರುವ ಇತರ ಪ್ರಾಣಿಗಗಳ ವಿಷಯದಲ್ಲಿ, ತಾವುತಾವು ಬೇರೆಬೇರೆಯಾಗಿದ್ದರೂ ಮೂಲದಲ್ಲಿಯೊಂದೆಯಾಗಿರುವೆವು, ಸರ್ವ ಭೂತಗಳಿಗೂ ಹಿತಕರವಾಗಿರುವುದಾವುದೋ ಅದೇ ಪ್ರತಿಪ್ರಾಣಿಗೂ ಹಿತಕರವಾಗುವುದು, ಮತ್ತು ಒಂದು ಪ್ರಾಣಿಗೆ ಅವುದು ಹಿಂಸಾಕರವಾಗಿರುವುದೋ ಅದು ಸಕಲ ಭೂತಗಳಿಗೂ ಹಿಂಸಾಕರವಾಗುವುದು ಎಂಬ ತತ್ವವನ್ನು ಆಚರಣೆಗೆ ತರಲೇಬೇಕಾಗಿದೆ. ವಿಚಾರವಹಿಡಿ ನೋಡುವಲ್ಲಿ, ಬೇರೊಬ್ಬನನ್ನು ನಾವು ನೋಯಿಸುವಲ್ಲಿ ನಿಜವಾಗಿಯೂ ನಮ್ಮನ್ನು ನಾವೇ ನೋಯಿಸಿಕೊಳ್ಳುವರಾಗುತ್ತೇವೆ. ಒಂದು ಶರೀರದ ಕೈ ಅದೇ ಶರೀರದ ಹೆಜ್ಜೆಯೊಂದನ್ನು ಕತ್ತರಿಸಿದರೆ, ಹೆಜ್ಜೆಯಿಂದ ರಕ್ತವು ಹರಿವುದೇ ಹೊರತು ಕೈಯಿಂದಿಲ್ಲ; ಆದರೂ ಸ್ವಲ್ಪಕಾಲದಲ್ಲಿಯೇ ಕೈಗೆ ಬಲ ಕಡಮೆಯಾಗುವುದು; ಏಕೆಂದರೆ, ಒಂದೇ ರಕ್ತವು ಶರೀರದೊಳಗೆಲ್ಲಾ ಪರಿಚಲಿಸುತ್ತಲಿರುತ್ತದೆ, ಮತ್ತು ಶರೀರದೆಲ್ಲಾ ಭಾಗಗಳಿಗೂ ಒಂದೇಕಡೆಯಿಂದ ರಕ್ತವು ಹರಿವುದು. ಮಾನವರ ವಿಷಯವೂ ಹೀಗೆಯೇ ಇರುವುದು, ಮತ್ತು ಒಬ್ಬನು ಮತ್ತೊಬ್ಬನಿಗೆ ನೋವುಂಟುಮಾಡಿದರೆ, ನೋಯಿಸಲ್ಪಟ್ಟವನು ಎಷ್ಟು ನೋವನ್ನು ಅನುಭವಿಸುವನೋ, ನೋಯಿಸಿದವನೂ ಅಷ್ಟು ನೋವನ್ನು ಅನುಭವಿಸುವನು; ನೋವು ಅನುಭವಕ್ಕೆ ಬರುವುದಕ್ಕೆ ಮಾತ್ರ ದೀರ್ಘಕಾಲವಾಗುವುದು.

ಬುದ್ಧಿಗೆ ತೋರಬರುವಂತೆಯೂ ಸದಾಚಾರಕ್ಕೀಭಾವನೆಯೇ ಅಧಾರವಾಗಿರುವುದು. ಮೊಟ್ಟಮೊದಲಲ್ಲಿ ಹುಡುಗರು ಈ ನೀತಿ ನಿಯಮಗಳನ್ನು (moral precepts) ಶಾಸ್ತ್ರೋಕ್ತರೀತಿಯಲ್ಲಿ ಪಂಡಿತರ ಮತ್ತು ಹಿಹನೀಯರ ಹೇಳಿಕೆಯ ಅಧಾರದಮೇಲೆ ಸ್ವೀಕರಿಸಬೇಕು, ಏಕೆಂದರೆ ಇವುಗಳನ್ನೆಲ್ಲಾ ತಮಗೆ ತಾವೇ ಯೋಚಿಸಿಕೊಂಡು ತಿಳಿದುಕೊಳ್ಳುವುದಕ್ಕೆ

ಹುಡುಗರಾಗಿರುವವರಿಗೆ ಯೋಗ್ಯತೆಯೂ ಇಲ್ಲ, ಕಾಲವೂ ಇಲ್ಲ. ದೊಡ್ಡವರಾದ ಮೇಲೆ, ಸನಾತನ ಧರ್ಮದಲ್ಲಿ ಕೊಟ್ಟಿರುವ ಈ ಸದಾಚಾರವಿಧಿಗಳನ್ನು ತಂತಮ್ಮ ಬುದ್ಧಿಗಳಿಂದಲೇ ಯೋಜಿಸಿ ಗ್ರಹಿಸಬಹುದಾಗಿದೆ.

ಏಕನಾಗಿರುವ ಆತ್ಮನೇ ಸರ್ವ ಭೂತಗಳಲ್ಲಿಯೂ ಇರುವನು, ಪ್ರತಿ ಜೀವಾತ್ಮವೂ ಏಕನಾದಾ ಪರಮಾತ್ಮನ ಅಂಶ ಅಥವಾ ಪ್ರತಿಬಿಂಬ. ಈ ತತ್ವವನ್ನು ಪಡಿಯೊರ್ವನೂ ಹೃದ್ಗತಮಾಡಿಟ್ಟುಕೊಳ್ಳುವನಾಗಲಿ; ಮತ್ತೊಬ್ಬನನ್ನು ನೋಯಿಸುವಾತನು ತನ್ನನ್ನು ತಾನೇ ನೋಯಿಸಿಕೊಳ್ಳುವನಾಗುವನು ಎಂಬುದನ್ನು ಪಡಿಯೊರ್ವನೂ ಜ್ಞಾಪಕದಲ್ಲಿಡುವನಾಗಲಿ. "ಎಲೈ, ಗುಡಾಕೇಶನೇ, ಸರ್ವ ಭೂತಾಶಯಸ್ಥಿತನಾಗಿರುವ ಆತ್ಮನು ನಾನೆ, ಸರ್ವ ಭೂತಗಳಿಗೂ ಆದಿಯಾಗಿಯೂ ಮಧ್ಯನಾಗಿಯೂ ಅಂತನಾಗಿಯೂ ಇರುವವನೂ ನಾನೆ," ಎಂದು ಶ್ರೀ ಕೃಷ್ಣನು ಸಾರಿರುವನು.

(ಭಗವದ್ಗೀತೆ. ಅ. ೧೦, ಶ್ಲೋ, ೨೦).

## ಶ್ರುತ್ಯಾದಿ ವಚನಗಳು.

ಏಕೋದೇವ ಸ್ಸರ್ವಭೂತೇಷು ಗೂಢಸ್ಸರ್ವವ್ಯಾಪೀ ಸರ್ವ
[ಭೂತಾಂತರಾತ್ಮಾ।
ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇ
[ವಲೋ ನಿರ್ಗುಣಶ್ಚ ॥

(ಶ್ವೇತಾಶ್ವತರೋಪನಿಷತ್ತು. VI, ೨).

"ಏಕನಾಗಿರುವ ದೇವನೇ ಸರ್ವ ಭೂತಗಳಲ್ಲಿಯೂ ಗೂಢನಾಗಿರುವನು. ಅವನು ಸರ್ವವ್ಯಾಪಿ; ಅವನು ಸರ್ವ ಭೂತಾಂತರಾತ್ಮ, ಕರ್ಮಾಧ್ಯಕ್ಷ, ಸರ್ವ ಭೂತಾಧಿವಾಸ; ಸಾಕ್ಷಿಯಾಗಿಯೂ ಚೇತನನಾಗಿಯೂ ಕೇವಲನಾಗಿಯೂ ಗುಣಾತೀತನಾಗಿಯೂ, ಇರುವವನು ಅವನು."

ಏಕಸ್ತಥಾ ಸರ್ವ ಭೂತಾಂತರಾತ್ಮಾ ರೂಪಂರೂಪಂ ಪ್ರತಿ
ರೂಪೋ ಬಭೂವ ॥ (ಕಠೋಪನಿಷತ್ತು. V, ೧೦).

"ಸರ್ವ ಭೂತಗಳಲ್ಲಿಯೂ ಅಂತರಾತ್ಮನಾಗಿ ಏಕನಾಗಿರುವೀ ಪರಮಾತ್ಮನು ಪ್ರತಿರೂಪದಲ್ಲಿಯೂ ಕಾಣಬರುವ ಭಿನ್ನಾತ್ಮನೂ ತಾನೇ ಆಗಿದಾನೆ."

ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ ।
ಸರ್ವಭೂತೇಷು ಚಾತ್ಮಾನಂ ತತೋನವಿಜಿಗುಪ್ಸತೇ ॥
ಯಸ್ಮಿನ್ಸರ್ವಾಣಿ ಭೂತಾನ್ಯಾತ್ಮೈವಾ ಭೂದ್ವಿಜಾನತಃ ।
ತತ್ರಕೋಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥

(ಈಶೋಪನಿಷತ್ತು. ೬, ೭).

"ಯಾವನು ಆತ್ಮನಲ್ಲಿ ಸರ್ವ ಭೂತಗಳನ್ನೂ, ಸರ್ವಭೂತಗಳಲ್ಲಿಯೂ ಆತ್ಮನನ್ನು ಕಾಣುವನಾಗುವನೋ ಅವನು ಜುಗುಪ್ಸೆ ಪಡುವುದಿಲ್ಲ.

"ಪರಿಪೂರ್ಣಜ್ಞಾನದಿಂದ ತುಂಬಿರುವ ಯಾವನ ಅರಿವಿನಲ್ಲಿ ಸರ್ವ ಭೂತಗಳೂ ಆತ್ಮನೇ ಆಗಿರುವುವೋ, ಏಕತ್ವವನ್ನೇ ಕಾಣುತ್ತಿರುವ ಆತನಲ್ಲಿ ಮೋಹವೆಲ್ಲಿ ತಾನೇ ಇದ್ದೀತು? ಶೋಕವೆಲ್ಲಿ ತಾನೇ ಇದ್ದೀತು?"

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥

(ಭಗವದ್ಗೀತೆ. ಅ. ೬. ಶ್ಲೋ, ೨೯).

"ಯಾವನ ಆತ್ಮವು ಯೋಗಯುಕ್ತವಾಗಿರುವುದೋ ಆತನು ಎಲ್ಲೆಡೆಗಳಲ್ಲಿಯೂ ಸಮದೃಷ್ಟಿಯುಳ್ಳವನಾಗಿ ಆತ್ಮನಲ್ಲಿಯೇ ಸರ್ವಭೂತಗಳನ್ನೂ ಸರ್ವಭೂತಗಳಲ್ಲಿಯೂ ಆತ್ಮನನ್ನು ಕಾಣುವನಾಗುತ್ತಾನೆ."

---

ಇದು ಸನಾತನ ಧರ್ಮದೀಪಿಕೆಯಲ್ಲಿ ನೀತಿಪ್ರಕಾಶಿಕೆಯೆಂಬ ತೃತೀಯ ಭಾಗದಲ್ಲಿ ನೀತಿಶಾಸ್ತ್ರಾಧಾರ ನಿರೂಪಣವೆಂಬ ದ್ವಿತೀಯಾಧ್ಯಾಯ.



# ತೃತೀಯಭಾಗ.

## ತೃತೀಯಾಧ್ಯಾಯ.



### ಋತಾನೃತ ವಿಚಾರ.

———:o:———




ಅನೃತ ಎಂಬ ಎರಡು ಮಾತುಗಳೂ ಎಲ್ಲರ ಬಾಯಲ್ಲಿಯೂ ಇರುವುವು, ಆದರೆ ಈ ಮಾತುಗಳ ಸರಿಯಾದ ಅರ್ಥವನ್ನು ಹೇಳುವುದಕ್ಕೆ ಮಾತ್ರ ಎಲ್ಲರಿಗೂ ಬರುವುದಿಲ್ಲ. ಇವುಗಳ ಸರಿಯಾದ ಅರ್ಥವನ್ನು ಗ್ರಹಿಸುವುದಕ್ಕೆ ಯತ್ನಿಸೋಣ.

ಮಾನವನಾದವನು ಲೋಕತ್ರಯಗಳಿಗೆ ಸಂಬಂಧಪಟ್ಟಿರುವುದನ್ನು ನಾವು ಗ್ರಹಿಸುವವರಾಗಿದೇವೆ. ಬ್ರಹ್ಮನಿಂದ ಈ ಲೋಕತ್ರಯವು ಸೃಷ್ಟಿಸಲ್ಪಡುವುದೆಂತಲೂ, ವಿಷ್ಣುವಿನಿಂದ ರಕ್ಷಿಸಲ್ಪಡುವುದೆಂತಲೂ, ಶಿವನಿಂದ ಲಯವನ್ನು ಹೊಂದುವುದೆಂತಲೂ ತಿಳಿದಿದೆ. ಈ ಲೋಕತ್ರಯದ ಮತ್ತೊಂದು ವಿಷಯವನ್ನು ಪರ್ಯಾಲೋಚಿಸೋಣ. ಸಮುದ್ಭವವದಾಗುವುದು ; ಅನೇಕರೂಪಗಳು ಹುಟ್ಟಿ, ಬಳೆದು, ಪ್ರವರ್ಧಮಾನಕ್ಕೆ ಬರುವುವು ; ಅವುಗಳ ತಾರತಮ್ಯಗಳು ಬಳೆಯುತ್ತಾ ಹೋಗುವುವು; ಬಾಹ್ಯಪ್ರಪಂಚಗಳಿಂದ ಸ್ವೀಕಾರ ಮಾಡಬಹುದಾದುವುಗಳನ್ನು ಸ್ವೀಕಾರಮಾಡಿ ತಮ್ಮ ಕೋಶಗಳನ್ನೂ ಬುದ್ಧಿಯನ್ನೂ ಬಳೆಯಿಸಿಕೊಂಡು ವರ್ಧಿಷ್ಣುಗಳಾಗುವುವು. ಬಹಿರ್ಮಾರ್ಗದಲ್ಲಿ ಜೀವಾತ್ಮನು ಅಹಂಭಾವದಿಂದ ಕೂಡಿದವನಾಗಿ ಬಾಹ್ಯಪ್ರಪಂಚದಲ್ಲಿ ಅನುಭವಗಳನ್ನು ಶೇಖರಮಾಡಿಟ್ಟುಕೊಳ್ಳುತ್ತಾ ಬುದ್ಧಿಯನ್ನು ಬಳೆಯಿಸಿಕೊಂಡು ಬಲಶಾಲಿಯಾಗುವ ಮಾರ್ಗಕ್ಕೆ ಪ್ರವೃತ್ತಿಮಾರ್ಗವೆಂಬ ಹೆಸರನ್ನು ಕೊಟ್ಟಿದೆ. ಇಷ್ಟ

ಬಳೆವಳಿಗೆಗೆ ಬಂದಮೇಲೆ, ಜೀವಾತ್ಮನು ತಾನು ಈಶ್ವರನ ಅಥವಾ ತನಗಿಂತಲೂ ಎಷ್ಟೋ ವಿಶೇಷ ಶಕ್ತಿಯುಳ್ಳ ಪರಮಾತ್ಮನ ಅಂಶವಾಗಿ ಅಥವಾ ಪ್ರತಿಬಿಂಬವಾಗಿ ಇರುವುದನ್ನೂ, ತಾನು ಆ ಈಶ್ವರನ ಅಂಶವಾಗಿದ್ದಂತೆ ತನ್ನ ಶಕ್ತಿಗಳನ್ನು ಉಪಯೋಗಿಸಿಕೊಂಡಾಗ ಮಾತ್ರವೇ ತನಗೆ ಸುಖವು ಲಭಿಸುವುದೆಂಬುದನ್ನೂ ಕಲಿಯಬೇಕಾಗುವುದು. ಆಗ ಅವನು ಅನಂತರೂಪಗಳಲ್ಲಿ ಹುದುಗಿರುವ ಏಕನನ್ನು ಜ್ಞಾನಬಲದಿಂದ ತಿಳಿಯಲು ಪ್ರಾರಂಭಿಸುವನಾಗಿ, ಅಲ್ಪನಾಗಿಯೂ ಭಿನ್ನನಾಗಿಯೂ ಇರುವ ತನ್ನನ್ನು ತಾನು ನಿಕೃಷ್ಟಮಾಡಿಕೊಳ್ಳುತ್ತಾ, ಬ್ರಹ್ಮಜ್ಞಾನವನ್ನು ಪಡೆಯುವುದಕ್ಕೆ ಪ್ರಯತ್ನಿಸುವವನಾಗುತ್ತಾನೆ; ತನಗಿಂತಲೂ ಬಲಹೀನರಾಗಿರುವವರಿಗೆಲ್ಲಾ ತಾನು ದಾನ ಮಾಡುವುದಕ್ಕೂ, ಇತರ ಶರೀರಗಳಲ್ಲಿ ಹುದುಗಿರುವ ಆತ್ಮಗಳನ್ನು ತಾನೇ ಯೆಂದು ಭಾವಿಸಿಕೊಂಡು, ತಾನಾರ್ಜಿಸಿಕೊಂಡಿರುವುದನ್ನೆಲ್ಲಾ ಅವರುಗಳೊಡನೆ ಹಂಚಿಕೊಳ್ಳುವುದಕ್ಕೂ ಪ್ರಯತ್ನ ಮಾಡುವವನಾಗುತ್ತಾನೆ. ಇದು ಹಿಂದಿರುಗುವ ಮಾರ್ಗ ಅಥವಾ ನಿವೃತ್ತಿಮಾರ್ಗ. ಈ ಮಾರ್ಗದಲ್ಲಿ ಜೀವಾತ್ಮನು, ಬಯಸಿ ಬಂದವರಿಗೆಲ್ಲಾ ತನ್ನಲ್ಲಿರುವುದನ್ನು ಕೊಡುತ್ತಾ, ಎಲ್ಲರಲ್ಲಿಯೂ ಅಭಿನ್ನಭಾವನೆಯಿಂದಿರುವುದಕ್ಕೆ ಸರ್ವ ಪ್ರಯತ್ನವನ್ನೂ ಮಾಡುವನು.

ಲೋಕದ ಬಳೆವಳಿಗೆಯಲ್ಲಿ ಈ ಮಾರ್ಗಗಳೆರಡೂ ಸೇರಿರುವುವು. ಈಶ್ವರನ ಮೂರ್ತಿತ್ರಯಗಳಲ್ಲಿ ಓರ್ವನಾದ ವಿಷ್ಣುವು ಹೀಗೆ ಸಂಕಲ್ಪಿಸಿ ಈ ಬಳೆವಳಿಗೆಯ ದಾರಿಯಲ್ಲಿ ತನ್ನ ಲೋಕವನ್ನು ನಡೆಯಿಸುತ್ತಿದಾನೆ. ಈ ಈಶ್ವರಸಂಕಲ್ಪಾನುಸಾರವಾಗಿ ನಡೆವುದೇ ಋತ; ಇದಕ್ಕೆ ವಿರೋಧವಾಗಿ ನಡೆವುದೇ ಅನೃತ.

ಪ್ರವೃತ್ತಿಮಾರ್ಗವನ್ನು ಬಿಟ್ಟು ನಿವೃತ್ತಿಮಾರ್ಗಕ್ಕೆ ತಿರುಗುವ ಮೂಲೆಯಲ್ಲಿ ನಮ್ಮ ಭೂಲೋಕವಿರುತ್ತದೆ. ಅನೇಕ ಜನರಿನ್ನೂ ಪ್ರವೃತ್ತಿಮಾರ್ಗಾವಲಂಬಿಗಳಾಗಿಯೇ ಇರುತ್ತಾರೆ, ಆದರೆ ಅ[illegible] ಮುಂದಣ ಬಳೆವಳಿಗೆಯು ನಿವೃತ್ತಿಮಾರ್ಗವನ್ನು ಸೇರ್ದಿರುವುದು. ಹೀಗಿರುವುದರಿಂದ ಅಭಿನ್ನ ಭಾವನೆಗೊಯ್ಯುವ ನಿವೃತ್ತಿಮಾರ್ಗವನ್ನು ಮೆಟ್ಟುವಂತೆ ಮಾಡುವ ಇಚ್ಛಾ ಜ್ಞಾನ ಕ್ರಿಯೆಗಳೆಲ್ಲವೂ ಸದ್ವರ್ತನಕ್ಕೆ ಸೇರುವುವು.

ಅಭಿನ್ನ ಭಾವನೆಯು ವೃದ್ಧಿಯಾಗುವಂತೆಯೂ ಭಿನ್ನ ಭಾವನೆಯು ಕ್ಷಯವಾಗುವಂತೆಯೂ ನಾವು ಗುರಿಯಿಡಲೇ ಬೇಕು ; ಭಿನ್ನ ಭಾವನೆಯನ್ನು ಕಡಮೆ ಮಾಡಿ ಅಭಿನ್ನ ಭಾವನೆಯೆಡೆಗೊಯ್ಯುವುದೆಲ್ಲಾ ಋತ ; ಭಿನ್ನ ಭಾವನೆಯನ್ನು ವೃದ್ಧಿಗೊಳಿಸಿ ಅಭಿನ್ನ ಭಾವನೆಯನ್ನು ಹಾಳುಮಾಡುವುದೆಲ್ಲಾ ಅನೃತ . ಆದರೂ ತಿರ್ಯಗ್ಜಂತುಗಳಿಗೂ, ಅನಾಗರಿಕರಿಗೂ, ಎಳೆಯ ಬಾಲಜೀವಿಗಳಿಗೂ, ಅಹಂ ಭಾವವದು ಆರಾರಿಗಿನ್ನೂ ಬಳೆದಿಲ್ಲವೋ ಅವರೆಲ್ಲರಿಗೂ ಭಿನ್ನಭಾವನೆಯನ್ನು ಬಳೆಯಿಸುವ ಪ್ರವೃತ್ತಿಮಾರ್ಗವೇ ಅವಶ್ಯಕವಾಗಿರುತ್ತದೆ. ಹೀಗಿರುವುದರಿಂದ, ಬಳೆದ ಜೀವಗಳಿಗೆ ಋತಾನೃತಗಳಾಗಿರುವುವು ಬಾಲಜೀವಗಳಿಗೆ ಋತಾನೃತಗಳಾಗಿನ್ನೂ ಇಲ್ಲ. ನೀತಿಯು ಸಾನುಬಂಧವಾಗಿರುವುದು ಎಂದರೆ ಇದೇ ಅರ್ಥ. ನಾವಿರುವ ಮಾರ್ಗಕ್ಕೆ, ಬಳೆವಳಿಗೆಯಲ್ಲಿ ನಾವಿರುವ ಸ್ಥಾನಕ್ಕೆ ಸಂಬಂಧಪಟ್ಟು ನೀತಿಯು ಇರುವುದು.

"ನೀತಿಯಲ್ಲಿ ಸೂಕ್ಷ್ಮಗಳುಂಟು. ವೇದಪಙ್ತಿಯೊಂದನ್ನೇ ಇಟ್ಟುಕೊಂಡು ನಿನಗೆ ನಾನು ಉಪದೇಶ ಮಾಡುವುದಿಲ್ಲ. ಜ್ಞಾನಾನುಭವಗಳಿಗೆ ವಿರೋಧವಿಲ್ಲದಂತೆ ವೇದಪಙ್ತಿಗರ್ಥಮಾಡಿ ನಿನಗುಸುರುವೆನು. ಏಕಪಕ್ಷವಾಗಿರುವ ನೀತಿಯನ್ನನುಸರಿಸಿಕೊಂಡು ಸರಿಯಾಗಿ ಲೋಕಯಾತ್ರೆಯನ್ನಾವನೂ ಎಸಗಲರಿಯನು. ಜಾಗರೂಕತೆಯಿಂದ ನ್ಯಾಯ ವಿಮರ್ಶೆಗೈದು ವೇದಪಙ್ತಿಯನ್ನು ಅನ್ವಯಿಸಿಕೊಳ್ಳಬೇಕು ; ಹಾಗೆ ಮಾಡದಿದ್ದರೆ ಅನರ್ಥಗಳನೇಕಕ್ಕೆ ಆಸ್ಪದವುಂಟಾಗುವುದು. ಬುದ್ಧಿಗೆ ಅಸಮರ್ಪಕವಾಗಿ ತೋರುವ ವೇದವು ವೇದವೇ ಅಲ್ಲವೆಂಬ ತತ್ವವನ್ನು ಪೂರ್ವದಲ್ಲಿ ಶುಕ್ರಾಚಾರ್ಯರುಸುರಿದರು. ಸಂದೇಹ ವಿಶಿಷ್ಟವಾಗಿರುವ ತಿಳವಳಿಕೆ, ಇದ್ದರೂ, ಇಲ್ಲದಿರುವುದಕ್ಕಿಂತ ಫಲದಾಯಕವಾಗಿರುವುದಿಲ್ಲ. ಬಗೆ ಬಗೆಯ ಸಂದರ್ಭಗಳನ್ನು ಲೆಕ್ಕಿಸದೇ ಬರಿಯ ಮಾತುಗಳನ್ನೇ ಆಧಾರವಾಗಿಟ್ಟುಕೊಂಡಿರುವ ನೀತಿಶಾಸ್ತ್ರವು ದೋಷಗಳಿಗೊಯ್ಯುವುದು. ದೀರ್ಘಕ್ಷಾಮವದೊಂದರಲ್ಲಿ ವಿಶ್ವಾಮಿತ್ರ ಮಹರ್ಷಿಗಳು ನಿಷಿದ್ಧವಾದದೊಂದಾಹಾರವನ್ನು ಚಂಡಾಲನೊಬ್ಬನಿಂದ ಸ್ವೀಕರಿಸಿದವರಾಗಿ, ತಮ್ಮ ಕರ್ಮ ಸ್ಥಾಪನೆಯನ್ನು ಮಾಡುವುದಕ್ಕಾಗಿ ದೇವತೆಗಳೂ ಆ ಹವಿಸ್ಸನ್ನೇ ಸ್ವೀಕಾರಮಾಡುವಂತೆ ಮಾಡುವರಾಗಿದಾರೆ. ಕ್ಷಮಾಗುಣವು ಸನ್ಯಾಸಿಗೊಪ್ಪುವುದಾದರೂ ರಾಜ

ನೆನಿಸಿಕೊಂಡವನಿಗೆ ಸರ್ವದಾ ಒಪ್ಪುವುದಿಲ್ಲ. ತನಗೆ ಮಾಡಿದಪರಾಧವನ್ನು ರಾಜನು ಕ್ಷಮಿಸಬಹುದು ; ಆತ್ಮಹಿತವನ್ನೂ ಪ್ರಜಾಹಿತವನ್ನೂ ಬಯಸುವ ರಾಜನು ತನ್ನ ಪ್ರಜೆಗಳಲ್ಲಿ ಪರಮ ನೀಚನೆನಿಸಿಕೊಂಡವನಿಗಾದ ಅತ್ಯಲ್ಪವಾದ ಅಪರಾಧವನ್ನೂ ಕೂಡ ಮನ್ನಿಸಬಾರದಾಗಿರುತ್ತದೆ. ಕೊಲ್ಲಬಾರದವನನ್ನು ಕೊಲ್ಲುವ ಪಾತಕವು ಕೊಲ್ಲಬೇಕಾದವನನ್ನು ಕೊಲ್ಲದಿರುವ ಪಾತಕಕ್ಕೆ ಸಮವೆನಿಸಿಕೊಂಡಿದೆ. ವರ್ಣಾಶ್ರಮ ಧರ್ಮಕ್ಕನುಗುಣಗಳಾದ ಕೆಲಸಗಳನ್ನು ರಾಜನು ತನ್ನ ಪ್ರಜೆಗಳ ಕೈಯಲ್ಲಿ ಚಿತ್ತಸ್ಥೈರ್ಯದಿಂದ ದಾಕ್ಷಿಣ್ಯವರ್ಜಿತನಾಗಿ ಮಾಡಿಸುವನಾಗಲೇಬೇಕು. ರಾಜನು ಹಾಗೆ ಮಾಡದಿದ್ದಲ್ಲಿ, ಅವನ ಪ್ರಜೆಗಳು ತಡೆಯಿಲ್ಲದೆ ತೋಳಗಳಂತೆ ಸುಳಿದಾಡುತ್ತಾ, ಸಮಯವರಿತು ಬಲಹೀನರನ್ನು ಬಡಿದು ಬಾಯಿಗೆ ಹಾಕಿಕೊಳ್ಳುವರಾಗುತ್ತಾರೆ. 'ಯಾವಳು ಸವಿಮಾತುಗಳನ್ನೇ ಆಡುವಳೋ ಅವಳೇ ಸತಿ, ಯಾವನು ತಂದೆಗೆ ಸಂತಸವನೆಸಗುವನೋ ಅವನೇ ಸುತ, ಯಾವನನ್ನು ನೆಮ್ಮದಿಯಿಂದ ನೆಮ್ಮಬಹುದೋ ಅವನೇ ಸ್ನೇಹಿತ, ಯಾವ ಭೂಮಿಯು ಅನ್ನವನ್ನೀವುದೋ ಅದೇ ಮಾತೃಭೂಮಿ", ಎಂಬ ಪೂರ್ವದ ಗಾಥೆಯೊಂದಿದೆ. ಯಾವನು ಹಿಂಸೆಯಿಲ್ಲದೆ, ನ್ಯಾಯವನ್ನು ಮೀರದೆ, ರಾಜ್ಯವನ್ನಾಳುವನೋ, ಯಾರ ರಾಜ್ಯದಲ್ಲಿ ಧರ್ಮಿಷ್ಟರಿಗೆ ಭಯವೇ ಇಲ್ಲವೋ, ಯಾವನು ದೀನರನ್ನು ರಕ್ಷಿಸಿ ತುಂಟರನ್ನು ಶಿಕ್ಷಿಸುವನೋ ಅವನೇ ರಾಜ" ಎಂದು ಭೀಷ್ಮಾಚಾರ್ಯರು ಯುಧಿಷ್ಟಿರನಿಗೆ ಧರ್ಮೋಪದೇಶವನ್ನು ಮಾಡಿದರು.

ಕಾಲದೇಶಾನುಗುಣವಾಗಿ ಜನರು ಯಾವಯಾವ ಧರ್ಮಗಳಲ್ಲಿ ಲಕ್ಷ್ಯವಿಡಬೇಕೋ ಅವುಗಳನ್ನು ತಿಳಿಸಿ, ಅವರೇಳಿಗೆಗೆ ಸಹಾಯ ಮಾಡುವುದಕ್ಕೇ ವರ್ಣಾಶ್ರಮಗಳ ವಿಭಾಗಗಳು ಆಗಿರುತ್ತವೆ. ಈಶ್ವರ ಸಂಕಲ್ಪವನ್ನು ಗೊತ್ತುಮಾಡಿಕೊಳ್ಳುವುದಕ್ಕೆ ತಕ್ಕಷ್ಟು ಸಾಮರ್ಥ್ಯವೇ ಆಗಲಿ ಕಾಲವೇ ಆಗಲಿ ಸಕಲ ಜನರಿಗೂ ಇಲ್ಲದಿರುವುದರಿಂದ, ಆ ಸಂಕಲ್ಪವನ್ನು ನಮಗೆ ತಿಳಿಸಿ ಋತಾನೃತಗಳ ವಿವೇಚನೆಯಲ್ಲಿ ನಮಗೆ ಸಹಾಯವುಂಟಾಗಲೆಂದು ಶಾಸ್ತ್ರಗಳು ನಮಗೆ ದಯಪಾಲಿಸಲ್ಪಟ್ಟಿರುವುವು. ವಿವರಗಳು

ಸ್ಪಷ್ಟವಾಗಿಲ್ಲದಿರುವುದರಿಂದ ಶಾಸ್ತ್ರೋಕ್ತ ವಿಧಿಗಳನ್ನು ಸಮನ್ವಯಮಾಡುವುದಕ್ಕೆ ಸುಲಭವಲ್ಲದೆಯೋ, ಅನವಶ್ಯಕವಾಗಿಯೋ ಇರುವ ಸಂದರ್ಭಗಳಲ್ಲಿ ಉಪಯುಕ್ತಗಳಾಗಲೆಂದು ವ್ಯಾಸಮಹರ್ಷಿಗಳೂ ಇತರರೂ ಕೆಲವು ಸಾಮಾನ್ಯ ನೀತಿಗಳನ್ನು ಉಪದೇಶಿಸಿರುತ್ತಾರೆ. ಅವು ಯಾವುವೆಂದರೆ:—

(೧) "ಪರೋಪಕಾರವೇ ಪುಣ್ಯ, ಪರಪೀಡನವೇ ಪಾಪ."

(೨) "ತನಗೆ ನೋವನ್ನುಂಟುಮಾಡುವುದೆಂದು ತಾನು ತಿಳಿದಿರುವುದನ್ನೂ, ಇತರರು ತನಗೆ ಮಾಡದಿರಲೆಂದು ತಾನು ಹಾರಯಿಸುವುದನ್ನೂ ಮಾನವನು ತಾನಿತರರಿಗೆ ಮಾಡದಿರುವನಾಗಲಿ; ತನಗಾಗಿ ತಾನು ಹಾರಯಿಸಿಕೊಂಡಿರುವುದನ್ನೆಲ್ಲಾ ಇತರರಿಗೂ ತಾನು ಹಾರಯಿಸುವನಾಗಲಿ."

(೩) "ಪರರಿಗೆ ನೋವನ್ನುಂಟು ಮಾಡುವ ಕರ್ಮವನ್ನೂ, ಮಾಡುವುದಕ್ಕೆ ತಾನೇ ನಾಚಿಕೆಪಡುವ ಕರ್ಮವನ್ನೂ ಯಾವನೂ ಮಾಡದಿರಲಿ."

(೪) "ತನಗೇ ಅಪಥ್ಯವಾಗಿರುವುದನ್ನು ಮಾನವನು ಪರರಿಗೆ ಮಾಡದಿರುವನಾಗಲಿ."

## ಸ್ಮೃತ್ಯಾದಿ ವಚನಗಳು.

ಸುಖಾಭ್ಯುದಯಿಕಂಚೈವ ನೈಶ್ರೇಯಸಿಕ ಮೇವಚ |
ಪ್ರವೃತ್ತಂ ಚ ನಿವೃತ್ತಂ ಚ ದ್ವಿವಿಧಂ ಕರ್ಮವೈದಿಕಂ ||
ಇಹ ಚಾ ಮುತ್ರವಾ ಕಾಮ್ಯಂ ಪ್ರವೃತ್ತಂ ಕರ್ಮ ಕೀರ್ತ್ಯತೇ|
ನಿಷ್ಕಾಮಂ ಜ್ಞಾನಪೂರ್ವಸ್ತು ನಿವೃತ್ತ ಮುಪದ್ಯಶ್ಯತೇ ||
ಪ್ರವೃತ್ತಂ ಕರ್ಮ ಸಂಸೇವ್ಯ ದೇವಾನಾ ಮೇತಿಸಾಮ್ಯತಾಮ್ |
ನಿವೃತ್ತಂ ಸೇವಮಾನಸ್ತು ಭೂತಾನ್ಯತ್ಯೇತಿ ಪಂಚವೈ ||

(ಮನುಸ್ಮೃತಿ. ಅ. ೧೨, ಶ್ಲೋ. ೮೮, ೮೯, ೯೦).

"ವೇದದಲ್ಲಿ ಎರಡು ಬಗೆಯ ಕರ್ಮಗಳನ್ನು ಹೇಳಿದಾರೆ. ಪ್ರವೃತ್ತಕರ್ಮವು ಸುಖಾಭ್ಯುದಯಿಕವಾದುದು, ನಿವೃತ್ತಕರ್ಮವು ನೈಶ್ರೇಯಸಿಕವಾದುದು.

"ಇಹಲೋಕದಲ್ಲಿಯೋ ಪರಲೋಕದಲ್ಲಿಯೋ ಇಷ್ಟಾರ್ಥಸಿದ್ಧಿಯಾಗಲೆಂದು ಮಾಡುವ ಕರ್ಮವು ಪ್ರವೃತ್ತನೆನಿಸಿಕೊಳ್ಳುತ್ತದೆ; ಜ್ಞಾನ

ಪೂರ್ವಕವಾಗಿ ನಿಷ್ಕಾಮದಿಂದ ಮಾಡುವ ಕರ್ಮವು ನಿವೃತ್ತವೆನಿಸಿಕೊಳ್ಳುವುದು.

"ಪ್ರವೃತ್ತಕರ್ಮದಿಂದ ಮಾನವನು ದೇವತೆಗಳ ಪದವಿಯನ್ನೈದುವನು; ನಿವೃತ್ತಕರ್ಮದಿಂದ ಪಂಚಭೂತಗಳನ್ನೂ ಮೀರಿ ಯೇರುವನು."

ಅನ್ಯೇ ಕೃತಯುಗೇ ಧರ್ಮಾಸ್ತ್ರೇತಾಯಾಂ ದ್ವಾಪರೇಽಪರೇ |
ಅನ್ಯೇ ಕಲಿಯುಗೇನೃಣಾಂ ಯುಗಹ್ರಾಸಾನು ರೂಪತಃ ‖
(ಮಹಾಭಾರತ. ಶಾಂತಿಪರ್ವ. ಅ. ೨೩೧, ಶ್ಲೋ. ೨೭).

"ಕೃತಯುಗದ ಧರ್ಮಗಳೇ ಬೇರೆ; ತ್ರೇತಾ ದ್ವಾಪರಯುಗಗಳ ಧರ್ಮಗಳೇ ಬೇರೆ; ಕಲಿಯುಗದ ಮಾನವರ ಧರ್ಮಗಳೇ ಬೇರೆ—ಯುಗಾನುಸಾರವಾಗಿ ಧರ್ಮಗಳು ಬೇರೆ ಬೇರೆಯಾಗುವುವು."

ಯತಃ ಪ್ರವೃತ್ತಿರ್ಭೂತಾನಾಂ ಯೇನಸರ್ವಮಿದಂ ತತಮ್ |
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿಮಾನವಃ ‖
ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ |
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ‖
ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ |
ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ‖
ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ |
ತತ್ಪ್ರಸಾದಾತ್ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ‖
(ಭಗವದ್ಗೀತೆ. ಅ. ೧೮. ಶ್ಲೋ. ೪೬, ೪೭, ೬೧, ೬೨).

"ಯಾವನಿಂದ ಭೂತಗಳುದ್ಭವಿಸಿರುವುವೋ, ಯಾವನು ಜಗತ್ತೆಲ್ಲವನ್ನೂ ವಿಸ್ತರಿಸುವನೋ, ಅವನನ್ನು ಸ್ವಕರ್ಮದಿಂದರ್ಚಿಸುವುದರಿಂದ ಮಾನವನು ಸಿದ್ಧಿಯನ್ನು ಪಡೆಯುವನು."

"ವಿಗುಣವಾಗಿ ಕಾಣುವ ಸ್ವಧರ್ಮವು ಸ್ವನುಷ್ಠಿತ ಪರಧರ್ಮಕ್ಕಿಂತಲೂ ಶ್ರೇಯಸ್ಕರವಾಗಿರುತ್ತದೆ. ಸ್ವಭಾವನಿಯತವಾದ ಕರ್ಮವನ್ನಾಚರಿಸುವಾತನು ಕಿಲ್ಬಿಷಿಯಾಗುವುದಿಲ್ಲ."

"ಸರ್ವಭೂತ ಹೃದ್ದೇಶಸ್ಥನಾಗಿ ಈಶ್ವರನಿರುವನೈಯ್ಯಾ, ಪಾರ್ಥ; ಯಂತ್ರಾರೂಢಗಳಾಗಿರುವ ಸರ್ವಭೂತಗಳನ್ನೂ ತನ್ನ ಮಾಯಾಬಲದಿಂದ ಆಡಿಸುತ್ತಿರುವನು."

"ಸರ್ವಭಾವದಿಂದಲೂ ನೀನವನಿಗೆ ಶರಣಾಗತನಾಗು ; ಅವನ ಪ್ರಸಾದದಿಂದ ನಿನಗೆ ಪರಮಶಾಂತಿಯೂ ಶಾಶ್ವತಸ್ಥಾನವೂ ಲಭಿಸುವುವು."

ವೇದೋಽಖಿಲೋಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ ।
ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥

(ಮನುಸ್ಮೃತಿ. ಅ. ೨, ಶ್ಲೋ. ೬).

"ವೇದವೆಲ್ಲಾ ಧರ್ಮಕ್ಕೆ ಮೂಲ ; ಸ್ಮೃತಿಯೂ ವೇದವಿದರ ಶೀಲವೂ ಸಾಧುಗಳಾಚಾರವೂ ಆತ್ಮತುಷ್ಟಿಯೂ ಧರ್ಮಕ್ಕೆ ಮೂಲಗಳಾಗಿರುವುವು."

ಅಷ್ಟಾದಶ ಪುರಾಣೇಷು ವ್ಯಾಸಸ್ಯ ವಚನ ದ್ವಯಂ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್ ॥
ಯದನ್ಯೈರ್ವಿಹಿತಂ ನೇಚ್ಛೇದಾತ್ಮನಃ ಕರ್ಮ ಪೂರುಷಃ ।
ನತತ್ಪರೇಷು ಕುರ್ವೀತ ಜಾನನ್ನಪ್ರಿಯಮಾತ್ಮನಃ ।
ಯದ್ಯದಾತ್ಮನಿ ಚೇಚ್ಛೇತ ತತ್ಪರಸ್ಯಾಪಿ ಚಿಂತಯೇತ್ ॥

(ಮಹಾಭಾರತ. ಶಾಂತಿಪರ್ವ. ಅ. ೨೬೦, ಶ್ಲೋ. ೨೦, ೨೧, ೨೨).

ಯದನ್ಯೇಷಾಂ ಹಿತಂ ನಸ್ಯಾದಾತ್ಮನಃ ಕರ್ಮ ಪೌರುಷಮ್ ।
ಅಪತ್ರಪೇತವಾಯೇನ ನತತ್ಕುರ್ಯಾತ್ಕಥಂಚನ ॥

(ಮಹಾಭಾರತ. ಶಾಂತಿಪರ್ವ. ಅ. ೧೨೪, ಶ್ಲೋ. ೬೬).

ಅತೋ ಯದಾತ್ಮನೋಽಪಥ್ಯಂ ಪರೇಷಾಂ ನತದಾಚರೇತ್ ॥

(ಯಾಜ್ಞವಲ್ಕ್ಯಸ್ಮೃತಿ. ಅ. ೩, ಶ್ಲೋ. ೬೫).

(ಇವುಗಳ ಪರಿವರ್ತನವು ೧೪೦ ನೆಯ ಪುಟದಲ್ಲಿದೆ).

---

ಇದು ಸನಾತನ ಧರ್ಮದೀಪಿಕೆಯಲ್ಲಿ ನೀತಿಪ್ರಕಾಶಿಕೆಯೆಂಬ ತೃತೀಯಭಾಗದಲ್ಲಿ ಋತಾನೃತ ವಿಚಾರವೆಂಬ ತೃತೀಯಾಧ್ಯಾಯ.



# ತೃತೀಯ ಭಾಗ.

## ಚತುರ್ಥಾಧ್ಯಾಯ.



## ನೀತಿಪ್ರಮಾಣ ನಿರೂಪಣ.



ಕೆಲವು ಜೀವಗಳು ನಿವೃತ್ತಿಮಾರ್ಗವನ್ನವಲಂಬಿಸುವುದಕ್ಕೆ ತಕ್ಕಷ್ಟಿನ್ನೂ ಬೆಳೆಯದಿದ್ದರೂ ಕೂಡ, ಬೆಳೆದು ಬಂದಿರುವ ಇತರ ಜೀವಗಳ ವಿಷಯದಲ್ಲಿ ನೀತಿಯ ಪ್ರಮಾಣಕ್ಕೆ ಸರ್ವಸಾಧಾರಣವಾಗಿ ಅಭಿನ್ನಭಾವನೆಯನ್ನೇ ಲಕ್ಷ್ಯವಾಗಿಟ್ಟುಕೊಳ್ಳಬೇಕೆಂಬುದನ್ನು ನಾವು ಅರಿತವರಾಗಿದೇವೆ. ಅನೇಕರ ವಿಷಯದಲ್ಲಿ ಕರ್ಮಪರೀಕ್ಷೆಗಾಗಿ ನಾವು ಈ ಪ್ರಶ್ನೆಗಳನ್ನು ಮಾಡಬಹುದು:—ಅಭಿನ್ನಭಾವನೆಯನ್ನು ಪೋಷಿಸುವುದಾಗಿದೆಯೋ ಭಿನ್ನಭಾವನೆಯನ್ನು ಪೋಷಿಸುವದಾಗಿದೆಯೋ ವಿಚಾರಮಾಡಬಹುದು. ಅಭಿನ್ನಭಾವನೆಯನ್ನು ಪೋಷಿಸುವುದಾಗಿದ್ದರೆ, ಋತ; ಭಿನ್ನಭಾವನೆಯನ್ನು ಪೋಷಿಸತಕ್ಕುದಾಗಿದ್ದರೆ, ಅನೃತವೆಂದು ನಾವು ತಿಳಿಯಬೇಕು. ಹೀಗಿರುವುದರಿಂದಲೇ ಪ್ರಥಮಾಧ್ಯಾಯದಲ್ಲಿ, ನೀತಿಶಾಸ್ತ್ರವು ಮಾನವರು ತಂತಮ್ಮೊಳಗೂ ತಮ್ಮನ್ನಾವರಿಸಿರುವ ಭೂತಸಮುದಾಯಗಳಿಗೂ ತಾವು ನಡೆದುಕೊಳ್ಳಬೇಕಾದ ರೀತಿಯನ್ನು ತೋರಿಸಿಕೊಡುವುದೆಂದು ಹೇಳಿದೆ. ಸರ್ವ ಭೂತ ಹಿತಾಚರಣೆಯೇ ಅಭಿನ್ನಭಾವನೆಯನ್ನು ಪೋಷಿಸುವುದಾಗಿರುತ್ತದೆ.

ಹೀಗೆಯೇ ಶ್ರೀಕೃಷ್ಣನೂ ದೈವೀಸಂಪತ್ತುಗಳನ್ನೂ ಆಸುರಸಂಪತ್ತುಗಳನ್ನೂ ವಿವೇಚನೆ ಮಾಡುವಾಗ, ಅಭಿನ್ನತ್ವವನ್ನು ವೃದ್ಧಿಗೊಳಿಸುವ ಗುಣಗಳನ್ನು ದೈವೀಸಂಪತ್ತುಗಳೆಂದು, ಭಿನ್ನತ್ವವನ್ನು ವೃದ್ಧಿಗೊಳಿಸುವವುಗಳನ್ನು ಆಸುರಸಂಪತ್ತುಗಳೆಂದು ವಿಭಾಗಿಸುವನಾಗುತ್ತಾನೆ. "ಅಭಯ, ಸತ್ವಸಂಶುದ್ಧಿ, ಜ್ಞಾನಯೋಗವ್ಯವಸ್ಥಿತಿ, ದಾನ, ದಮ, ಯಜ್ಞ, ಸ್ವಾಧ್ಯಾಯ,

ತಪಸ್ಸು, ಆರ್ಜವ (straightforwardness), ಅಹಿಂಸೆ, ಸತ್ಯ, ಅಕ್ರೋಧ, ತ್ಯಾಗ (renunciation), ಶಾಂತಿ, ಅಪೈಶುನ (absence of crookedness), ಭೂತದಯೆ, ಅಲೋಲುಪ್ತ್ವ, ಮಾರ್ದವ, ಲಜ್ಜೆ, ಅಚಾಪಲ, ತೇಜಸ್ಸು, ಕ್ಷಮೆ, ಧೃತಿ, ಶೌಚ, ಅದ್ರೋಹ, ನಿಗರ್ವ—ಇಂತಹ ಸದ್ಗುಣಗಳು ಮಾನವರನ್ನು ಒಟ್ಟುಗೂಡುವುವು, ಮತ್ತು ಇವುಗಳಿಗೆಲ್ಲಾ ಆಧಾರವಾಗಿರುವುದು ಅಭಿನ್ನಭಾವನೆ. ಅಸುರಸಂಪತ್ತುಗಳಾದರೋ ಮಾನವರನ್ನು ಅಗಲಿಸುವುವು, ಭಿನ್ನಭಾವನೆಯನ್ನು ಬೆಳೆಯಿಸುವುವು ; ಇಂತಹ ಗುಣಗಳು ದಂಭ, ದರ್ಪ, ಅಭಿಮಾನ (conceit), ಕ್ರೋಧ, ಪಾರುಷ್ಯ (harshness), ಅಜ್ಞಾನ. ಅಸುರಸ್ವಭಾವದವನನ್ನು ಶ್ರೀಕೃಷ್ಣನು ಅಹಂಕಾರಭರಿತನೆಂದು ವರ್ಣಿಸಿರುವನು.

ಋತಾನೃತಗಳಿಗಿರುವೀತಾರತಮ್ಯವನ್ನು ಬಾಲವಿದ್ಯಾರ್ಥಿಯು ಚೆನ್ನಾಗಿ ಗ್ರಹಿಸಿ, ತನ್ನ ನಡತೆಯನ್ನು ಕ್ರಮಪಡಿಸಿಕೊಳ್ಳುವನಾಗಲಿ. ಋತಾನೃತಗಳನ್ನು ಕುರಿತು ಉತ್ತರತ್ರ ವ್ಯಾಸಂಗದಲ್ಲಿ ಅನೇಕ ನವೀನ ವಿಷಯಗಳನ್ನು ತಿಳಿಯುವನಾಗುವನು, ವಿವರಗಳನೇಕಗಳನ್ನು ಕಲಿಯುವನು, ಮತ್ತು ಅನೇಕ ತೊಡಕುಗಳನ್ನೂ ಬಿಡಿಸಬೇಕಾಗಿ ಬರುವುದು ; ಏನಾದರೂ ಈ ಪ್ರಮಾಣವು ಭದ್ರವಾಗಿ ನಿಂತಿರುತ್ತದೆ ; ಏಕೆಂದರೆ ಲೋಕೋದ್ಧಾರ ರೀತಿಗನುಗುಣವಾಗಿಯೂ ಈಶ್ವರ ಸಂಕಲ್ಪಕ್ಕವಿರೋಧವಾಗಿಯೂ ಈ ಪ್ರಮಾಣವಿರುವುದು.

## ಸ್ಮೃತ್ಯಾದಿ ವಚನಗಳು.

ಸರ್ವೇಷಾಮಪಿ ಚೈತೇಷಾ ಮಾತ್ಮಜ್ಞಾನಂ ಪರಂಸ್ಮೃತಮ್ ।
ತದ್ಧ್ಯಗ್ರ್ಯಂ ಸರ್ವವಿದ್ಯಾನಾಂ ಪ್ರಾಪ್ಯತೇಹ್ಯಮೃತಂ ತತಃ ‖
ಸರ್ವಮಾತ್ಮನಿ ಸಂಪಶ್ಯೇತ್ಸಚ್ಚಾಸಚ್ಚ ಸಮಾಹಿತಃ ।
ಸರ್ವಂ ಹ್ಯಾತ್ಮನಿ ಸಂಪಶ್ಯನ್ನಾಧರ್ಮೇ ಕುರುತೇ ಮನಃ ‖
ಆತ್ಮೈವ ದೇವತಾಸ್ಸರ್ವಾಸ್ಸರ್ವಮಾತ್ಮನ್ಯವಸ್ಥಿತಮ್
... ... ... ...
ಏವಂ ಯಸ್ಸರ್ವಭೂತೇಷು ಪಶ್ಯತ್ಯಾತ್ಮಾನಮಾತ್ಮನಾ ।
ಸಸರ್ವ ಸಮತಾಮೇತ್ಯ ಬ್ರಹ್ಮಾಭ್ಯೇತಿ ಪರಂಪದಮ್ ‖
(ಮನುಸ್ಮೃತಿ. ಅ, ೧೨ ; ಶ್ಲೋ. ೮೫, ೧೧೮, ೧೧೯, ೧೨೫).

"ಎಲ್ಲಕ್ಕಿಂತಲೂ ಆತ್ಮಜ್ಞಾನವೇ ಶ್ರೇಷ್ಠ. ಸರ್ವ ವಿದ್ಯಕ್ಕೂ ಇದೇ ಮೊದಲನೆಯದಾಗಿರುವುದು ; ಇದರಿಂದ ಅಮೃತತ್ವವು ಲಭಿಸುವುದು.

"ಆತ್ಮನಲ್ಲಿ ಸತ್ತನ್ನೂ ಅಸತ್ತನ್ನೂ ಸಮಾಹಿತಮನಸ್ಕನಾಗಿ ಮಾನವನು ನೋಡುವನಾಗಲಿ ; ಆತ್ಮನಲ್ಲಿ ಸರ್ವವನ್ನೂ ಹೀಗೆ ಕಂಡಮೇಲೆ, ಅವನ ಮನಸ್ಸು ಅಧರ್ಮಕ್ಕೆ ಹೋಗುವುದಿಲ್ಲ.

"ಆತ್ಮವೇ ಸರ್ವ ದೇವತೆಗಳು, ಸರ್ವವೂ ಆತ್ಮನಲ್ಲಿಯೇ ವ್ಯವಸ್ಥಿತವಾಗಿರುವುದು. ಆತ್ಮನ ಮೂಲಕವಾಗಿ ಆತ್ಮನನ್ನು ಸರ್ವಭೂತಗಳಲ್ಲಿಯೂ ಯಾವನು ನೋಡುವನಾಗುತ್ತಾನೆಯೋ ಅವನು ಸರ್ವವೂ ಸಮವೆಂಬುದನ್ನು ಗ್ರಹಿಸುವವನಾಗಿ ಪರಬ್ರಹ್ಮನ ಪದವಿಯನ್ನೈದುವವನಾಗುವನು."

---

ಇದು ಸನಾತನಧರ್ಮ ದೀಪಿಕೆಯಲ್ಲಿ ನೀತಿಪ್ರಕಾಶಿಕೆಯೆಂಬ ತೃತೀಯ ಭಾಗದಲ್ಲಿ ನೀತಿಪ್ರಮಾಣ ನಿರೂಪಣವೆಂಬ ಚತುರ್ಥಾಧ್ಯಾಯ.



# ತೃತೀಯ ಭಾಗ.

## ಪಂಚಮಾಧ್ಯಾಯ.



## ಧರ್ಮಾಧಾರ ನಿರೂಪಣ.



ಯಜ್ಞಮಾಡಬೇಕು, ಎಂದರೆ ಪರಸ್ಪರ ಸೇವೆಯನ್ನು ಮಾಡಬೇಕು, ಎಂದು ಸನಾತನ ಧರ್ಮವು ವಿಧಿಸಿರುವುದನ್ನು ನಾವು ಆಗಲೇ ತಿಳಿದಿರುತ್ತೇವೆ. ಹೀಗೆ ವಿಧಿಸಿರುವುದು ಉಚಿತ; ಏಕೆಂದರೆ ಇದು ಅಭಿನ್ನ ಭಾವನೆಯನ್ನು ಪೋಷಿಸುವುದು. ಇದೇ ರೀತಿಯಲ್ಲಿ ದೈನಂದಿನದ ಪಂಚಮಹಾಯಜ್ಞಗಳು ಯಜ್ಞಮಾಡುವವನಿಗೂ ದೇವರ್ಷಿ ಪಿತೃ ಮಾನವ ಭೂತಗಳಿಗೂ ಪರಸ್ಪರ ಸ್ನೇಹವನ್ನು ಬೆಳೆಯಿಸುವುವು. ಉಚಿತವನ್ನೆಸಗುವ ಮತ್ತೊಂದು ಮಾರ್ಗವನ್ನೂ ಸನಾತನಧರ್ಮವು ನಮಗೆ ವಿಶದಪಡಿಸಿಕೊಟ್ಟಿದೆ. ಯಾವುದೆಂದರೆ, ಋಣತ್ರಯವಿಮೋಚನ. ಋಷಿಋಣವನ್ನು ಮುಖ್ಯವಾಗಿ ಬ್ರಹ್ಮಚರ್ಯಾಶ್ರಮದಲ್ಲಿ ವೇದಾಧ್ಯಯನ ಗುರುಶುಶ್ರೂಷೆಗಳಿಂದ, ಪಿತೃಋಣವನ್ನು ಮುಖ್ಯವಾಗಿ ಗಾರ್ಹಸ್ಥ್ಯಾಶ್ರಮದಲ್ಲಿ ದಾನ ಸಂತಾನಪೋಷಣೆಗಳಿಂದ, ದೇವ ಋಣವನ್ನು ಮುಖ್ಯವಾಗಿ ವಾನಪ್ರಸ್ಥಾಶ್ರಮದಲ್ಲಿ ಹೋಮ ಜಪತಪಗಳಿಂದ ಮಾನವರು ತೀರಿಸುವವರಾಗಬೇಕೆಂದು ಸನಾತನಧರ್ಮವು ಬೋಧಿಸಿರುತ್ತದೆ.

ಋಣವೆಂದರೆ ಸಾಲ; ನಾವು ತೆಗೆದುಕೊಂಡಿರುವುದನ್ನು ನಾವು ಕೊಡಲೇ ಬೇಕು. ಈ ಸಾಲ ತೀರಿಸುವುದನ್ನು, ತೆರಬೇಕಾದುದನ್ನು ತೆರುವುದನ್ನು ಕರ್ತವ್ಯವೆನ್ನುತ್ತಾರೆ. ಕರ್ತವ್ಯವನ್ನೆಸಗುವುದು ಸದ್ಧರ್ಮ; ಕರ್ತವ್ಯವನ್ನೆಸಗದಿರುವುದು ಅಸದ್ಧರ್ಮ. ಸದ್ಗುಣ ಸಂಪನ್ನನು ತನ್ನ ಕರ್ತ,

ವ್ಯಗಳನ್ನು, ಋಣಗಳನ್ನು, ಒಪ್ಪಿಕೊಳ್ಳುವನು ಮತ್ತು ತೀರಿಸುವನು ; ದುರ್ಗುಣ ಸಂಪನ್ನನು ಒಪ್ಪಿಕೊಳ್ಳುವುದೂ ಇಲ್ಲ, ತೀರಿಸುವುದೂ ಇಲ್ಲ.

ಸದ್ಧರ್ಮಗಳು ಭೀಷ್ಮಾಚಾರ್ಯರಿಂದ "ಸತ್ಯಾಕಾರಗಳೆಂದೂ" ಕರೆಯಲ್ಪಟ್ಟಿವೆ ; ಏಕೆಂದರೆ, ಸತ್ಯವು ಮಿಥ್ಯೆಯಲ್ಲ, ತಥ್ಯವಾಗಿಯೇ ಇದೆ ; ಭೀಷ್ಮಾಚಾರ್ಯರು ಹೇಳುವಂತೆ ನಿಜವಾಗಿಯೂ "ಸನಾತನ ಬ್ರಹ್ಮವಾಗಿಯೂ" ಇದೆ. ಸತ್ಯವು ಈಶ್ವರನ ಸ್ವರೂಪವಾಗಿರುವುದು, ಬಾಹ್ಯಪ್ರಪಂಚವೆಂದು ನಮ್ಮಿಂದ ಕರೆಯಲ್ಪಡುವ ಈ ಪರಬ್ರಹ್ಮದ ಪ್ರತಿಕೃತಿಯಲ್ಲಿ ಇದು ನಮಗೆ ಕಾಣ ಬರುತ್ತದೆ. ಸಹಜವಿಧಿಗಳೆಲ್ಲವೂ (laws of nature) ಸತ್ಯಪ್ರದರ್ಶಕಗಳು, ಮತ್ತು ಲೇಶಮಾತ್ರವೂ ತಪ್ಪದೆ ಲೇಶಮಾತ್ರವೂ ಬದಲಾಯಿಸದೆ ತಮತಮಗೆ ನಿಯಮಿಸಲ್ಪಟ್ಟ ಕೆಲಸಗಳನ್ನು ನಡೆಯಿಸುವುವು. ಅನಾತ್ಮದ ಬಹುಳತ್ವದಲ್ಲಿ ಆತ್ಮನ ಏಕತ್ವವು ಹುದುಗಿರುವುದೇ, ಹಿಂದೆ ಹೇಳಿದಂತೆ, ಸತ್ಯಗಳೊಳಗೆಲ್ಲಾ ಸತ್ಯವೆನಿಸಿಕೊಂಡಿದೆ. ಬಹುಳತ್ವದಲ್ಲಿ ಏಕತ್ವವು ಹುದುಗಿರುವ ಈ ಪರಮ ಸತ್ಯದ ನೆರಳುಗಳಾಗಿಯೂ ಪ್ರತಿಕೃತಿಗಳಾಗಿಯೂ ಇತರ ಸತ್ಯಗಳೆಲ್ಲಾ ಇರುವುವು. ಈ ಪರಮ ಸತ್ಯವು ನೀತಿಶಾಸ್ತ್ರದಲ್ಲಿ ಮುಂದೆ ಹೇಳುವ ತೆರದಲ್ಲಿ ತೋರ್ಪಡಿಸಿಕೊಂಡಿದೆ : ಪಡಿಯೋರ್ವನೂ ಇತರರನ್ನು ತನ್ನಂತೆಯೇ ಭಾವಿಸಬೇಕು, ತನ್ನ ಜೀವವೂ ಇತರ ಜೀವಗಳೂ ಒಂದೇ ಯೆಂದಾಗಲಿ, ತನ್ನ ಜೀವದಂತೆಯೇ ಇತರ ಜೀವಗಳೂ ಇರುವುವೆಂದಾಗಲಿ ಭಾವಿಸಬೇಕು ; ಹೀಗೆ ಭಾವಿಸಿದವರಾಗಿ, ನಾವು ಸದಾ ನಿಜವನ್ನೇ ಆಡಬೇಕು ; ಮತ್ತೊಬ್ಬನಿಗೆ ಸುಳ್ಳನ್ನು ಹೇಳಿದರೆ ಅವನನ್ನು ಸಂಬದಿದ್ದಂತಾಗುವುದು, ಅವನನ್ನು ಬೇರೆಯವನೆಂದೂ ಶತ್ರುವೆಂದೂ ಭಾವಿಸಿದಂತಾಗುವುವು ; ಎಲ್ಲರೂ ಒಂದೇ ಎನ್ನುವಾಗ ಎಲ್ಲರಿಗೂ ಸಮನಾಗಿ ಹಂಚಬೇಕಾದ ಜ್ಞಾನದಲ್ಲಿ ಅವನಿಗೆ ಕೊಡತಕ್ಕ ಭಾಗವನ್ನು ಕೊಡದಿದ್ದಂತೆಯೂ ಆಗುವುದು. ತಿಳಿದೋ ತಿಳಿಯದೆಯೋ ಈ ರೀತಿಯಲ್ಲಿ ಭಿನ್ನ ಭಾವನೆಯನ್ನು ಇಟ್ಟುಕೊಳ್ಳುವುದರಿಂದ ಅಪಾರವಾದ ಹಾನಿಯು ಸಂಭವಿಸಿ, ದುರ್ಗುಣಗಳೂ ತಲೆದೋರುವುವು. ಸದ್ಗುಣಗಳು ಸತ್ಯದ ಆಕಾರಗಳೆಂದು ಹೀಗೆ ವರ್ಣಿಸಿರುವುದು ನಮ್ಮ ನೀತಿಶಾಸ್ತ್ರ ಪ್ರಮಾಣಕ್ಕೆ ಸರಿಯಾಗಿಯೇ ಇರುತ್ತದೆ ; ಹೇಗೆಂದರೆ ಸತ್ಯವು ಅಭಿನ್ನ ಭಾವ

ನೆಯನ್ನು ಪೋಷಿಸುತ್ತದೆ ; ಅಸತ್ಯವಾದರೊ ಭಿನ್ನಭಾವನೆಯನ್ನು ಪೋಷಿಸುವುದು.

ಆರ್ಯಗ್ರಂಥಗಳಲ್ಲಿ ವರ್ಣಿಸಿರುವ ಮಹಾಪುರುಷರಲ್ಲೆಲ್ಲಾ ಸತ್ಯಸಂಧತೆಯು ಪ್ರಸಿದ್ಧವಾದೊಂದು ಲಕ್ಷಣವಾಗಿರುವುದು. "ರಾಮೋದ್ವಿರ್ನಾಭಿ ಭಾಷತೇ" ಎಂಬಂತೆ ಮಹಾವೀರರನೇಕರ ಬಾಯಲ್ಲಿ ನನ್ನ ತುಟಿ ಅಸತ್ಯವನ್ನೆಂದೂ ನುಡಿದಿಲ್ಲವೆಂಬ ಮಾತು ಆಗಾಗ ಬರುತ್ತಲೇ ಇರುವುದು. ಶ್ರೀ ಕೃಷ್ಣನು ತಾನು ಕುರುಕ್ಷೇತ್ರದಲ್ಲಿ ಆಯುಧಪಾಣಿಯಾಗುವುದಿಲ್ಲವೆಂದು ವಾಗ್ದಾನಮಾಡಿದ್ದನು, ಮತ್ತು ಶ್ರೀ ಕೃಷ್ಣನು ಅರ್ಜುನನಿಗೆ ಸಹಾಯಮಾಡಬೇಕೆಂದು ಚಾವಟಿಯನ್ನೆತ್ತಿಕೊಂಡು ಭೀಷ್ಮನೆಡೆಗೋಡಿದಾಗ, ಶ್ರೀ ಕೃಷ್ಣನ ಮಾತನ್ನುಳಿಸುವುದಕ್ಕಾಗಿ ಅರ್ಜುನನು ಆ ಸಹಾಯವನ್ನು ತಿರಸ್ಕರಿಸುವನಾದನು. ಹಾಗೆಯೇ ಯುಧಿಷ್ಠಿರನೂ, ತನಗೆ ಅಪಜಯವಾಗುವುದೆಂದು ಹೆದರಿದ್ದಾಗಲೂ ಕೂಡ, ಮಾತು ಹೋಗುವುದೆಂಬ ಶಂಕೆಯಿಂದ, ಕೃಷ್ಣನ ಸಹಾಯವನ್ನು ತೆಗೆದುಕೊಳ್ಳದೇ ಹೋದನು. (ಮಹಾಭಾರತ. ಭೀಷ್ಮಪರ್ವ, ಅ. ೪೫). ಬೇರೊಂದೆಡೆಯಲ್ಲಿ ಬೇರೊಂದು ವಿಚಿತ್ರವು ನಡೆಯಿತು. ಒಂದು ನಿಮಿಷಮಾತ್ರದ ವರೆಗೆ ಯುಧಿಷ್ಠಿರನು ಮಹಾವಿಪತ್ಕಾಲವದೊಂದೊದಗಿದ್ದಾಗ ತನ್ನ ಸತ್ಯವ್ರತವನ್ನು ಮರೆದವನಾಗಿ ದ್ರೋಣನ ಶಸ್ತ್ರ ಸನ್ಯಾಸನಕ್ಕಾಗಿ ಅಸತ್ಯವೊಂದನ್ನು ನುಡಿದೊಡನೆಯೇ, ಯಾವ ಶಕ್ತಿಯ ಪ್ರಭಾವದಿಂದ ಅವನ ರಥವು ಭೂಮಿಯನ್ನು ಸೋಂಕದೆ ಅಂತರಾಳ ಪ್ರದೇಶದಲ್ಲಿಯೇ ಇರುತ್ತಿತ್ತೋ ಆ ಶಕ್ತಿಯು ಕ್ಷಯಿಸಿಹೋಗಿ, ಆ ರಥವು ನೆಲಕ್ಕೆ ಕುಸಿದು ಬೀಳುವಂತಾಯಿತು. (ಮಹಾಭಾರತ. ದ್ರೋಣಪರ್ವ. ಅ. ೧೯೩). ಪಾಂಡವರು ವನವಾಸದಲ್ಲಿರುವಕಾಲದಲ್ಲಿ, ಕೌರವರಮೇಲೆ ಸೈನ್ಯವೊಂದನ್ನು ಕಳುಹಿಸಬಹುದಾಗಿದೆಯೆಂದು ಕೃಷ್ಣನು ಸೂಚಿಸಿದಾಗ, ಯುಧಿಷ್ಠಿರನು ಹಾಗೆ ಮಾಡುವುದು ತಾವು ಹದಿಮೂರು ವರುಷಗಳವರೆಗೂ ದೇಶಭ್ರಷ್ಟರಾಗಿರುವುವೆಂದು ವಾಗ್ದಾನ ಮಾಡಿದುದರ ಅಂತರ್ಭಾವಕ್ಕೆ ವಿರುದ್ಧವಾದುದೆಂದು ಶಂಕಿಸಿ—"ಪಾಂಡು ತನಯರೆಂದೂ ಸತ್ಯಮಾರ್ಗವನ್ನು ತೊರೆಯರು" ಎಂಬ ಉತ್ತರವನ್ನಿತ್ತನು. (ಮಹಾಭಾರತ, ವನಪರ್ವ. ಅ. ೧೮೧). ನಷ್ಟವಾಗುವುದಾದರೂ, ಕೊಟ್ಟ ಮಾ

ತನ್ನುಲ್ಲಂಘಿಸಬಾರದು. ಪ್ರಹ್ಲಾದನು ತ್ರಿಲೋಕಾಧಿಪತ್ಯವನ್ನು ಇಂದ್ರನಿಂದ ಕಸಿದುಕೊಂಡಾಗ, ಇಂದ್ರನು ಬ್ರಾಹ್ಮಣವೇಷವನ್ನು ಧರಿಸಿ, ಆತನ ಶಿಷ್ಯನಾಗಿ ಶುಶ್ರೂಷೆಯನ್ನು ಮಾಡಿದನು. ಕೊನೆಗೆ ಪ್ರಹ್ಲಾದನು ಬಹು ಸಂತುಷ್ಟನಾಗಿ—"ನೀನು ಬೇಡಿದ ವರವನ್ನು ನೀಡುವೆನು" ಎಂದು ಇಂದ್ರನಿಗೆ ಹೇಳಿದನು. ಇಂದ್ರನು ಪ್ರಹ್ಲಾದನ "ಶೀಲವನ್ನು" ಬೇಡಿದನು. ತನ್ನ ಶೀಲವನ್ನು ಕೊಟ್ಟು ಬಿಡುವುದರಿಂದ ತನಗೆ ಪರಮ ಹಾನಿಯುಂಟಾಗುವುದೆಂದು ತೋರಿದ್ದರೂ—ಹಾಗೆ ಹಾನಿಯು ಆಗೇಯಾಯಿತು—ಕೊಟ್ಟ ಮಾತನ್ನುಳಿಸಿಕೊಳ್ಳುವುದಕ್ಕಾಗಿ ಪ್ರಹ್ಲಾದನು ತನ್ನ ಶೀಲವನ್ನು ಕೊಟ್ಟೇ ಬಿಟ್ಟನು. (ಮಹಾಭಾರತ. ಶಾಂತಿಪರ್ವ. ಅ. ೧೨೪).

ಬಲತಾಯಿಯಾದ ಸತ್ಯವತಿಯು ಭೀಷ್ಮಾಚಾರ್ಯರನ್ನು ಕುರಿತು, "ಎಲೈ ಪುತ್ರನೇ, ದೊರೆತನವನ್ನು ಸ್ವೀಕರಿಸಿ ಮದುವೆಮಾಡಿಕೊಂಡು ನನ್ನ ಮನಸ್ಸನ್ನು ಸಂತೋಷ ಪಡಿಸು ; ನಿನ್ನ ಪ್ರತಿಜ್ಞೆಯನ್ನು ಉಪಸಂಹಾರ ಮಾಡಲು ನಾನೇ ಒಪ್ಪಿರುತ್ತೇನೆ" ಎಂದು ಬೇಡಿದಾಗ, ಭೀಷ್ಮಾಚಾರ್ಯರು ಕೊಟ್ಟ ದಿವ್ಯವಾದುತ್ತರವನ್ನು ಯಾರುತಾನೇ ಮರೆಯುವರು? "ತ್ರಿಲೋಕವನ್ನು, ದೇವಲೋಕಾಧಿಪತ್ಯವನ್ನು, ಇನ್ನೂ ಅತಿಶಯವಾದ ಪದವಿಯನ್ನೂ ಕೂಡ ತ್ಯಜಿಸಲು ಸಿದ್ಧನಾಗಿದ್ದೇನೆ, ಸತ್ಯವನ್ನು ಮಾತ್ರ ಎಂದಿಗೂ ತ್ಯಜಿಸೆನು. ಪೃಥ್ವಿಯು ತನ್ನ ಗಂಧ ಗುಣವನ್ನಾದರೂ ತ್ಯಜಿಸೀತು, ಜಲವು ತನ್ನ ದ್ರವಗುಣವನ್ನಾದರೂ ತ್ಯಜಿಸೀತು, ತೇಜಸ್ಸು ತನಗಿರುವ ಶುಕ್ಲ ಭಾಸ್ವರರೂಪವನ್ನಾದರೂ ತ್ಯಜಿಸೀತು, ವಾಯು ತನ್ನ ಸ್ಪರ್ಶಗುಣವನ್ನಾದರೂ ತ್ಯಜಿಸೀತು, ಸೂರ್ಯನು ತನ್ನ ತೇಜಸ್ಸನ್ನಾದರೂ ತ್ಯಜಿಸಾನು, ಅಗ್ನಿಯು ತನ್ನ ದಾಹಶಕ್ತಿಯನ್ನು, ಚಂದ್ರನು ತನ್ನ ಶೀತಕಿರಣಗಳನ್ನು, ಆಕಾಶವು ತನ್ನ ಶಬ್ದ ಗುಣವನ್ನು, ವೃತ್ರಾರಿಯು ತನ್ನ ಶೌರ್ಯವನ್ನು, ಯಮಧರ್ಮರಾಜನು ನಿಷ್ಪಕ್ಷಪಾತವನ್ನು ಬಿಟ್ಟರೂ ಬಿಡಬಹುದು ; ನಾನಾದರೊ ಸತ್ಯವನ್ನು ಬಿಡೆನು" ಎಂದು ಭೀಷ್ಮಾಚಾರ್ಯರು ಹೇಳುವರಾದರು. (ಮಹಾಭಾರತ, ಆದಿಪರ್ವ. ಅ. ೧೦೩).

ಮುಂಗೋಪಿಯಾದ, ಮಹಾಗರ್ವಿಷ್ಟನಾದ, ದೂರಾಲೋಚನೆಯಿಲ್ಲದವನಾದ ಕರ್ಣನು, ಪೂರ್ವದ ಇತಿಹಾಸವು ತಿಳಿಸುವಂತೆ, ಅಭೇದ್ಯವಾದ

ದೊಂದು ಕವಚದೊಡನೆ ಹುಟ್ಟಿದನು. ಪಾಂಡವ ಪಕ್ಷಪಾತಿಗಳಾದ ದೇವತೆಗಳು, ಮುಂದಾಗುವ ಕರ್ಣಾರ್ಜುನರ ಯುದ್ಧದಲ್ಲಿ, ಕರ್ಣನ ಕವಚದ ಪ್ರಭಾವದಿಂದ, ಅರ್ಜುನನು ಪರಾಜಿತನಾದಾನೆಂದು ದಿಗಿಲು ಬಿದ್ದರು. ಕರ್ಣನು ಪ್ರತಿದಿನದಲ್ಲಿಯೂ ಪೂರ್ವಾಭಿಮುಖನಾಗಿ ಕುಳಿತು ಮಧ್ಯಾಹ್ನ ಕಾಲದವರೆಗೂ ವೇದವ್ಯಾಸಂಗವನ್ನು ಮಾಡುವ ಪದ್ಧತಿಯನ್ನಿಟ್ಟುಕೊಂಡಿದ್ದನು; ಮತ್ತು ಆ ವೇದವ್ಯಾಸಂಗ ಕಾಲದಲ್ಲಿ ಬ್ರಾಹ್ಮಣನಾದವನು ತನ್ನಲ್ಲಿರುವುದನ್ನೇನನ್ನು ಬೇಡಿದರೂ ನೀಡುವೆನೆಂದು ಪ್ರತಿಜ್ಞೆಯನ್ನು ಮಾಡಿದ್ದನು. ಹೀಗಿರುವಲ್ಲಿ ದೇವೇಂದ್ರನು ಬಂದಾನೊಂದು ದಿನ, ಮತ್ತಾವ ದಾರಿಯನ್ನೂ ಕಾಣದೆ, ವೃದ್ಧ ಬ್ರಾಹ್ಮಣನ ವೇಷವನ್ನು ಧರಿಸಿ, ಕರ್ಣನ ಮುಂದೆ ಬಂದು ನಿಂತು, ತನಗೊಂದು ದಾನವನ್ನು ಕೊಡಬೇಕೆಂದು ಬೇಡಿದನು. "ನನ್ನಧೀನದಲ್ಲಿರುವ ಪಕ್ಷಕ್ಕೆ ನೀನೇನನ್ನು ಬೇಡಿದರೂ ನೀಡುವೆನು" ಎಂದು ಕರ್ಣನು ತಡಮಾಡದೆ ನುಡಿದನು. "ನಿನ್ನ ಮೈಯ ಮೇಲಿರುವ ಸಹಜವಾದಾ ನಿನ್ನ ಕವಚವನ್ನು ನನಗೆ ಕೊಡುವನಾಗು" ಎಂದು ಇಂದ್ರನು ಬೇಡಿದನು. ಆಗ ಕರ್ಣನು—"ಕೃತ್ರಿಮವಿಲ್ಲದ ಬ್ರಾಹ್ಮಣನು ನೀನಲ್ಲವೆಂಬುದು ನನಗೀಗ ಗೊತ್ತಾಯಿತು; ಪಾಂಡವ ಸಹಾಯಾರ್ಥವಾಗಿ ವೇಷವನ್ನು ಧರಿಸಿ ಬಂದಿರುವ ದೇವೇಂದ್ರನು ನೀನು. ಕೊಟ್ಟ ಮಾತಿನ ಬಹಿರ್ಭಾವವನ್ನೂ ನಾನು ಸನ್ಮಾನಿಸಲೇ ಬೇಕು. ಯುದ್ಧರಂಗದಲ್ಲಿ ನನ್ನನ್ನು ಪ್ರತಿಭಟಿಸುವ ಅರ್ಜುನನನ್ನು ಗೆಲ್ಲುವುದಕ್ಕೆ ಅಭೇದ್ಯವಾದೀ ಕವಚವೊಂದೇ ನನ್ನ ಸಾಧನ ದ್ರವ್ಯವಾಗಿರುವುದು; ಅರ್ಜುನನ ಪರಾಜಯವನ್ನು ನನ್ನ ಪ್ರಾಣಕ್ಕಿಂತಲೂ ಪ್ರಿಯವಾಗಿ ನಾನು ಬಯಸುತ್ತಿರುವೆನು. ಹೀಗಿರುವುದಾದರೂ ನಿನ್ನ ಆಶೆಯನ್ನು ತೀರಿಸುವುದರಲ್ಲಿ ನನ್ನ ಪ್ರಾಣವನ್ನೇ ನಾನು ತೀರಿಸಿಕೊಳ್ಳುವನಾಗುವೆನೆಂದು ನನಗೆ ತಿಳಿದಿದ್ದರೂ, ನೀನು ಕೇಳಿದುದನ್ನು ನೀನು ತೆಗೆದುಕೊಳ್ಳುವನಾಗು" ಎಂದು, ಆ ಜೀವವತ್ತಾದ ತನ್ನ ಕವಚವನ್ನು ತನ್ನ ಕೈಯಿಂದಲೇ ತನ್ನ ಕತ್ತಿಯಿಂದಲೇ ಚೂರು ಚೂರಾಗಿ ತಾನೇ ಕೊಯ್ದು ಕೊಯ್ದು, ಇಂದ್ರನಿಗೆ ಕೊಟ್ಟವನಾಗಿ, ಅರ್ಜುನನನ್ನು ತಾನು ಸೋಲಿಸಿದ್ದರೆ ತನಗೆ ಬರುತ್ತಿದುದಕ್ಕಿಂತಲೂ ಅತಿಶಯವಾದ ದಿವ್ಯತರ ಕೀರ್ತಿಯನ್ನು ಪಡೆದು ಲೋಕದಲ್ಲಿ ದಾನಶೀಲ

ನೆಂಬ ಖ್ಯಾತಿಯನ್ನು ಹೊಂದಿ ಚಿರಸ್ಮರಣೀಯನಾಗಿರುವನು. (ಮಹಾಭಾರತ. ವನಪರ್ವ. ಅ. ೩೦೩-೯).

ಸೂರ್ಯವಂಶೋದ್ಭವನಾದ ದಶರಥಮಹಾರಾಜನನ್ನು ದೇವತೆಗಳು ಅಸುರರನ್ನು ಗೆಲ್ಲುವ ಕಾರ್ಯದಲ್ಲಿ ತಮಗೆ ಸಹಾಯಮಾಡಬೇಕೆಂದು ಕೇಳಿಕೊಂಡರು. ಕ್ಷತ್ರಿಯವೀರನ ತೆರದಲ್ಲಿ ದಶರಥನು ಅಸುರರ ಸಂಗಡ ಯುದ್ಧಮಾಡಿದನು. ಕಿರಿಯ ಹೆಂಡತಿಯಾದ ಕೈಕೆಯಿ ಸಾರಥಿಯಾಗಿದ್ದಳು. ಶಸ್ತ್ರಘಾತದಿಂದ ಮಹಾರಾಜನು ಮೂರ್ಛಾಕ್ರಾಂತನಾಗಲು, ಕೈಕೆಯಿ ಬಹು ಚಮತ್ಕಾರದಿಂದ ರಥವನ್ನು ಆಚೆಗೆ ನಡೆಯಿಸಿಕೊಂಡು ಹೋಗಿ, ತನ್ನ ಗಂಡನ ಪ್ರಾಣವನ್ನು ರಕ್ಷಿಸಿದಳು. ಈ ಪ್ರಾಣರಕ್ಷಣೆಗಾಗಿ ಕೃತಜ್ಞನಾಗಿದ್ದ ಮಹಾರಾಜನು ಎರಡು ವರಗಳನ್ನು ಕೊಡುವೆನೆಂದು ಮಾತು ಕೊಟ್ಟನು. ಸಮಯಬಂದಾಗ ಕೇಳಿಕೊಳ್ಳುವೆನೆಂದು ಕೈಕೆಯಿ ಹೇಳಿದಳು. ದೀರ್ಘಕಾಲಾನಂತರದಲ್ಲಿ, ಮಹಾರಾಜನು ವೃದ್ಧನಾಗಿ, ತನ್ನ ಜ್ಯೇಷ್ಠ ಪುತ್ರನಾದ ಶ್ರೀರಾಮನಿಗೆ ಯೌವರಾಜ್ಯ ಪಟ್ಟಾಭಿಷೇಕವನ್ನು ಮಾಡಬೇಕೆಂದು ನಿಶ್ಚಯಿಸಿದ ಕಾಲದಲ್ಲಿ, ಕೈಕೆಯಿ ತಾನು ಸಂಚಿತ ಮಾಡಿಟ್ಟುಕೊಂಡಿದ್ದ ಎರಡು ವರಗಳನ್ನು ಕೇಳಿದಳು. ಅವು ಬಹು ಕ್ರೂರವಾಗಿದ್ದುವು; ವೃದ್ಧರಾಜನಿಗೆ ಜ್ಯೇಷ್ಠಪುತ್ರನಾಗಿಯೂ ಪ್ರಿಯತಮನಾಗಿಯೂ ಇದ್ದ ಪುರುಷೋತ್ತಮನಾದ ಶ್ರೀರಾಮನು ರಾಜ್ಯಭ್ರಷ್ಟನಾಗಿ ಕಾಡಿಗೆ ಹದಿನಾಲ್ಕು ವರುಷಗಳ ವರೆಗೂ ತೆರಳಬೇಕೆಂತಲೂ, ತನ್ನ ಮಗನಾದ ಭರತನಿಗೆ ಪಟ್ಟಾಭಿಷೇಕವಾಗಬೇಕೆಂತಲೂ ಕೇಳಿಕೊಂಡಳು. ಈ ವರಗಳನ್ನು ಕೊಡುವುದರಿಂದ ತನ್ನ ಪ್ರಾಣವೇ ಹೋಗುವುದೆಂದು ಚೆನ್ನಾಗಿ ತಿಳಿದಿದ್ದರೂ, ದಶರಥನು ತಾನು ಕೊಟ್ಟ ಮಾತನ್ನು ಸಲ್ಲಿಸಿ ಪ್ರಾಣವನ್ನು ಬಿಟ್ಟನು. ರಾಜನಾದ ತನ್ನ ಮಾತು ಹೋಗಿ ಸತ್ಯವು ಹತವಾಗುವುದಕ್ಕಿಂತ ತಾನು ಮಾತಿನಂತೆ ನಡೆದು ಸಾಯುವುದೇ ಲೇಸೆಂದು ಆತನು ಭಾವಿಸಿದನು.

ದೈತ್ಯ ಪ್ರಭುವಾದ ಬಲಿಚಕ್ರವರ್ತಿಯು ಸುರಲೋಕವನ್ನು ಗೆದ್ದು, ಮೂರು ಲೋಕಕ್ಕೆ ಸರ್ವಾಧಿಕಾರಿಯಾದನು. ರಾಜಾಜ್ಞೆಯಿಂದ ಅಶ್ವಮೇಧಯಾಗಕ್ಕೆ ಸಕಲವೂ ಸಿದ್ಧವಾಯಿತು. ವಿಷ್ಣುವು, ಗಿಡ್ಡ ಹುಡುಗನ ರೂಪವನ್ನು ತಳೆದು, ಯಾಗಶಾಲೆಗೆ ಬಂದು, ಮೂರು ಹೆಜ್ಜೆಯಷ್ಟು

ಪ್ರದೇಶವನ್ನು ಬೇಡಿದನು. ಬಲಿಯು ಕೊಡುವೆನೆಂದು ಮಾತು ಕೊಟ್ಟನು. ಬಲಿಯ ಪುರೋಹಿತರಾದ ಶುಕ್ರಾಚಾರ್ಯರು, ಈ ಹುಡುಗನು ನಿನ್ನ ಶತ್ರುವಾದ ವಿಷ್ಣು, ದಾನವನ್ನು ಕೊಡೆನು ಎಂದು ಹೇಳುವನಾಗು ಎಂದರು. "ಪ್ರಹ್ಲಾದನ ಮೊಮ್ಮಗನು ಅಸತ್ಯವನ್ನೆಂದಿಗೂ ನುಡಿಯನು. ಇವನು ವಿಷ್ಣುವೂ ಆಗಲಿ, ನನ್ನ ಶತ್ರುವೂ ಆಗಲಿ, ಕೊಡುವೆನೆಂದುದನ್ನು ಕೊಟ್ಟೇ ಕೊಡುವೆನು," ಎಂದು ಬಲಿಯು ಉತ್ತರವನ್ನಿತ್ತನು. ವಾಮನನು ಮೂರು ಲೋಕಗಳನ್ನು ತನ್ನೆರಡು ಹೆಜ್ಜೆಗಳಿಂದಲೇ ಮುಚ್ಚಿದವನಾಗಿ, ಮೂರನೆಯ ಹೆಜ್ಜೆಗೆ ಸ್ಥಳವನ್ನು ಕೇಳಲು, ಬಲಿಯು ತನ್ನ ತಲೆಯನ್ನು ಕೊಟ್ಟು, ತನ್ನ ಸರ್ವ ರಾಜ್ಯಚ್ಯುತಿಯನ್ನು ಮಹಾಪ್ರಸಾದವಾಗಿ ಯೋಚಿಸಿದನು. ವಿಷ್ಣುವು ಮೆಚ್ಚಿ—"ಸಂಪತ್ತನ್ನು ಕಳೆದುಕೊಂಡರೂ, ಸ್ಥಾನಭ್ರಷ್ಟನಾದರೂ, ಶತ್ರುವಿನಿಂದ ಪರಾಜಿತನಾದರೂ, ಮಿತ್ರರಿಂದ ತೊರೆಯಲ್ಪಟ್ಟರೂ, ತನ್ನ ಗುರುವಿನಿಂದ ಶಾಪಿತನಾದರೂ, ಬಲಿಯು ತನ್ನ ಸತ್ಯವನ್ನು ತೊರೆಯಲಿಲ್ಲ" ಎಂದು ಹೊಗಳಿ ಹರಸಿದನು. ಈಗ ದೇವೇಂದ್ರನಾಗಿರುವ ಪುರಂದರನು ತನ್ನ ಪದವಿಯನ್ನು ಬಿಟ್ಟಕೂಡಲೆ, ಇಂತಹ ಸತ್ಯಾಚರಣೆಗೆ ಪ್ರತಿಫಲವಾಗಿ ಬಲಿಯು, ವಿಷ್ಣುವಿನ ಆಶೀರ್ವಾದದ ಬಲದಿಂದ ಇಂದ್ರಪದವಿಗೆ ಬರುವನೆಂದು ಪುರಾಣಗಳು ಸಾರುವುವು. (ಇಂದ್ರನೆಂಬ ಪದವು ಸ್ವರ್ಗಲೋಕಾಧಿಪತಿಯ ಅಧಿಕಾರದ ಹೆಸರಾಗಿದೆಯೆಂದು ವಿದ್ಯಾರ್ಥಿಯು ತಿಳಿದಿರಲಿ).

ಸತ್ಯವೇ ಬ್ರಹ್ಮವಾಗಿರುವುದರಿಂದ ಬ್ರಹ್ಮಜಿಜ್ಞಾಸುಗಳು ಸತ್ಯವಂತರಾಗಿರಲೇಬೇಕು. ಹೀಗಿರುವುದರಿಂದ ಹುಡುಗರು ಸತ್ಯವ್ರತಾಚರಣೆಯಲ್ಲಿಯೇ ಇರುವವರಾಗಬೇಕು.

## ಶ್ರುತ್ಯಾದಿ ವಚನಗಳು.

ಜಾಯಮಾನೋ ಬ್ರಾಹ್ಮಣಸ್ತ್ರಿಭಿರ್ ಋಣೈ ಋಣವಾನ್ ಜಾಯತೇ -ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ ಸ್ವಾಧ್ಯಾಯೇನ ಋಷಿಭ್ಯಃ ||

(ಮನುಸ್ಮೃತಿಯ ಆರನೆಯ ಅಧ್ಯಾಯದ ಮೂವತ್ತಾರನೆಯ ಶ್ಲೋಕಕ್ಕೆ ಕುಲ್ಲೂಕನು ಬರೆದಿರುವ ವ್ಯಾಖ್ಯಾನದಲ್ಲಿ ಉದಾಹರಿಸಿರುವ ವೇದ ಭಾಗ).

"ಬ್ರಾಹ್ಮಣನು ಹುಟ್ಟುವಾಗಲೇ ಮೂರು ಋಣಗಳನ್ನುಳ್ಳವನಾಗಿ ಹುಟ್ಟುವನು. ಯಜ್ಞ ಋಣವೇ ದೇವ ಋಣ; ಪ್ರಜಾ ಋಣವೇ ಪಿತೃ ಋಣ ; ವೇದವ್ಯಾಸಂಗವೇ ಋಷಿ ಋಣ."

ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್ |
ಅನಪಾಕೃತ್ಯ ಮೋಕ್ಷಂ ತು ಸೇವಮಾನೋ ವ್ರಜತ್ಯಧಃ ||
ಅಧೀತ್ಯ ವಿಧಿವದ್ವೇದಾನ್ ಪುತ್ರಾಂಶ್ಚೋತ್ಪಾದ್ಯ ಧರ್ಮತಃ |
ಇಷ್ಟ್ವಾ ಚ ಶಕ್ತಿತೋ ಯಜ್ಞೈರ್ಮನೋ ಮೋಕ್ಷೇ ನಿವೇಶಯೇತ್ ||

(ಮನುಸ್ಮೃತಿ. ಅ. ೬. ಶ್ಲೋ. ೩೫, ೩೬).

"ಮೂರೂ ಸಾಲಗಳನ್ನು ತೀರಿಸಿದಮೇಲೆ ಮೋಕ್ಷದ ಕಡೆಗೆ ಮನಸ್ಸನ್ನು ತಿರುಗಿಸುವವನಾಗಲಿ. ಮೂರೂ ಸಾಲಗಳನ್ನು ತೀರಿಸದೆಯೇ ಮೋಕ್ಷವನ್ನಪೇಕ್ಷಿಸುವಾತನು ಕೆಳಕ್ಕೆ ಬೀಳುವನು.

"ವಿಧಿವತ್ತಾಗಿ ವೇದಗಳನ್ನು ಪಠಿಸಿ, ಧರ್ಮನಿರತನಾಗಿ ಪುತ್ರರನ್ನು ಹುಟ್ಟಿಸಿ, ಶಕ್ತ್ಯನುಸಾರವಾಗಿ ಯಜ್ಞಗಳನ್ನು ಮಾಡಿ, ಮೋಕ್ಷವನ್ನು ಚಿಂತಿಸುವವನಾಗಲಿ."

ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ |

.......................................................

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ |
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ||

(ಭಗವದ್ಗೀತೆ, ಅ. ೩, ಶ್ಲೋ. ೧೧, ೧೬).

"ಪರಸ್ಪರವಾಗಿ ಸಹಾಯ ಮಾಡುತ್ತಾ ನೀವೆಲ್ಲರೂ ಪರಮ ಶ್ರೇಯಸ್ಸನ್ನು ಪಡೆಯುವರಾಗುತ್ತೀರಿ.

"ಈ ಪ್ರಕಾರವಾಗಿ ಸುತ್ತುವಂತೆ ಮಾಡಿಟ್ಟಿರುವ ಸಂಸಾರ ಚಕ್ರವನ್ನು ಸುತ್ತಿಸುವುದರಲ್ಲಿ ಆವನು ಸಹಾಯಮಾಡುವುದಿಲ್ಲವೋ, ಅವನು

ಅಘಾಯುವಾಗಿಯೂ ಇಂದ್ರಿಯಾರಾಮನಾಗಿಯೂ ಆಗಿ, ಅವನ ಬಾಳು, ಎಲೈ ಪಾರ್ಥನೇ, ವ್ಯರ್ಥವಾಗುವುದು."

ಸತ್ಯಂ ಸತ್ಸು ಸದಾ ಧರ್ಮಃ ಸತ್ಯಂ ಧರ್ಮಸ್ಸನಾತನಃ|
ಸತ್ಯಮೇವ ನಮಸ್ಯೇತ ಸತ್ಯಂ ಹಿ ಪರಮಾ ಗತಿಃ ||
ಸತ್ಯಂ ಧರ್ಮ ಸ್ತಪೋ ಯೋಗಃ ಸತ್ಯಂ ಬ್ರಹ್ಮ ಸನಾತನಂ |
ಸತ್ಯಂ ಯಜ್ಞಃ ಪರಃ ಪ್ರೋಕ್ತಃ ಸರ್ವಂ ಸತ್ಯೇ ಪ್ರತಿಷ್ಠಿತಂ ||

.................................................

ಸತ್ಯಂ ನಾಮಾವ್ಯಯಂ ನಿತ್ಯಮವಿಕಾರಿ ತಥೈವಚ |
ಸರ್ವಧರ್ಮಾವಿರುದ್ಧೇನ ಯೋಗೇನೈತದವಾಪ್ಯತೇ ||
ಸತ್ಯಂಚ ಸಮತಾ ಚೈವ ದಮಶ್ಚೈವ ನ ಸಂಶಯಃ |
ಅಮಾತ್ಸರ್ಯಂ ಕ್ಷಮಾಚೈವ ಹ್ರೀಸ್ತಿತಿಕ್ಷಾ ಽನಸೂಯತಾ ||
ತ್ಯಾಗೋ ಧ್ಯಾನಮಥಾರ್ಯತ್ವಂ ಧೃತಿಶ್ಚ ಸತತಂ ದಯಾ |
ಅಹಿಂಸಾ ಚೈವ ರಾಜೇಂದ್ರ ಸತ್ಯಾಕಾರಾಸ್ತ್ರಯೋದಶ ||

(ಮಹಾಭಾರತ, ಅನುಶಾಸನಪರ್ವ, ಅ. ೧೬೨).

"ಸತ್ಯವು ಸಜ್ಜನರಿಗೆ ಸದಾ ಧರ್ಮವಾಗಿರುತ್ತದೆ, ಸತ್ಯವೇ ಸನಾತನಧರ್ಮ ; ಸತ್ಯವನ್ನೇ ಸನ್ಮಾನಿಸಿರಿ ; ಸತ್ಯವೇ ಪರಮಗತಿ ; ಸತ್ಯವೇ ಧರ್ಮ, ತಪಸ್ಸು, ಯೋಗ ; ಸತ್ಯವೇ ಸನಾತನ ಬ್ರಹ್ಮ ; ಸತ್ಯವೇ ಸರ್ವೋತ್ಕೃಷ್ಟ ಯಜ್ಞ ; ಸರ್ವವೂ ಸತ್ಯದಲ್ಲಿಯೇ ಪ್ರತಿಷ್ಠಿತವಾಗಿರುವುದು.

"ಸತ್ಯವು ಅವ್ಯಯಂ ನಿತ್ಯಂ ಅವಿಕಾರಿ ಎಂದೆನಿಸಿಕೊಂಡಿರುವುದರ ಹೆಸರು. ಸರ್ವ ಧರ್ಮಕ್ಕೂ ಅವಿರುದ್ಧವಾಗಿರುವ ಯೋಗದಿಂದ ಸತ್ಯವನ್ನು ಪಡೆಯಬೇಕಾಗಿದೆ.

"ಸತ್ಯ (truthfulness), ಸಮತೆ (impartiality), ದಮ (self-control), ಅಮಾತ್ಸರ್ಯ, ಕ್ಷಮ, ಹ್ರೀ (modesty), ತಿತಿಕ್ಷೆ (endurance), ಅನಸೂಯೆ, ತ್ಯಾಗ (charity), ಧ್ಯಾನ (thoughtfulness), ಆರ್ಯತ್ವ (disinterested philanthropy), ಧೃತಿ (self-possession), ಯಾವಾಗಲೂ ದಯೆಯಿಂದ ಕೂಡಿರುವ ಅಹಿಂಸೆ ಇವು ಹದಿಮೂರೂ ಸತ್ಯದ ಆಕಾರಗಳು."

ಚತ್ವಾರ ಏಕತೋ ವೇದಾಃ ಸಾಂಗೋಪಾಂಗಾಸ್ಸವಿಸ್ತರಾಃ |
ಸ್ವಧೀತಾ ಮನುಜವ್ಯಾಘ್ರ ಸತ್ಯಮೇಕಂ ಕಿಲೈಕತಃ ||
(ಮಹಾಭಾರತ. ವನಪರ್ವ. ಅ. ೬೩).

"ಅಂಗೋಪಾಂಗ ಸಹಿತವಾಗಿ ವ್ಯಾಸಂಗಮಾಡಿದ ಚತುರ್ವೇದಗಳನ್ನೆಲ್ಲಾ ಒಂದು ಕಡೆಯಲ್ಲಿಟ್ಟು, ಸತ್ಯವೊಂದನ್ನೇ ಇನ್ನೊಂದು ಕಡೆಯಲ್ಲಿಟ್ಟು ತೂಗಿದರೂ, ಸತ್ಯವೇ ಭಾರವೆನಿಸಿಕೊಳ್ಳುವುದು."

ಆತ್ಮನ್ಯಪಿ ನ ವಿಶ್ವಾಸ ಸ್ತಥಾ ಭವತಿ ಸತ್ಸು ಯಃ |
ತಸ್ಮಾತ್ಸತ್ಸು ವಿಶೇಷೇಣ ಸರ್ವಃ ಪ್ರಣಯ ಮಿಚ್ಛತಿ ||
(ಮಹಾಭಾರತ. ವನಪರ್ವ. ಅ. ೨೯೧).

"ಮಾನವರು ಸಜ್ಜನರಲ್ಲಿಡುವಷ್ಟು ನಂಬಿಕೆಯನ್ನು ತಮ್ಮಲ್ಲಿಯೂ ಇಟ್ಟುಕೊಳ್ಳುವುದಿಲ್ಲ. ಹೀಗಿರುವುದರಿಂದ ಸರ್ವರೂ ಸಜ್ಜನರ ಸಂಗವನಿಚ್ಛಯಿಸುವರು."

ಸತಾಂಸದಾಶಾಶ್ವತಧರ್ಮವೃತ್ತಿಃ ಸಂತೋನಸೀದಂತಿ ನಚ ವ್ಯಥಂತೇ|
ಸತಾಂ ಸದ್ಭಿರ್ನಾಫಲಃ ಸಂಗಮೋಽಸ್ತಿ ಸದ್ಭ್ಯೋಭಯಂ ನಾನುವರ್ತಂತಿಸಂತಃ ||
ಸಂತೋಹಿ ಸತ್ಯೇನ ನಯಂತಿ ಸೂರ್ಯಂ ಸಂತೋ ಭೂಮಿಂ ತಪಸಾ ಧಾರಯಂತಿ |
ಸಂತೋ ಗತಿರ್ಭೂತಭವ್ಯಸ್ಯ ರಾಜನ್ ಸತಾಂ ಮಧ್ಯೇನಾವಸೀದಂತಿ ಸಂತಃ ||
(ಮಹಾಭಾರತ. ವನಪರ್ವ, ಅ. ೨೯೧).

"ಸಜ್ಜನರು ಸದಾ ಶಾಶ್ವತ ಧರ್ಮವೃತ್ತಿಯಲ್ಲಿರುತ್ತಾರೆ ; ಸಜ್ಜನರು ತಪ್ಪುವುದೂ ಇಲ್ಲ, ವ್ಯಥೆಪಡುವುದೂ ಇಲ್ಲ ; ಸಜ್ಜನರ ಸಂಗವೆಂದೂ ನಿಷ್ಫಲವಾಗದು ; ಸಜ್ಜನರು ಸಜ್ಜನರಲ್ಲಿ ಭಯವಿಡರು.

"ಸಜ್ಜನರು ತಮ್ಮ ಸತ್ಯದ ಪ್ರಭಾವದಿಂದ ಸೂರ್ಯನನ್ನು ನಡೆಯಿಸುವರು ; ಸಜ್ಜನರು ತಮ್ಮ ತಪಃಪ್ರಭಾವದಿಂದ ಭೂಮಿಯನ್ನು ಧರಿಸಿರುತ್ತಾರೆ ; ಸಜ್ಜನರು ಭೂತಕ್ಕೂ ಭವ್ಯಕ್ಕೂ ಮಾರ್ಗದರ್ಶಿಗಳಾಗಿದ್ದಾರೆ. ಎಲೈ ರಾಜನೆ, ಸಜ್ಜನರು ಸಜ್ಜನರಮಧ್ಯದಲ್ಲಿ ಕಷ್ಟಪಡುವುದೇ ಇಲ್ಲ."

(ಯತಃ ಪ್ರಭವತಿ) ಕ್ರೋಧಃ ಕಾಮೋವಾ ಭರತರ್ಷಭ |
ಶೋಕಮೋಹೌ ವಿಧಿತ್ಸಾ ಚ ಪರಾಸುತ್ವಂ ಚ ತದ್ವದ ||
ಲೋಭೋ ಮಾತ್ಸರ್ಯಮೀರ್ಷ್ಯಾಚ ಕುತ್ಸಾಽಸೂಯಾ ಕೃಪಾ ಭಯಂ |
ತ್ರಯೋದಶೈತೇತಿಬಲಾಃ ಶತ್ರವಃ ಪ್ರಾಣಿನಾಂ ಸ್ಮೃತಾಃ ||
(ಮಹಾಭಾರತ. ಶಾಂತಿಪರ್ವ. ಅ. ೩೩).

"ಕ್ರೋಧ, ಕಾಮ, ಶೋಕ (dejection), ಮೋಹ (delusion), ವಿಧಿತ್ಸ (cynicism), ಪರಾಸುತ್ವ (wrongful activity), ಲೋಭ (greed), ಮಾತ್ಸರ್ಯ (emulation), ಈರ್ಷೆ (envy), ಕುತ್ಸ (worry), ಅಸೂಯೆ (malice), ಅಕೃಪ, ಭಯ—ಇವು ಹದಿಮೂರೂ, ಎಲೈ ರಾಜನೆ, ಪ್ರಾಣಿಗಳಿಗೆ ಬಲವಾದ ಶತ್ರುಗಳು."

ಯಸ್ಯ ವಿದ್ವಾನ್ ಹಿ ವದತಃ ಕ್ಷೇತ್ರಜ್ಞೋ ನಾಭಿಶಂಕತೇ |
ತಸ್ಮಾನ್ನದೇವಾಃ ಶ್ರೇಯಾಂಸಂ ಲೋಕೇಽನ್ಯಂ ಪುರುಷಂ ವಿದುಃ||
(ಮನುಸ್ಮೃತಿ. ಅ. ೮, ಶ್ಲೋ. ೯೬).

"ಯಾವನ ಮಾತಿನಲ್ಲಿ ಸರ್ವಜ್ಞನಾದ ಭಗವಂತನಿಗೂ ಸಂದೇಹವೆಂಬುದೇ ಇಲ್ಲವೋ ಅಂತಹನಿಗಿಂತ ಉತ್ತಮನನ್ನು ಜಗತ್ತಿನಲ್ಲಿ ದೇವತೆಗಳೂ ಕಾಣರು."

ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ |
ಮಾ ಕರ್ಮಫಲಹೇತುರ್ಭೂರ್ಮಾತೇ ಸಂಗೋಽಸ್ತ್ವಕರ್ಮಣಿ ||
(ಭಗವದ್ಗೀತೆ. ಅ. ೨. ಶ್ಲೋ. ೪೭).

"ಕರ್ಮಕ್ಕೆ ಮಾತ್ರ ನೀನು ಅಧಿಕಾರಿ, ಕರ್ಮಫಲಕ್ಕಲ್ಲ; ಆದುದರಿಂದ ಕರ್ಮಫಲವು ನಿನ್ನ ಉದ್ದೇಶ್ಯವಾಗದಿರಲಿ, ಅಕರ್ಮದ ಸಂಗವೂ ನಿನಗೆ ಬೇಡ."

ಋತಂ ಸತ್ಯಂ ಪರಂ ಬ್ರಹ್ಮ.
(ನೃಸಿಂಹೋತ್ತರತಾಪಿನಿ ಉಪನಿಷತ್ತು. ೧. ೬).

"ಋತವೂ ಸತ್ಯವೂ ಪರಬ್ರಹ್ಮ."

---

ಇದು ಸನಾತನಧರ್ಮ ದೀಪಿಕೆಯಲ್ಲಿ ನೀತಿಪ್ರಕಾಶಿಕೆಯೆಂಬ ತೃತೀಯ ಭಾಗದಲ್ಲಿ ಧರ್ಮಾಧಾರ ನಿರೂಪಣವೆಂಬ ಪಂಚಮಾಧ್ಯಾಯ.



# ತೃತೀಯ ಭಾಗ.

## ಷಷ್ಠಾಧ್ಯಾಯ.



### ಭಾವಾನಂದ ವಿಚಾರ.



ಈಶ್ವರನು ಸಚ್ಚಿದಾನಂದ ಮೂರ್ತಿಯೆಂಬುದನ್ನು ನಾವು ತಿಳಿದಿದೇವೆ. ಮಾನವನು ಈಶ್ವರನಿಂದ ಹುಟ್ಟಿದವನಾದುದರಿಂದ ಇವನಲ್ಲಿಯೂ ಈ ಮೂರೂ ಲಕ್ಷಣಗಳಿರುವುವು. ಜೀವಾತ್ಮನು ಸಾಂದ್ರವಾದ ಉಪಾಧಿಗಳಿಂದ ಆವೃತನಾದಾಗ ಆನಂದವೆಂಬ ಲಕ್ಷಣವದು ಹೊರಹೊರಕ್ಕೆ ಇಷ್ಟಸಿದ್ಧಿಗಾಗಿ ಹೋಗುವುದು, ಮತ್ತು ಬಾಹ್ಯಪ್ರಪಂಚದ ವಸ್ತುಗಳಲ್ಲಿ ಸೇರಿ, ಅನುಭವಗಳನ್ನು ಅರ್ಜಿಸಿಕೊಳ್ಳುವುದಕ್ಕೆ ಯತ್ನಿಸುವುದು. ಹೊರಕ್ಕೆ ಹೋಗುವಂತೆ ಅವುವು ಮಾಡುವುವೋ ಅವೇ ಕಾಮಗಳು, ಮತ್ತು ಈ ಕಾಮಗಳೇ ಜೀವಾತ್ಮನನ್ನು ಸುಖವನ್ನುಂಟುಮಾಡುವ ವಸ್ತುವಿಗೆ ಕರೆದೊಯ್ದು ತಗಲಿಸುತ್ತವೆ. ಜೀವಾತ್ಮನು ಅದೇ ಬಗೆಯ ವಸ್ತುವಿನಲ್ಲಿ ಪುನಃ ಪುನಃ ಸೇರುವಂತೆ ಆದಾಗ, ರಾಗವೆಂಬುದು ಅಥವಾ ಇಷ್ಟವೆಂಬುದುಹುಟ್ಟುತ್ತದೆ. ಕಾಮವು ಜೀವಾತ್ಮನನ್ನು ದುಃಖವನ್ನುಂಟುಮಾಡುವ ವಸ್ತುವಿಗೆ ಸೇರಿಸಿ, ಜೀವಾತ್ಮನು ಅಂತಹ ವಸ್ತುವಿನ ಸಂಗವನ್ನು ಅಪೇಕ್ಷಿಸದಂತೆ ಆದಾಗ, ದ್ವೇಷ ಅಥವಾ ಅನಿಷ್ಟವೆಂಬುದು ಹುಟ್ಟುತ್ತದೆ. ರಾಗ (ಮೋಹ)ವೆಂಬುದು ಜೀವಾತ್ಮನನ್ನು ವಿಷಯದೊಡನೆ ಸೇರಿಸುತ್ತದೆ; ದ್ವೇಷವೆಂಬುದು ಜೀವಾತ್ಮನನ್ನು ವಿಷಯದೆಡೆಯಿಂದ ಅಗಲಿಸುತ್ತದೆ.

ಜೀವಾತ್ಮನು ಈ ರಾಗದ್ವೇಷ ವಿಷಯಗಳನ್ನು ಚೆನ್ನಾಗಿ ಮನನ ಮಾಡಿ, ಕ್ರಮಕ್ರಮವಾಗಿ ತನ್ನ ಕಾಮಗಳು ಅಥವಾ ಭಾವಗಳು (emotions) ತನ್ನ ವಶವರ್ತಿಗಳಾಗುವಂತೆ ಮಾಡಿಕೊಳ್ಳುವನಾಗುತ್ತಾನೆ. ಬುದ್ಧಿಗೆ ವಶವರ್ತಿಗಳಾದ ಮತ್ತು ಈಶ್ವರ ಸಂಕಲ್ಪಕ್ಕೆ ಅವಿರೋಧಿಗಳಾದ ಕಾಮಗಳು ಅಥವಾ ಭಾವಗಳು ಉತ್ತರತ್ರದಲ್ಲಿ ಸದ್ಗುಣಗಳಾಗುವುವು, ಮತ್ತು ಕಾಮಗಳ ಅಥವಾ ಭಾವಗಳ (emotions) ಕೃಷಿಯಿಂದ ಮಾನವನು ಗುಣಸಂಪನ್ನನಾಗುತ್ತಾನೆ. ಪ್ರೀತಿಭಾವವನ್ನು (emotion of love) ಮಾನವನು ಕೃಷಿಮಾಡಿದ ಹಾಗೆಲ್ಲಾ, ಅವನ ಮಿತ್ರಮಂಡಲಿಯು ಬಳೆಯುತ್ತಲೇ ಹೋಗುತ್ತದೆ; ತನ್ನ ಕುಟುಂಬದವರನ್ನು ಪ್ರೀತಿಸುತ್ತಿದ್ದವನು ತನ್ನ ಗುಂಪಿನವರನ್ನೆಲ್ಲಾ ಪ್ರೀತಿಸುವವನಾಗುತ್ತಾನೆ ; ತನ್ನ ಗುಂಪಿನವರನ್ನೆಲ್ಲಾ ಪ್ರೀತಿಸುತ್ತಿದ್ದವನು ತನ್ನ ಜನಾಂಗಕ್ಕೆ ಸೇರಿದವರನ್ನೆಲ್ಲಾ ಪ್ರೀತಿಸುವವನಾಗುತ್ತಾನೆ ; ತನ್ನ ಜನಾಂಗದವರನ್ನೆಲ್ಲಾ ಪ್ರೀತಿಸುತ್ತಿದ್ದವನು ಮಾನವ ಕುಲವನ್ನೆಲ್ಲಾ ಪ್ರೀತಿಸುವವನಾಗುತ್ತಾನೆ. ಈ ಪ್ರೀತಿಯೆಂಬುದು ಇವನ ಸಹಜ ಲಕ್ಷಣವಾದ ಆನಂದ ಭಾಗವನ್ನು ಹೆಚ್ಚು ಹೆಚ್ಚಾಗಿ ಪ್ರದರ್ಶಿಸುತ್ತಾ ಹೋಗುವುದು. ಈ ಆನಂದವೆಂಬುದು ಅಭಿನ್ನ ಭಾವನೆಯಲ್ಲಿ ತೃಪ್ತಿಯನ್ನು ಹೊಂದುವುದು.

ಜೀವಾತ್ಮನ ಬಳೆವಳಿಗೆಯು ಈಗ ನಮ್ಮನ್ನು ನಿವೃತ್ತಿಮಾರ್ಗದಲ್ಲಿ ಒಯ್ಯುತ್ತಿದೆಯೆಂಬುದನ್ನು ನಾವು ತಿಳಿದಿದೇವೆ ; ಎಂದರೆ ತಂತಮ್ಮೊಳಗೂ ಈಶ್ವರನೊಡನೆಯೂ ಭಿನ್ನ ಜೀವಗಳು ಅಭಿನ್ನ ಭಾವನೆಯಿಂದ ನಡೆದುಕೊಳ್ಳುವಂತೆ ಈಶ್ವರ ಸಂಕಲ್ಪದಿಂದಾಗುತ್ತಿರುವುದು. ಈ ಅಭಿನ್ನ ಜ್ಞಾನದಲ್ಲಿ ಆನಂದವೆಂಬುದು ನೆಲೆಗೊಂಡಿರುವುದರಿಂದ ಖುತವೂ ಸುಖವೂ ಪ್ರತ್ಯೇಕಿಸಲ್ಪಡಲಾರದುವುಗಳಾಗಿವೆ. ಸನಾತನಧರ್ಮವು ಈ ತತ್ವವನ್ನು ಪದೇ ಪದೇ ಬೋಧಿಸುತ್ತದೆ. "ಬ್ರಹ್ಮನು ಆನಂದಮಯನು" ; ಆದುದರಿಂದ ಜೀವಾತ್ಮನೂ, ಬ್ರಹ್ಮಸ್ವರೂಪಿಯಾದುದರಿಂದ, ಆನಂದಮಯನಾಗಿರುತ್ತಾನೆ ; ತನ್ನ ಏಳಿಗೆಯನ್ನು ತೊರೆದಾಗ, ಈಶ್ವರ ಸಂಕಲ್ಪಕ್ಕೆ ವಿರೋಧವಾಗಿ ನಡೆದಾಗ, ಅನೃತಮಾರ್ಗಕ್ಕೆ ಬಿದ್ದಾಗ, ಜೀವಾತ್ಮನು ಅಸುಖಿಯಾಗುವನು.

## ಶ್ರುತ್ಯಾದಿವಚನಗಳು.

ಬ್ರಹ್ಮೈವೇದಂ ಸರ್ವಂ ಸಚ್ಚಿದಾನಂದ ರೂಪಂ ।
ಸಚ್ಚಿದಾನಂದರೂಪ ಮಿದಂ ಸರ್ವಂ ॥

(ನೃಸಿಂಹೋತ್ತರತಾಪಿನಿ ಉಪನಿಷತ್ತು. ೭).

"ಸರ್ವಜಗತ್ತೂ ಸಚ್ಚಿದಾನಂದ ರೂಪನಾದ ಬ್ರಹ್ಮನೇ ! ಸಚ್ಚಿದಾನಂದ ರೂಪವಾದುದು ಈ ಸರ್ವ ಜಗತ್ತು."

ಪರಾಂಚಿ ಖಾನಿ ವ್ಯತೃಣತ್ಸ್ವಯಂಭೂಸ್ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ ॥

(ಕಠೋಪನಿಷತ್ IV. I. )

"ಸ್ವಯಂಭುವು ಇಂದ್ರಿಯದ್ವಾರಗಳನ್ನು ಒಳಗಡೆಯಿಂದ ಹೊರಗಡೆಗೆ ಕೊರೆದನು, ಆದುದರಿಂದಲೇ (ಜೀವಾತ್ಮನು) ಹೊರಗಡೆಗೇ ನೋಡುವನು, ಒಳಗಿರುವ ಅಂತರಾತ್ಮನ ಕಡೆಗಲ್ಲ."

ಯದಾ ವೈ ಸುಖಂ ಲಭತೇಽಥಕರೋತಿ ನಾಸುಖಂ ಲಬ್ಧ್ವಾ ಕರೋತಿ ।
ಸುಖಮೇವ ಲಬ್ಧ್ವಾಕರೋತಿ ॥
ಯೋವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಂ।
ಯತ್ರನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸಭೂಮಾ ।
ಅಥಯತ್ರಾನ್ಯತ್ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಂ ಯೋವೈ ಭೂಮಾ ತದಮೃತ ಮಥಯದಲ್ಪಂ ತನ್ಮರ್ತ್ಯಂ ॥ (ಛಾಂದೋಗ್ಯೋಪನಿಷತ್ತು. VII. xxii. 1, xxiii. 1, xxiv. 1.)

"ಸುಖವು ಲಭಿಸುವಾಗ ಜೀವಾತ್ಮನು ಕೆಲಸಮಾಡುವನು, ಸುಖವು ಲಭಿಸಿದ ಹೊರತು ಕೆಲಸ ಮಾಡುವುದೇ ಇಲ್ಲ ; ಸುಖವು ಲಭಿಸಿದಾಗ ಮಾತ್ರ ಕೆಲಸವನ್ನು ಮಾಡುವನು.

"ಅವುದು ಅಂತವಿಲ್ಲದುದೋ ಅದು ಸುಖ ; ಅಂತವಿರುವುದರಲ್ಲಿ ಸುಖವಿಲ್ಲ ; ಅಂತವಿಲ್ಲದುದೊಂದೇ ಸುಖ । ಎಲ್ಲಿ (ಆತ್ಮನು) ಅನ್ಯವಸ್ತು

ವನ್ನು ಕಾಣುವುದಿಲ್ಲವೊ, ಅನ್ಯವಸ್ತುವನ್ನು ಕೇಳುವುದಿಲ್ಲವೋ, ಅನ್ಯ ವಸ್ತು ಜ್ಞಾನವೇ ಇಲ್ಲವೊ—ಅದೇ ಅಂತವಿಲ್ಲದುದು. ಎಲ್ಲಿ (ಆತ್ಮನು) ಅನ್ಯವಾದುದನ್ನು ನೋಡುವನೋ ಕೇಳುವನೋ ತಿಳಿವನೋ, ಅದು ಅಂತವುಳ್ಳುದು. ಆವುದು ಅಂತವಿಲ್ಲದುದೋ ಅದಮೃತ ,ಅಂತವಿರುವುದು ಮರ್ತ್ಯ."

ಸುಖಚೈತನ್ಯಸ್ವರೂಪೋ ಽಪರಿಮಿತಾನಂದ ಸಮುದ್ರೋಽವಿಶಿಷ್ಟ ಸುಖಸ್ವರೂಪಶ್ಚಾನಂದ ಇತಿ. (ಸರ್ವಸಾರೋಪನಿಷತ್ತು).

"ಸುಖ ಚೈತನ್ಯಸ್ವರೂಪವಾದುದು ಅಪರಿಮಿತಾನಂದ ಸಮುದ್ರವಾದುದು ಅವಿಶಿಷ್ಟ ಸುಖಸ್ವರೂಪವೂ ಆದುದು ಆನಂದವೆನಿಸಿಕೊಳ್ಳುತ್ತದೆ.

ಇಷ್ಟವಿಷಯೇ ಬುದ್ಧಿಃಸುಖಬುದ್ಧಿರನಿಷ್ಟವಿಷಯೇ ಬುದ್ಧಿರ್ದುಃಖ ಬುದ್ಧಿಃ ‖ (ಸರ್ವಸಾರೋಪನಿಷತ್ತು).

"ಇಷ್ಟವಿಷಯದ ಬುದ್ಧಿಯೆ ಸುಖಬುದ್ಧಿ, ಅನಿಷ್ಟವಿಷಯದ ಬುದ್ಧಿಯೇ ದುಃಖಬುದ್ಧಿ."

ಸರ್ವಾಣಿ ಭೂತಾನಿ ಸುಖೇ ರಮಂತೇ ಸರ್ವಾಣಿ ದುಃಖಸ್ಯ ಭೃಶಂ ತ್ರಸಂತೇ ‖

(ಮಹಾಭಾರತ. ಶಾಂತಿಪರ್ವ. ಅ. ೨೩೧, ಶ್ಲೋ. ೨೫).

"ಸರ್ವಭೂತಗಳೂ ಸುಖದಲ್ಲಿಯೇ ರಮಿಸುವುವು, ಸರ್ವವೂ ದುಃಖಕ್ಕೆ ಬಹುಳವಾಗಿ ಹೆದರುವುವು."

ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ |
ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ‖

(ಭಗವದ್ಗೀತೆ. ಅ. ೭, ಶ್ಲೋ. ೨೭).

"ಇಚ್ಛಾದ್ವೇಷಗಳಿಂದ ಹೊರಡುವ ದ್ವಂದ್ವಗಳ ಮೋಹದಿಂದ ಸರ್ವಭೂತಗಳೂ, ಎಲೈ ಪರಂತಪನೇ, ಇಹಲೋಕದಲ್ಲಿ ಪರಾಜಿತರಾಗುವರು."

ಇಚ್ಛಾದ್ವೇಷಸ್ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ |
ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಂ ‖

(ಭಗವದ್ಗೀತೆ. ಅ. ೧೩, ಶ್ಲೋ. ೬).

"ಇಚ್ಛೆ, ದ್ವೇಷ, ಸುಖ, ದುಃಖ, ಶರೀರ, ಚೇತನ (intelligence), ಧೃತಿ—ಇವೇ ಕ್ಷೇತ್ರವೂ ಆಗುವುವು; ಕ್ಷೇತ್ರದ ವಿಕಾರಗಳೂ ಆಗುವುವೆಂದು ಸಂಗ್ರಹವಾಗಿ ತಿಳಿಸಲ್ಪಟ್ಟಿದೆ."

ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ |

(ಭಗವದ್ಗೀತೆ. ಅ. ೩, ಶ್ಲೋ. ೩೭).

"ಕಾಮವೆನ್ನುವುದೂ ಕ್ರೋಧವೆನ್ನುವುದೂ ರಜೋಗುಣ ಸಮುದ್ಭವಗಳು."

ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ |
ತಯೋರ್ನವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ||

(ಭಗವದ್ಗೀತೆ, ಅ. ೩, ಶ್ಲೋ, ೩೪).

"ಪ್ರತೀಂದ್ರಿಯ ವಿಷಯದಲ್ಲಿಯೂ ರಾಗದ್ವೇಷಗಳಿರುವುವು. ಮಾನವನು ಇವುಗಳ ವಶವರ್ತಿಯಾಗದಿರಲಿ; ಏಕೆಂದರೆ ಇವು ಇವನ ಪರಿಸಂಥಿಗಳು."

ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ |
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ||

(ಭಗವದ್ಗೀತೆ. ಅ. ೨, ಶ್ಲೋ. ೬೪).

"ಸುಶಿಕ್ಷಿತನಾದ ಆತ್ಮನಾದರೊ ಸ್ವಾಧೀನಗಳಾದ ಮತ್ತು ರಾಗದ್ವೇಷ ವಿಯುಕ್ತಗಳಾದ ಇಂದ್ರಿಯಗಳೊಡನೆ ವಿಷಯಗಳನ್ನನುಭವಿಸಿ ಚಿತ್ತಶಾಂತಿಯನ್ನು ಹೊಂದುವನಾಗುತ್ತಾನೆ."

ಯಶ್ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ |
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ||

(ಭಗವದ್ಗೀತೆ, ಅ. ೧೬, ಶ್ಲೋ. ೨೩).

"ಯಾವನು ಶಾಸ್ತ್ರವಿಧಿಗಳನ್ನು ಬಿಟ್ಟು ಸ್ವಚ್ಛಂದಚಾರಿಯಾಗಿ ಬಾಳುವನೋ, ಅವನು ಸಿದ್ಧಿಯನ್ನೂ ಹೊಂದುವುದಿಲ್ಲ, ಸುಖವನ್ನೂ ಹೊಂದುವುದಿಲ್ಲ, ಪರಮಗತಿಯನ್ನೂ ಹೊಂದುವುದಿಲ್ಲ."

ಏಕೋ ವಶೀ ಸರ್ವಭೂತಾಂತರಾತ್ಮಾ
ಏಕಂರೂಪಂ ಬಹುಧಾ ಯಃ ಕರೋತಿ |

ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ
ತೇಷಾಂ ಸುಖಂ ಶಾಶ್ವತಂ ನೇತರೇಷಾಂ ॥

(ಕಠೋಪನಿಷತ್ತು. V. 12).

"ಯಾವನಿಗೆ ಸರ್ವವೂ ವಶವಾಗಿದೆಯೋ, ಯಾವನು ಸರ್ವಭೂತಾಂತರಾತ್ಮನಾಗಿರುವನೋ, ಯಾವನು ಒಂದು ರೂಪವನ್ನು ಬಹುವಾಗಿ ಮಾಡುವನೋ, ಅಂತಹನನ್ನು ಯಾರು ಆತ್ಮನಲ್ಲಿಯೇ ಕಾಣುತ್ತಾರೋ, ಅಂತಹ ಧೀರರಿಗೇ ಶಾಶ್ವತಸುಖ, ಇತರರಿಗೆ ಇಲ್ಲ."

---

ಇದು ಸನಾತನ ಧರ್ಮದೀಪಿಕೆಯಲ್ಲಿ ನೀತಿಪ್ರಕಾಶಿಕೆಯೆಂಬ ತೃತೀಯಭಾಗದಲ್ಲಿ ಭಾವಾನಂದ ವಿಚಾರವೆಂಬ ಷಷ್ಟಾಧ್ಯಾಯ.



# ತೃತೀಯ ಭಾಗ.

## ಸಪ್ತಮಾಧ್ಯಾಯ.



## ಆತ್ಮಹಿತ ಧರ್ಮ ವಿವರಣೆ.

---




ವಾತ್ಮನು ತನ್ನ ಸುತ್ತಲೂ ಇರುವ ಸರ್ವಭೂತಗಳಿಗೂ ಸಂಬಂಧಪಟ್ಟಿರುವುದನ್ನೂ, ಸರ್ವಭೂತಗಳಲ್ಲಿಯೂ ಮಾನವನು ಮಿತ್ರನಂತೆ ನಡೆದುಕೊಳ್ಳಬೇಕೆಂದು ನೀತಿ ಶಾಸ್ತ್ರವು ನಿರೂಪಿಸುವುದೆಂಬುದನ್ನೂ ನಾವು ತಿಳಿದಿರುತ್ತೇವೆ. ಆದರೆ ಜೀವಾತ್ಮನಿಗೂ ಅವನನ್ನು ಆವರಿಸಿರುವ ಕೋಶ ಅಥವಾ ಶರೀರಗಳಿಗೂ ಇರುವ ಪರಸ್ಪರ ಸಂಬಂಧವು ಅವಿನಾಭೂತಸಂಬಂಧವಾಗಿರುತ್ತದೆ. ಈ ಶರೀರಗಳು ಅನಾತ್ಮದ ಅಥವಾ ಪ್ರಕೃತಿಯ ಅಂಶವಾಗಿವೆ. ತನ್ನನ್ನು ಅನವಕಾಶದಿಂದ ಆವರಿಸಿಕೊಂಡಿರುವ ಈ ಶರೀರಗಳ ವಿಷಯದಲ್ಲಿ ಜೀವಾತ್ಮನು ಋಜುವಾದ ರೀತಿಯಲ್ಲಿ ನಡೆದುಕೊಂಡ ಹೊರತು ತನಗೆ ದೂರವಾಗಿರುವ ಇತರರ ವಿಷಯದಲ್ಲಿ ಸರಿಯಾಗಿ ನಡೆದುಕೊಳ್ಳುವುದಿಲ್ಲವಾಗಿದೆ. ಈ ವಿಷಯವನ್ನು ನಾವು ಮರೆಯದಿರಬೇಕು. ಜೀವಾತ್ಮನ ಬಾಲ್ಯಾವಸ್ಥೆಯಲ್ಲಿ, ಅವನ ಶರೀರಗಳು ಅಥವಾ ಕೋಶಗಳು ಅವನನ್ನು ಸ್ವಾಧೀನಮಾಡಿಕೊಂಡು ಅವನನ್ನು ಬಗೆಬಗೆಯ ತೊಂದರೆಗಳಿಗೆ ಒಯ್ಯುತ್ತವೆ. ಜೀವಾತ್ಮನು ಪ್ರವರ್ಧಮಾನದಶೆಗೆ ಬಂದಹಾಗೆಲ್ಲಾ, ತನ್ನ ಶರೀರಗಳು ತನ್ನವಶ್ಯಗಳಾಗಿರುವಂತೆ ಮಾಡಿಕೊಳ್ಳುತ್ತಾ ಹೋಗುತ್ತಾನೆ. ದಮವೆಂಬ ಮಹಾಸದ್ಗುಣವನ್ನು ತನ್ನಲ್ಲಿ ಬಳೆಯಿಸಿಕೊಳ್ಳುವ ಕಾಲದಲ್ಲಿ ಜೀವಾತ್ಮನು ತನ್ನ ಶರೀರಗಳೊಂದಿಗೆ ಎಷ್ಟೆಷ್ಟೋ ಸಾರಿ ಹೋರಾಡಬೇಕಾಗುತ್ತದೆ. ದಮದಪ್ರಭಾವದಿಂದ ಜೀವಾತ್ಮನು ತನ್ನ ಶರೀರಗಳಿಗೆ ಯಜ

ಮಾನನಾಗುತ್ತಾನೆ. ಜೀವಾತ್ಮನ ಶರೀರಗಳಿಗೇ ವಿಶೇಷವಾಗಿ ಸಂಬಂಧಪಡುವ, ಮತ್ತು ಭಿನ್ನ ಭಿನ್ನ ಜೀವಾತ್ಮರುಗಳಿಗೆ ಹೆಚ್ಚಾಗಿ ಸಂಬಂಧಪಡದ ಈ ಶೀಲಗಳನ್ನು ಅಥವಾ ಸದ್ಗುಣಗಳನ್ನು ಪಾಶ್ಚಿಮಾತ್ಯ ತತ್ವಜ್ಞರು ತಮ್ಮ ನವೀನ ವಿಭಾಗಕ್ರಮಗಳಲ್ಲಿ ಆತ್ಮಹಿತಧರ್ಮಗಳೆಂದು ಕರೆದಿರುವರು. ಈ ಬಗೆಯ ಶೀಲಗಳನ್ನುಳ್ಳ ಮಾನವನು, ಈ ಶೀಲಗಳನ್ನುಂಟಾಗಿಲ್ಲದ ಮಾನವನಿಗಿಂತ, ಇತರರ ವಿಷಯದಲ್ಲಿ ಪ್ರಿಯತರ ಮಿತ್ರಭಾವದಿಂದ ನಡೆದುಕೊಳ್ಳುವನಾಗುತ್ತಾನೆಂಬುವವನ್ನು ಸರ್ವರೂ ತಿಳಿಯಬಲ್ಲವರಾಗಿಯೇ ಇರುತ್ತಾರೆ.

ಆರ್ಯಕುಲ ಧರ್ಮಸಂಸ್ಥಾಪನಾಚಾರ್ಯನಾದ ಮನುವು ದಮವೆಂಬ ಗುಣವು ಅತ್ಯವಶ್ಯಕವಾಗಿರುವುದೆಂದು ಒತ್ತಿಯೊತ್ತಿ ಹೇಳಿ, ಅದರ ವಿಷಯವಾಗಿ ಅಮೂಲ್ಯಗಳಾದ ಕೆಲವು ಬುದ್ಧಿವಾದಗಳನ್ನು ಹೇಳುತ್ತಾನೆ. ಕರ್ಮದ ಬೆನ್ನಿನ ಹಿಂದೆ ಮೂರು ಶಕ್ತಿಗಳಿರುವುವೆಂತಲೂ, ಇವು ಮೂರನ್ನೂ ಚೆನ್ನಾಗಿ ವಶಪಡಿಸಿಕೊಳ್ಳಲೇಬೇಕೆಂತಲೂ ತಿಳಿಸುತ್ತಾನೆ. "ಮನೋವಾಕ್ಕಾಯಗಳತ್ತಣಿಂ ಕರ್ಮಂ ಪುಟ್ಟುಗುಂ" ಎಂದು ಹೇಳಿರುವನು.

ಕಾಮಗಳಿಗೆ ನೆಲೆಯಾದ ಮನೋಮಯಕೋಶವನ್ನು ಸ್ವಾಧೀನಮಾಡಿಕೊಳ್ಳಲೇಬೇಕು. ಇದೇ ಎಲ್ಲಕ್ಕಿಂತಲೂ ಕಷ್ಟವಾದ ಕೆಲಸ. ಸುಖಗಳನ್ನುಂಟುಮಾಡುವ ವಸ್ತುಗಳನ್ನು ಪಡೆಯಬೇಕೆಂಬ ಬಯಕೆಗಳಿಗೊಳಗಾಗಿ ಒದ್ದಾಡುವ ಮನಸ್ಸು, ಕಾಮಿತವಸ್ತುಗಳೆಡೆಗೆ ಓಡಿಯೋಡಿ ಹೋಗುವುದು. ಕಾಮಗಳು ತೃಪ್ತಿಯನ್ನು ಹೊಂದಬೇಕೆಂದು ಸದಾ ಕಾಡಿಸುತ್ತಲೇ ಇರುತ್ತವೆ; ಮತ್ತು ಮನಸ್ಸು, ಅವುಗಳಿಗೆ ಆಳಾಗಿ, ಅವುಗಳಿಗೆ ತೃಪ್ತಿಯನ್ನುಂಟುಮಾಡುವುದಕ್ಕೆ ತಡಕಾಡುವುದು. ಜೀವಾತ್ಮನು ಮನಸ್ಸನ್ನು ಈ ದಾಸ್ಯವೃತ್ತಿಯಿಂದ ಬಿಡಿಸಿ, ಇಂದ್ರಿಯಗಳಿಗೂ ಇಂದ್ರಿಯ ಕರಣಗಳಿಗೂ ಮನಸ್ಸನ್ನೇ ಒಡೆಯನನ್ನಾಗಿ ಮಾಡಿಟ್ಟು, ತನ್ನ ಆಜ್ಞೆಯನ್ನು ಉಲ್ಲಂಘಿಸದೆಯೇ ಇರುವಂತೆ ಮಾಡುವವನಾಗಬೇಕು. ಮನುವು ಹೇಳುವಂತೆ:- "ಈ ಮನಸ್ಸನ್ನು ಜಿತಮಾಡುವುದರಲ್ಲಿ ಪಂಚಪಂಚಗಳೆರಡೂ ಜಿತಗಳಾಗುವುವು." ಪಂಚ ಪಂಚಗಳೆರಡು ಎಂದರೆ ಜ್ಞಾನೇಂದ್ರಿಯಪಂಚವೊಂದು, ಕರ್ಮೇಂದ್ರಿಯ ಪಂಚವೊಂದು.

ಮನಸ್ಸನ್ನು ಆಳುವ ಸಂಕಲ್ಪವನ್ನು ವಿದ್ಯಾರ್ಥಿಯು ಇಟ್ಟುಕೊಳ್ಳು ವನಾಗಲಿ. ಅದು ದುಷ್ಟವಸ್ತುಗಳೆಡೆಗೆ ಓಡಿದರೆ, ಅದನ್ನು ಹಿಂದಕ್ಕೆ ಕರೆ ಯುವವನಾಗಲಿ ; ಸಿಷ್ಟವಸ್ತುಗಳಲ್ಲಿಯೇ ಅದು ನೆಲೆಗೊಳ್ಳುವಂತೆ ಆಜ್ಞೆ ಯನ್ನೀಯಲಿ. ದಮದ ಕೃಷಿಯಲ್ಲಿ ಇದೇ ಪ್ರಥಮಭಾಗ, ಕಷ್ಟತಮ ಭಾಗ, ಮುಖ್ಯತಮಭಾಗ.

ವಾಗ್ಜಯವು ಎರಡನೆಯ ಮೆಟ್ಟಿಲು ; ಮಾತನಾಡುವುದಕ್ಕೆ ಮೊದ ಲು ಯೋಚಿಸಲೇಬೇಕು. ಸಡಗರದ ನುಡಿ ಕೊನೆಯಿಲ್ಲದ ತಂಟೆಗಳಿಗೆ ಸೆಳೆದೊಯ್ಯುತ್ತದೆ. ಅರ್ಜುನನು ಅನೇಕ ವೇಳೆಗಳಲ್ಲಿ ಅವಸರಪಟ್ಟು ಮಾತನಾಡಿ, ಅನೇಕ ಕಷ್ಟಗಳಿಗೆ ಗುರಿಯಾದನು. ತನ್ನ ಮಗನನ್ನು ಕೊಂದ ಜಯದ್ರಥನನ್ನು ಸೂರ್ಯಾಸ್ತಮಯದೊಳಗಾಗಿ ಆ ದಿನ ತಾನು ಕೊಲ್ಲ ದಿದ್ದರೆ ತಾನೇ ಶರೀರತ್ಯಾಗಮಾಡುವೆನೆಂದು ಶಪಥಮಾಡಿಕೊಂಡನು. ಔತು ಕೊಂಡಿದ್ದ ಸ್ಥಳದಿಂದ ಹೊರಕ್ಕೆ ಜಯದ್ರಥನು ಬರುವಂತೆ ಮಾಡುವುದ ಕ್ಕಾಗಿ ಶ್ರೀ ಕೃಷ್ಣನು ತನ್ನ ಚಕ್ರದಿಂದ ಸೂರ್ಯಬಿಂಬವನ್ನು ಅಸ್ತಮ ಯಕಾಲಕ್ಕೆ ಮುಂಚೆ ಮುಚ್ಚಿಡುವ ತೊಂದರೆಯನ್ನು ತೆಗೆದುಕೊಳ್ಳುವಂತೆ ಆಯಿತು. (ಮಹಾಭಾರತ. ದ್ರೋಣಪರ್ವ). ಯುಧಿಷ್ಠಿರನ ಮರ್ಮೋ ದ್ಘಾಟನೆಯ ಮಾತುಗಳಿಂದ ಕುಪಿತನಾಗಿ ವಾಗ್ವಾದವನ್ನು ನಡೆಯಿಸುವಾ ಗಲೂ ಇತರ ವೇಳೆಗಳಲ್ಲಿಯೂ ಅರ್ಜುನನು ದೂರಾಲೋಚನೆಯಿಲ್ಲದೆ ಮಾತನಾಡಿದುದರಿಂದ ತೊಂದರೆಗಳುಂಟಾದುವು. (ಮಹಾಭಾರತ. ಕರ್ಣಪ ರ್ವ. ಅಧ್ಯಾಯ. ೭೦, ೭೧). ಇಷ್ಟುಅಲ್ಲದೆ ಅವಸರದಿಂದಾಡಿದ ಮಾತನ್ನು ಉಳಿಸಿಕೊಳ್ಳಲಾರದೆ ಹೋದುದರಿಂದ ಅರ್ಜುನನಿಗೆ ಮಹಾಪ್ರಸ್ಥಾನದಲ್ಲಿ ಮರಣವೂ ಪ್ರಾಪ್ತವಾಯಿತು. "ಒಂದೇ ಒಂದು ದಿನದಲ್ಲಿ ಶತ್ರುಗಳ ನ್ನೆಲ್ಲಾ ಧ್ವಂಸ ಮಾಡಿಬಿಡುವೆನೆಂದು ಅರ್ಜುನನು ಹೇಳಿಕೊಂಡನು. ತನ್ನ ಶೌರ್ಯದಲ್ಲಿ ಅವನಿಗೆ ಎಷ್ಟೋ ಗೌರವವಿತ್ತು, ಆದರೂ ಮಾಡುವೆನೆಂದಾಡಿ ದುದನ್ನು ಮಾಡಲಾರದೆಯೇ ಹೋದನು. ಆದುದರಿಂದಲೇ ಕೆಳಕ್ಕೊರಗಿ ಯುರುಳಿಹೋದನು" ಎಂದಾಡಿಕೊಂಡರು. (ಮಹಾಭಾರತ. ಮಹಾಪ್ರ ಸ್ಥಾನಿಕಪರ್ವ). ತನ್ನ ನಾಲಗೆಯನ್ನು ತಾನು ಜಯಿಸಿರುವಾತನು ಆತ್ಮಜ ಯದ ಸಾಮಿಪ್ಯವನ್ನೈದಿಯೇ ಇರುತ್ತಾನೆ.

ತನ್ನ ಸಂತೋಷಕ್ಕಾಗಿ ನಮ್ಮನ್ನು ಪಾಪಕೃತ್ಯಗಳಿಗೆ ಸೆಳೆದೊಯ್ಯದಿರುವಂತೆ ನಮ್ಮ ಪಾರ್ಥಿವಶರೀರವೂ ನಮ್ಮ ವಶವರ್ತಿಯಾಗಿಯೇ ಇರಬೇಕು. "ದೇವದ್ವಿಜಗುರುಪ್ರಾಜ್ಞಪೂಜನವೂ, ಶೌಚವೂ, ಆರ್ಜವವೂ ಬ್ರಹ್ಮಚರ್ಯವೂ, ಅಹಿಂಸೆಯೂ ಶಾರೀರತಪಸ್ಸಾಗಿರುವುವು," ಎಂದು ಶ್ರೀಕೃಷ್ಣನು ಹೇಳುತ್ತಾನೆ. (ಭಗವದ್ಗೀತೆ, ಅ. ೧೭, ಶ್ಲೋ. ೧೪). ಶಾರೀರಜಯಕ್ಕೆ ಬಾಲ್ಯವೇ ಸಮಯ ; ಆಗ ಶರೀರವನ್ನು ಬಹು ಸುಲಭವಾಗಿ ವಶಮಾಡಿಕೊಂಡು, ಸರಿಯಾದಮಾರ್ಗಕ್ಕೆ ತಂದುಕೊಳ್ಳಬಹುದು ; ಏಕೆಂದರೆ, ಶರೀರವು ಅಭ್ಯಾಸಾನುವರ್ತಿಯಾಗಿರುತ್ತದೆ; ಮತ್ತು ಮೊಟ್ಟಮೊದಲಲ್ಲಿ ಅದು ಜೀವಾತ್ಮನ ಸಂಕಲ್ಪಕ್ಕೆ ಬಹುಬಲವಾಗಿ ಪ್ರತಿಭಟಿಸಿದರೂ, ಅಲ್ಪಪ್ರಯತ್ನಕ್ಕೇ ವಶವಾಗಿ, ಹಿಂದಿನ ದಾರಿಯಲ್ಲಿ ತೃಪ್ತಿಯಿಂದಲೂ ತಂಟೆ ಮಾಡದೆಯೂ ಹೇಗೆ ಹೋಗುತ್ತಿತ್ತೋ ಹಾಗೆಯೇ ಹೊಸದಾರಿಯಲ್ಲಿಯೂ ಹೋಗುವುದು.

ನಮ್ಮ ಕಷ್ಟಗಳ ಮತ್ತು ದುಃಖಗಳ ಮೂಲಗಳನ್ನು ನಾವು ದಮದಿಂದ ನಾಶಮಾಡಬೇಕು. ಈ ದುಃಖಮೂಲಗಳಲ್ಲಿ ಸ್ವಸುಖಾಪೇಕ್ಷೆಯೊಂದಾಗಿದೆ. ಪಾರ್ಥಿವ ಸುಖಗಳಿಗೂ ಪಾರ್ಥಿವ ಸಂಪತ್ತುಗಳಿಗೂ ನಾವು ದಣಿಯದೆಯೇ ಇರುವ ಅದೊಂದಾಶೆಯನ್ನು ಇಟ್ಟುಕೊಂಡಿರುವುದರಿಂದ ಅನೇಕ ಕ್ಲೇಶಗಳು ಹುಟ್ಟುತ್ತವೆ. ನಿರಾಶೆಯಿಂದಲೇ ಮನಶ್ಶಾಂತಿಯುಂಟಾಗಬೇಕಲ್ಲದೆ ಆಶಾಪೂರ್ತಿಯ ಮಾರ್ಗದಿಂದುಂಟಾಗುವುದೇ ಇಲ್ಲ. ಈ ತತ್ತ್ವವನ್ನು ಮಂಕಿಯೆಂಬಾತನು ಕಂಡುಹಿಡಿಯುವನಾದನು. ಹೇಗೆಂದರೆ, ಧನಾತುರನಾಗಿ ಮಂಕಿಯು ಬಹು ಕಾಲದವರೆಗೂ ತೆಡಕಾಡಿದನು, ಆದರೆ ಆಶಾಭಂಗಕ್ಕೇ ಗುರಿಯಾಗುತ್ತಹೋದನು. ತನ್ನಲ್ಲಿನ್ನೂ ಉಳಿದಿದ್ದ ಧನಶೇಷದಿಂದ, ನೇಗಲಿಗಾಗಿ ಸಾಕಬೇಕೆಂದು ಬುದು ಜತೆಹೋರಿಗಳನ್ನು ಕ್ರಯಕ್ಕೆ ತೆಗೆದುಕೊಂಡನು. ಆ ಹೋರಿಗಳನ್ನು ಕಟ್ಟಿದ್ದ ಹಗ್ಗವು ದಾರಿಯಲ್ಲಿ ಹೋಗುತ್ತಿದ್ದ ಅದೊಂದು ಒಂಟೆಗೆ ಗಂಟುಬಿದ್ದು, ಆ ಎರಡೂ ಹೋರಿಗಳು ದೈವಸಂಕಲ್ಪದಿಂದ ಹತವಾದುವು. ಈ ಕೊಟ್ಟಕೊನೆಯ ಅನಾಹುತವು ಮಂಕಿಯ ಹೃದಯವನ್ನು ವಿಕಸನಮಾಡಿದುದರಿಂದ, ಆಸೆಯೆಂಬುದು ಅವನನ್ನು ಬಿಟ್ಟು ಸ್ವೇಚ್ಛಾಚಾರಿಯಾಗಿ ಹೊರಟೇ ಹೋ

ಯಿತು. ಮಂಕಿಯು ಗಾನಮಾಡತೊಡಗಿದನು. “ಆಶಾಹಿ ಪರಮಂ
ದುಃಖಂ ನೈರಾಶ್ಯಂ ಪರಮಂಸುಖಂ ಎಂಬಂತೆ, ಸುಖವನ್ನು ಬಯಸುವವನು
ಆಶೆಯನ್ನು ತೊರೆಯಬೇಕು. ಬಯಸಿದುದನ್ನೆಲ್ಲಾ ಪಡೆಯುವಾತನೊಬ್ಬ
ನು, ಬಯಕೆಗಳನ್ನೆಲ್ಲಾ ಕಿತ್ತು ಕಿತ್ತು ಬೀಸಾಡುವವನೊಬ್ಬನು—ಇವರಿಬ್ಬ
ರಲ್ಲಿ ಸರ್ವತ್ಯಾಗಿಯಾದ ಎರಡನೆಯವನೇ ಮೊದಲನೆಯವನಿಗಿಂತ ಶ್ರೇಷ್ಠ
ನೆನಿಸಿಕೊಳ್ಳುವನು ಎಂದು ಶುಕಾಚಾರ್ಯರು ಚೆನ್ನಾಗಿ ಹೇಳಿರುವರು;
ಏಕೆಂದರೆ, ಯಾವನೇ ಆಗಲಿ, ಆ ಶಾಂತವನ್ನೆಂದಿಗುಮೈದನು. ಎಲೋ ಜೀ
ವನೆ, ಇಷ್ಟೂದಿನಸ ಲೋಭದ ದಾಸನಾಗಿ ತೊಳಲಿ ಬಳಲಿದೆ; ಈಗಲಾದರೂ
ಒಂದಾವರ್ತಿ ಚಿತ್ತಶಾಂತಿಯು ಮತ್ತು ಬಂಧಮೋಚನದ ಪರಮಾನಂದವನ್ನು
ರುಚಿನೋಡುವವನಾಗು. ದೀರ್ಘಕಾಲ ಮಲಗಿದ್ದನಾದರೂ ಇನ್ನು ಮಲ
ಗೆನು; ಇನ್ನು ಎಚ್ಚರವಾಗಿಯೇ ಇರುತ್ತೇನೆ. ಎಲೋ ಆಶೆಯೇ, ಇನ್ನು
ನೀನು ನನಗೆ ಮೋಸಮಾಡಲಾರೆ. ಯಾವವಿಷಯದಲ್ಲಿ ನನ್ನ ಮನಸ್ಸ
ನ್ನು ನೀನು ನಟ್ಟಿಯೋ, ಅದನ್ನು ಹೊಂದುವುದು ಸಾಧ್ಯವೋ ಅಸಾಧ್ಯವೋ
ಯಾವುದನ್ನೂ ಆಲೋಚಿಸದೆ ದೂರಾಲೋಚನೆಯಿಲ್ಲದೆ, ಅದನ್ನೇ ಅನು
ಸರಿಸಿಹೋಗುವಂತೆ ನನ್ನನ್ನು ನೀನು ಬಲಾತ್ಕರಿಸುತ್ತಲೇ ಇದ್ದೆ, ನಿನಗೆ ಬು
ದ್ಧಿಯೇ ಇಲ್ಲ. ನೀನು ಮೂಢ. ತೃಪ್ತಿಯೇ ಇಲ್ಲದೆ, ಬೆಂಕಿಯಂತೆ, ಇ
ನ್ನೂ ಬೇಕು ಬೇಕು ಎಂದುಕೊಂಡು, ಉರಿಯುತ್ತೀಯೆ. ಆಕಾಶವನ್ನು
ಹೇಗೆ ತುಂಬುವುದಕ್ಕೆ ಆಗುವುದೇ ಇಲ್ಲವೋ, ಹಾಗೆಯೇ ನಿನ್ನನ್ನು ತುಂ
ಬುವುದೂ ಅಸಾಧ್ಯ. ಈ ಹೊತ್ತು ನಾವುನಾವು ಬೇರೆಬೇರೆಯಾಗುತ್ತೇವೆ.
ಎಲೋ ಆಸೆಯೆ, ಈ ಹೊತ್ತಿನಿಂದ ನಿನ್ನಸಹವಾಸಿಯಾಗಿ ನಾನಿರುವುದಿಲ್ಲ.
ನಿನ್ನನ್ನು ಕುರಿತೇ ಆಗಲಿ, ನಿನ್ನ ಪರಿವಾರವನ್ನು ಕುರಿತೇ ಆಗಲಿ ಇನ್ನು
ನಾನು ಯೋಚಿಸುವುದೇ ಇಲ್ಲ. ಕಾಮಕ್ರೋಧಾದಿಗಳೊಡನೆ ನಿನ್ನನ್ನು
ತಳ್ಳಿಬಿಡುತ್ತೇನೆ. ಭಂಗುರಗಳಾದ ಆಶೆಗಳಿಂದ ತೊಳಲುತ್ತಿದ್ದ ನಾನು ಈಗ
ಸಂಪೂರ್ಣವಾದ ಚಿತ್ತಶಾಂತಿಯನ್ನು ಹೊಂದಿರುವೆನು. ಪರಿಪೂರ್ಣವಾದ
ತೃಪ್ತಿಯೊಡನೆ, ಇಂದ್ರಿಯಗಳ ಕಾಟವಿಲ್ಲದೆ, ನನಗೆ ದೊರೆದುದನ್ನು ತಿಂದು
ಕೊಂಡು ಬಾಳುವವನಾಗುತ್ತೇನೆ. ಎಲೋ ಶತ್ರುವೇ, ನಿನ್ನ ಆಶೆಗಳನ್ನು
ಪೂರಯಿಸುವುದಕ್ಕಾಗಿ ಇನ್ನು ನಾನು ಕಷ್ಟಪಡುವುದೇ ಇಲ್ಲ. ನಿನ್ನನ್ನೂ

ನಿನ್ನ ಪರಿವಾರವೆಲ್ಲವನ್ನೂ ದೂರವಮಾಡಿ,ಏಕಕಾಲದಲ್ಲಿಯೇ ಶಾಂತಿಯನ್ನೂ, ಇಂದ್ರಿಯನಿಗ್ರಹವನ್ನೂ, ಕ್ಷಮೆಯನ್ನೂ, ಕರುಣೆಯನ್ನೂ, ಬಂಧವಿಮೋಚನೆಯನ್ನೂ ಹೊಂದುವನಾಗುತ್ತೇನೆ.'' ಈರೀತಿಯಲ್ಲಿ ಮಂಕಿಯು ಕೊಂಚವನ್ನೇ ಕಳೆದು ಎಲ್ಲವನ್ನೂ ಪಡೆದುಕೊಂಡನು.

ಯಯಾತಿ ಮಹಾರಾಜನ ಕಥೆಯನ್ನು ಕೇಳಿರಿ. ಈ ಮಹಾರಾಜನು ವಶ್ಯವಲ್ಲದ ಆಶೆಗೆ ಪರವಶನಾಗಿ, ತನ್ನ ತನುಜನಿಂದಲೇ ಅವನ ಶೋಭಾಯಮಾನವಾದ ದಿವ್ಯಯೌವನವನ್ನು ಕಸಿದುಕೊಂಡು, ತೃಪ್ತವಾಗದ ಆಶಾಪಿಶಾಚಿಯು ಹೊಟ್ಟೆಯ ಬಾಯಿದೆರದ ಚೀಲವನ್ನು ವಿಷಯಭೋಗಗಳಿಂದ ತುಂಬುವೆನೆಂದು ಸಡಗರಪಟ್ಟನು. ಕಥೆಯಿರುವುದು ಹೀಗೆ:—

ಯಯಾತಿ ಮಹಾರಾಜನು ಚಂದ್ರಕುಲತಿಲಕನಾದ ನಹುಷಮಹಾರಾಜನ ಮಗನಾಗಿದ್ದನು. ಇಂದ್ರಿಯಸುಖಗಳಲ್ಲಿ ವಿಶೇಷಾಸಕ್ತನಾಗಿ ಪಾಪಿಷ್ಠನಾದನು. ದೈತ್ಯರಾಜರ ಗುರುಗಳಾದ ಶುಕ್ರಾಚಾರ್ಯರು ಈತನ ಮಾವಂದಿರಾಗಿದ್ದರು. ಯಯಾತಿಯು ದುರಾಚಾರಗಳಿಂದ ಶುಕ್ರಾಚಾರ್ಯರಿಗೆ ಮಹಾಕೋಪವುಂಟಾಯಿತು. ಈ ಕ್ರೂರಕೋಪದ ಪ್ರಭಾವದಿಂದ ಯಯಾತಿಗೆ ಯೌವನಾವಸ್ಥೆಯ ಮಧ್ಯಕಾಲದಲ್ಲಿಯೇ ದಿವ್ಯವಾದ ಯೌವನವೆಲ್ಲಾ ತಟ್ಟನೆ ಮಾಯವಾಗಿ, ಮೈಯೆಲ್ಲಾ ಶುಷ್ಕವಾಗಿ ಪರಮವಾರ್ಧಕವು ಪ್ರಾಪ್ತವಾಯಿತು. ಆಗ ಮಹರ್ಷಿಗಳ ಶುಶ್ರೂಷೆಯನ್ನೆಸಗಿ, ಅವರಿಗೆ ಕರುಣ ಹುಟ್ಟುವಂತೆ ಮಾಡಿಕೊಂಡನು. ಆಗ ಶುಕ್ರಾಚಾರ್ಯರು ಶಾಂತರಾಗಿ, ನಿನ್ನ ಪುತ್ರರಲ್ಲಿ ಯಾವನಾದರೂ ನಿನ್ನ ವಾರ್ಧಕವನ್ನೂ ದೌರ್ಬಲ್ಯವನ್ನೂ ಏಕಸಹಸ್ರ ವರುಷಗಳವರೆಗೆ ತೆಗೆದುಕೊಂಡು, ತನ್ನ ಯೌವನವನ್ನೂ ಆರೋಗದೃಢಗಾತ್ರತೆಯನ್ನೂ ಒಂದು ಸಹಸ್ರವರುಷಂಗಳವರೆಗೆ ನಿನಗೆ ನೀಡುವುದಕ್ಕೆ ಒಪ್ಪುವನಾದರೆ, ನಿನಗೆ ಯೌವನವು ಮರಳಿ ಬರಲಿಯೆಂದು ಅನುಗ್ರಹವನ್ನು ಮಾಡಿದರು. ಯಯಾತಿಯು ತನ್ನ ಐದು ಮಂದಿ ಮಕ್ಕಳನ್ನು ಒಬ್ಬೊಬ್ಬನನ್ನಾಗಿ ಕೇಳುತ್ತ ಬಂದನು. ಐವನೆಯವನಾದ ಕೊನೆಯವನು, ಪುರು ಎಂಬುವನು, ಪರಮಪಿತೃಭಕ್ತಿಯಿಂದ ಕೂಡಿದವನಾದುದರಿಂದ; ತನ್ನ ಯೌವನವನ್ನು ತನ್ನ ತಂದೆಗಿತ್ತು, ತನ್ನ ತಂದೆಯ ವಾರ್ಧಕವನ್ನು ಒಂದು ಸಹಸ್ರವರುಷಗಳವರೆಗೆ ತೆಗೆದುಕೊಳ್ಳುವನಾದನು.

ಒಂದು ಸಾಸಿರ ಬರಿಸಂಗಳವರೆಗೂ ಯಯಾತಿ ಮಹಾರಾಜನು ಪಾರ್ಥಿವ ಪ್ರಪಂಚದ ವೈಭವಗಳನ್ನೆಲ್ಲಾ ಅನುಭವಿಸಿ ತೀರಿಸುವೆನೆಂದು ವಿಷಯ ಸುಖಗಳನ್ನೆಡೆವಿಡದೆ ಸಂಭ್ರಮದಿಂದೊಡಗೂಡಿ ಅನುಸರಿಸುವವನಾದನು. ಇಂದ್ರಿಯಗಳು ಬಳಲಿ ಬೇಸರಪಟ್ಟರೂ, ಸುಖದ ಆಶೆಯು ಬಳೆಯುತ್ತಲೇ ಹೋಯಿತು. ವಿಷಯ ಸುಖಾನುಭವದಿಂದ ವಿಷಯ ಪ್ರಪಂಚದ ಬಯಕೆಗಳು ಬಯಲಾಗಲೆಂದು ಏನೇನನ್ನೂ ಮಾಡಿದರೂ, ಸಕಲವೂ ವ್ಯರ್ಥವೇ ಆಯಿತು. ಚಕ್ರದಲ್ಲಿರುವ ಅರೆಗಾಲುಗಳು ಚಕ್ರವು ತಿರುಗುವಾಗ ಕೊನೆಗಾಣದೆ ಒಂದನ್ನೊಂದೆಂತು ಅನುಸರಿಸುತ್ತಲೇ ಇರುತ್ತವೆಯೋ, ಹಾಗೆಯೇ ಐಹಿಕ ಸುಖಾನುಸರಣೆಯೂ ಕೊನೆಗಾಣದೆ ಹೋಯಿತು. ಕೊಟ್ಟಕೊನೆಗೆ, ಗೊತ್ತಾದ ಸಹಸ್ರ ವರುಷಗಳು ಮುಗಿಯುತ್ತಾ ಬಂದಾಗ, ಮಹಾವೈರಾಗ್ಯವು ಮನದಲ್ಲಿ ಮೊಳೆಯಲು, ಆಶೆಯೆಂಬುದನ್ನು ಧಿಕ್ಕರಿಸಿ ಗೆಲಬೇಕೇ ಹೊರತು ಸಂತೋಷಪಡಿಸಿ ಗೆಲ್ಲುವುದಕ್ಕೆ ಆಗುವುದೇ ಇಲ್ಲವೆಂಬುದನ್ನು ತಿಳಿಯುವವನಾದನು. ತನ್ನ ಮಗನಾದ ಪುರುವನ್ನು ಹತ್ತಿರಕ್ಕೆ ಕರೆದು, ಸಂತೋಷದಿಂದ ತನ್ನ ವಾರ್ಧಕವನ್ನು ತಾನು ಮರಳಿ ಸ್ವೀಕರಿಸಿ, ತಾನನುಭವಿಸುತ್ತಿದ್ದ ಯೌವನವನ್ನೂ ರಾಜ್ಯವನ್ನೂ ಅವನಿಗೆ ಕೊಟ್ಟು,

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ |
ಹವಿಷಾ ಕೃಷ್ಣವರ್ತ್ಮೇವ ಭೂಯಏವಾಭಿವರ್ಧತೇ ||

ಎಂದು ಗಾನಮಾಡುತ್ತ, ವನಕ್ಕೆ ತೆರಳಿದನು.

(ಕಾಮವನ್ನು ಕಾಮೋಪಭೋಗಗಳಿಂದ ಅಣಗಿಸುವುದಕ್ಕಾಗುವುದೇ ಇಲ್ಲ ; ಜ್ವಾಲೆಯು ಆಜ್ಯಾಹುತಿಗಳಿಂದ ಪ್ರಜ್ವಲಿಸುವಂತೆ ಕಾಮವು ಉಪಭೋಗಗಳಿಂದ ವೃದ್ಧಿಯನ್ನೇ ಐದುವುದು, ಎಂಬುದು ಅವನ ಇಹಲೋಕ ಸುಖಾನುಭವದ ಸಾರವಾಗಿತ್ತು).

ಶ್ರೀಕೃಷ್ಣನ ಬಾಯಿಂದ ಬಂದ "ಅಹಿಂಸೆ" ಎಂಬ ಮಾತನ್ನು ಕುರಿತು ಒಂದು ನಿಮಿಷದವರೆಗೆ ಪರ್ಯಾಲೋಚನೆಯನ್ನು ಮಾಡೋಣ. "ಅಹಿಂಸಾ ಪರಮೋ ಧರ್ಮಃ" ಎಂದು ಭೀಷ್ಮಾಚಾರ್ಯರುಸಿರಿರುವರು. ನಾವು ಏನನ್ನೂ ನೋಯಿಸಬಾರದು. ನಮ್ಮ ವರ್ತನವು ಅಹಿಂಸಾಮೂಲವಾಗಿ

ರಬೇಕು, ಹಿಂಸಾಮೂಲವಾಗಕೂಡದು. ಶಾರೀರಜಯವು ಪರಾಹಿಂಸೆಯ ನ್ನೊಳಕೊಂಡಿರುತ್ತದೆ. "ಸರ್ವ ಭೂತದಯೆಯನ್ನೇ ಧರ್ಮವೆನ್ನಾಗಿ ಟ್ಟುಕೊಂಡು ಯಾವನು ಆಚರಿಸುತ್ತಾನೆಯೋ ಅವನೇ ಪರಮ ಸುಖಪದವಿ ಯನ್ನೈದುವನು. ......ತನಗೆ ಕೆಟ್ಟದೆಂದು ತಾನೇ ಭಾವಿಸುವುದನ್ನು ಇತರರಿಗೆಂದೂ ತಾನು ಮಾಡಕೂಡದು" ಎಂದು ಭೀಷ್ಮಾಚಾರ್ಯರು ಹೇಳಿ ರುವರು. ಇದೇ ಸದ್ಧರ್ಮದ ಸೂತ್ರ.

ಜನರು ಆಟಕ್ಕಾಗಿ ಅನೇಕವೇಳೆಗಳಲ್ಲಿ ಇತರರಿಗೆ ಕೇಡನ್ನೆಸಗಿ ತೊಂದರೆಗಳನ್ನುಂಟುಮಾಡುತ್ತಾರೆ. ಯುಧಿಷ್ಠಿರನೂ ದುರ್ಯೋಧನನೂ ಅವರ ಸಹೋದರರೂ ಬಾಲರಾಗಿ ಒಟ್ಟಿಗಿದ್ದುಕೊಂಡು, ವಿದ್ಯಾಭ್ಯಾಸಂಗ ಮಾಡುತ್ತಿದ್ದ ಕಾಲದಲ್ಲಿ, ಅವರೆಲ್ಲರಿಗಿಂತಲೂ ಬಲಶಾಲಿಯಾಗಿದ್ದ ಭೀಮ ನು, ತನಗಿಂತ ದುರ್ಬಲರಾಗಿಯೂ ಚಿಕ್ಕವರಾಗಿಯೂ ಇದ್ದ ಹುಡುಗರ ಮೇಲೆ ತನ್ನ ಪೌರುಷವನ್ನು ಆಟಕ್ಕಾಗಿ ತೋರಿಸುತ್ತಾ ಬಹಳ ತುಂಟಾಟ ಗಳನ್ನು ಮಾಡುತ್ತಿದ್ದನು. ಹಣ್ಣನ್ನು ಕೊಯ್ಯಬೇಕೆಂದು ಅವರಲ್ಲನೇಕ ರು ಮರವನ್ನೇರಿದ್ದಾಗ, ಆ ಮರದ ಬುಡವನ್ನು ಹಿಡಿದು, ಮಾಗಿದ್ದ ಹಣ್ಣು ಗಳಂತೆ ಅವರೆಲ್ಲರೂ ತೊಪತೊಪನೆ ಬೀಳುವವರೆಗೂ ಅಲ್ಲಾಡಿಸುತ್ತಿ ದ್ದನು. ಇದು ಮಹಾ ಕುಚೋದ್ಯವಾಗಿ ತೋರಿ, ಭೀಮನು ಕೇಕುಹಾ ಕುತ್ತಾ ನಗುತ್ತಿದ್ದನು. ಕೆಲವು ಹುಡುಗರಿಗಾದರೋ ನೋವು ಉಂಟಾಗು ತ್ತಿತ್ತು. ಮೈನೋವು ಹಾಗಿರಲಿ, ಮನಸ್ಸೂ ನೊಂದು ಹೋಗುತ್ತಿತ್ತು. ಹಸ್ತಿನಾಪುರದ ಕೋಟೆಯ ಗೋಡೆಯ ಬಳಿಯಲ್ಲಿ ಹರಿಯುತ್ತಿದ್ದ ನದಿ ಯಲ್ಲಿ ಅವರು ಮೈ ತೊಳೆಯುತ್ತಲೂ ಈಜಾಡುತ್ತಲೂ ಇರುವ ವೇಳೆ ಯಲ್ಲಿ, ಭೀಮನು ಅವರ ತಳಭಾಗದಲ್ಲಿ ನೀರಿನೊಳಗೇ ಈಜಿಕೊಂಡು ಬಂ ದು, ಅವರಲ್ಲಿ ಕೆಲರನ್ನು ಬಗಲಲ್ಲಿ ಬಿಗಿದವನಾಗಿ, ನೀರಿನೊಳಗೆ ಮುಳು ಗಿ, ಸೆಳೆದೊಯ್ದು, ಉಸುರಾಡದಂತೆ ಮಾಡಿ ಸಂಕಟವನ್ನುಂಟುಮಾಡುತ್ತಿ ದ್ದನು. ಉಸುರು ಕಟ್ಟುವ ಶಕ್ತಿಯು ಹೆಚ್ಚಾಗಿದ್ದುದರಿಂದ ಭೀಮನಿಗೇನೂ ತಂಟೆಯಾಗುತ್ತಿರಲಿಲ್ಲ. ಇಂತಹ ತುಂಟಾಟಗಳಿಂದ ಭೀಮನಿಗೆ ಮಹಾ ಹರ್ಷ ಉಂಟಾಗುತ್ತಿತ್ತು; ಇತರರಿಗಾದರೋ ಮಹಾ ವ್ಯಥೆಯುಂಟಾಗುತ್ತಿ ತ್ತು. ಪರಿಣಾಮವೇನಾಯಿತು? ಹುಡುಗರಾಗಿದ್ದಾಗಿದ್ದ ಈ ಅಸೂ

ಷ್ಣುತೆಯು ಬೂದಿ ಮುಚ್ಚಿದ ಕೆಂಡದಂತೆ ಬುದುಬುದುಗುಟ್ಟುತ್ತಿದ್ದು ಉತ್ತರೋತ್ತರದಲ್ಲಿ ಮಹಾದ್ವೇಷಜ್ವಾಲೆಯಾಗಿ ಬಳೆದು ಪಾಂಡವ ಕೌರವ ವಂಶಗಳೆರಡನ್ನೂ ಸುಟ್ಟು ಬೂದಿಮಾಡಿತು. ಭಾರತದ ಮಹಾ ಯುದ್ಧಕ್ಕೆ ಭೀಮನ ಬಾಲ್ಯದ ತುಂಟಾಟವು ಮುಖ್ಯಕಾರಣಗಳಲ್ಲೊಂದಾಗಿತ್ತು. ಸೊಪ್ಪುಸೆದೆಗಳಿಲ್ಲದಿದ್ದರೆ ಕಿಡಿಯು ಬೆಂಕಿಯನ್ನು ಹೊತ್ತಿಡುವುದೇ ಇಲ್ಲ; ಧಾತುಗಳಲ್ಲಿ ದೋಷಗಳಿಲ್ಲದಿದ್ದರೆ ರೋಗ ಬೀಜವು ಮೊಳೆಯುವುದೇ ಇಲ್ಲ ಎಂಬ ತತ್ವವೇನೋ ನಿಜವೇ ಅಹುದು. ಆದರೂ ನಮಗೆ ಸಾಧ್ಯವಾಗುವ ಕಾಲದವರೆಗೂ, ಸಾಧ್ಯವಾಗುವ ಮಟ್ಟಿಗೂ ಅಂತಹ ನಾಶಕರವಾದ ಕಿಡಿಯು ಬೀಳದಿರುವಂತೆಯೂ, ಅಂತಹ ಮೃತ್ಯುಪ್ರಾಯವಾದ ರೋಗ ಬೀಜವು ಒಳಗೆ ಸೇರದಿರುವಂತೆಯೂ ನೋಡಿಕೊಳ್ಳುವುದು ನಮ್ಮ ಕರ್ತವ್ಯವಾಗಿಯೇ ಇರುತ್ತದೆ. ಪ್ರತೀಕಾರವನ್ನೆಸಗಲರಿಯದ ದುರ್ಬಲರ ಮೇಲೆ ಪರ್ಯಾಲೋಚಿಸದೆ ಬಲವನ್ನು ತೋರಿಸಿದಾಗ ಹುಟ್ಟುವ ಕೋಪವು ಹೊರಕ್ಕೆ ಬಾರದೆ ಒಳಗೇ ಹುದುಗಿದ್ದು, ತುಚ್ಛ ಗುಣಗಳೆಂದು ನಾವು ಭಾವಿಸುವ ದ್ವೇಷಾಸೂಯೆಗಳೆಂಬ ರೂಪಗಳನ್ನು ಕಾಲಾಂತರದಲ್ಲಿ ತಳೆಯುತ್ತದೆ. ಪರ್ಯಾಲೋಚಿಸಿ ನೋಡುವಲ್ಲಿ, ಪ್ರಬಲರು ದುರ್ಬಲರ ಮೇಲೆ ಯೋಚಿಸದೆಯೇ ಎಸಗುವ ಹಾವಳಿಗಿಂತ ಈ ಕೋಪವು ಎಷ್ಟೋ ಕಡಮೆಯಾಗಿಯೇ ದೂಷ್ಯವಾಗಿರುವುದು. ಅಂತರಂಗದಲ್ಲಿ ಪರಹಿಂಸೆಯನ್ನು ಮೆಚ್ಚುವ ಮನಸ್ಸನ್ನುಳ್ಳ ಮಾನವರ ಮೇಲನೋಟಕ್ಕೆ ಈ ಬಗೆಯ ಕೃತ್ಯಗಳು ದೂಷ್ಯಗಳಲ್ಲದುವಾಗಿಯೂ, ಕೊನೆಗೆ ಶ್ಲಾಘನೀಯಗಳಾಗಿಯೂ ಕಾಣಬಹುದು ; ಆದರೆ ನಿಜವಾಗಿಯೂ ಧೀರನೆನಿಸಿಕೊಂಡಿರುವವನ ನ್ಯಾಯ ವಿಮರ್ಶೆಗೈವ ನೋಟಕ್ಕೆ ಇವುಗಳು ಸಹಜಗಳಾಗಿ ತಂತಮ್ಮ ಕ್ರೂರನೀಚ ಸ್ವರೂಪಗಳಲ್ಲಿಯೇ ತೋರಿಸಿಕೊಳ್ಳುವುವು. ಭಾರತದ ಮಹಾ ಕಥೆಯನ್ನು ನಿರಲಸನಾಗಿ ಪರ್ಯಾಲೋಚಿಸುತ್ತಾ ಪಠನ ಮಾಡಿರುವ ಪ್ರಾಜ್ಞನು ಪಾಂಡವರ ಕೃತ್ಯಗಳೆಲ್ಲಾ ಶ್ಲಾಘನೀಯಗಳಲ್ಲವೆಂಬುದನ್ನೂ ಕೌರವರ ಕೃತ್ಯಗಳೆಲ್ಲಾ ದೂಷ್ಯಗಳಲ್ಲವೆಂಬುವನ್ನೂ ಚೆನ್ನಾಗಿ ಗ್ರಹಿಸಿಯೇ ಇರುತ್ತಾನೆ.

ಮನೋವಾಕ್ಕಾಯ ಜಯಗಳಿಂದ ಮಾನವನು ಸದ್ಧರ್ಮನಿರತನಾ

ಗುವನು, ಶೀಲವಂತನಾಗುವನು, ಸದಾಚಾರ ಸಂಪನ್ನನಾಗುವನು. ತನಗೆ ಸಮೀಪ ತಮಗಳಾಗಿರುವ ತನ್ನ ಕಾಮಗಳೊಡನೆಯೂ ಮನಸ್ಸಿನೊಡನೆಯೂ ಶರೀರದೊಡನೆಯೂ ಸತ್ಸಂಬಂಧಗಳನ್ನು ಮಾಡಿಕೊಂಡು, ಪಾಶ್ಚಿಮಾತ್ಯರ ನೀತಿಶಾಸ್ತ್ರ ಪುಸ್ತಕಗಳಲ್ಲಿ "ಆತ್ಮಹಿತ" ಗಳೆಂದು ಕರೆಯಲ್ಪಟ್ಟಿರುವ ಧರ್ಮಗಳನ್ನು ಆಚರಣೆಗೆ ತಂದುಕೊಂಡಿರುವಾತನು, ಆ ಪಾಶ್ಚಿಮಾತ್ಯರ ಪುಸ್ತಕಗಳಲ್ಲಿ "ಪರಹಿತ" ಗಳೆಂಬ ಹೆಸರನ್ನು ಪಡೆದಿರುವ ಧರ್ಮಗಳನ್ನೂ ಚೆನ್ನಾಗಿ ಆಚರಣೆಗೆ ತಂದುಕೊಳ್ಳುವುದಕ್ಕೆ ಸಮರ್ಥನಾಗುತ್ತಾನೆ.

ಮಾನವರ ಪರಸ್ಪರ ನಡೆವಳಿಕೆಗಳಲ್ಲಿ ಕಾಣಬರುವ ಸದ್ಗುಣ ದುರ್ಗುಣಗಳ ವಿಷಯವನ್ನು ವಿಚಾರಮಾಡುವುದು ಇನ್ನೂ ಉಳಿದಿರುತ್ತದೆ. ಇವುಗಳನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು.

(೧). ಹಿರಿಯರೊಡನೆ ನಡೆಯಿಸುವ ಲೋಕವ್ಯವಹಾರಗಳಲ್ಲಿ ಕಾಣಬರುವ ಸದ್ಗುಣ ದುರ್ಗುಣಗಳು.

(೨) ಸಮಾನರ ಸಂಗಕ್ಕೆ ಸಂಬಂಧಪಡುವ ಸದ್ಗುಣ ದುರ್ಗುಣಗಳು.

(೩) ಕಿರಿಯರ ಸಂಗಕ್ಕೆ ಸಂಬಂಧಪಡುವ ಸದ್ಗುಣ ದುರ್ಗುಣಗಳು.

ನಮ್ಮ ಸುತ್ತಲೂ ಇರುವವರೊಡನೆ ನಮಗಿರುವ ಸಂಬಂಧಗಳಲ್ಲಿ ಹುಟ್ಟುವ ಸದ್ಗುಣಗಳನ್ನು ನಾವು ಸುಲಭವಾಗಿಯೂ ಸ್ಪಷ್ಟವಾಗಿಯೂ ಈರೀತಿಯಲ್ಲಿ ವಿಂಗಡಿಸಿಕೊಳ್ಳಬಹುದು. ಅವು ನಮಗೆ ಸ್ಪಷ್ಟವಾಗಿ ಕಾಣಬರುವುದರಿಂದ, ಅವುಗಳನ್ನು ನಾವು ಅಭ್ಯಾಸಮಾಡಲು ಪ್ರಯತ್ನಿಸಬಹುದು. ವಿದ್ವೇಷಾದಿಗಳನ್ನು ಹುಟ್ಟಿಸುವ ದುರ್ಗುಣಗಳೂ ಸ್ಪಷ್ಟವಾಗಿ ತಿಳಿಯಬರುವುದರಿಂದ, ಅವುಗಳನ್ನು ನಾವು ತಪ್ಪಿಸಿಕೊಳ್ಳಲು ಪ್ರಯತ್ನ ಮಾಡಬಹುದು. ನಿಷ್ಕಲ್ಮಷಪ್ರೀತಿಯೆಂಬುದರಲ್ಲಿ ಸರ್ವಸದ್ಗುಣಗಳ ಮೂಲವೂ ಇರುತ್ತದೆ; ಆನಂದವೆಂಬುದೇ ಸರ್ವಸದ್ಗುಣಗಳ ಫಲ. ಎಲ್ಲಾ ದುರ್ಗುಣಗಳ ಮೂಲವೂ ದ್ವೇಷವೆಂಬುದರಲ್ಲಿದೆ, ಕ್ಲೇಶವೇ ಅವುಗಳ ಫಲ.

## ಸ್ಮೃತ್ಯಾದಿ ವಚನಗಳು.

ಶುಭಾಶುಭಫಲಂ ಕರ್ಮ ಮನೋವಾಗ್ದೇಹಸಂಭವಮ್ ।
ಕರ್ಮಜಾಗತಯೋ ನೄಣಾ ಮುತ್ತಮಾಧಮಮಧ್ಯಮಾಃ ॥

ತಸ್ಯೇಹ ತ್ರಿವಿಧಸ್ಯಾಪಿ ತ್ರ್ಯಧಿಷ್ಠಾನಸ್ಯ ದೇಹಿನಃ |
ದಶಲಕ್ಷಣಯುಕ್ತಸ್ಯ ಮನೋ ವಿದ್ಯಾತ್ಪ್ರವರ್ತಕಮ್ ||
ಮಾನಸಂ ಮನಸೈವಾಯಮುಪಭುಂಕ್ತೇ ಶುಭಾಶುಭಮ್ |
ವಾಚಾ ವಾಚಾಕೃತಂ ಕರ್ಮ ಕಾಯೇನೈವ ತು ಕಾಯಿಕಮ್ ||
ವಾಗ್ದಂಡೋಥ ಮನೋದಂಡಃ ಕರ್ಮದಂಡಸ್ತಥೈವಚ |
ಯಸ್ಯೈತೇ ನಿಹಿತಾ ಬುದ್ಧೌ ತ್ರಿದಂಡೀತಿ ಸ ಉಚ್ಯತೇ ||
ತ್ರಿದಂಡಮೇತನ್ನಿಕ್ಷಿಪ್ಯ ಸರ್ವಭೂತೇಷು ಮಾನವಃ |
ಕಾಮಕ್ರೋಧೌ ತು ಸಂಯಮ್ಯ ತತಸ್ಸಿದ್ಧಿಂ ನಿಗಚ್ಛತಿ ||
(ಮನುಸ್ಮೃತಿ ಅ. ೧೨, ಶ್ಲೋ. ೩, ೪, ೮, ೧೦, ೧೧).

"ಶುಭಾಶುಭ ಫಲಗಳನ್ನು ತರುವ ಕರ್ಮವು ಮನಸ್ಸಿನಲ್ಲಿಯೋ ವಾಕ್ಕಿನಲ್ಲಿಯೋ ದೇಹದಲ್ಲಿಯೋ ಹುಟ್ಟುತ್ತದೆ; ಕರ್ಮಗಳಿಂದ ಮಾರ್ಗಗಳು ಉತ್ತಮ ಅಧಮ ಮಧ್ಯಮಗಳೆಂದು ಮೂರಿವೆ.

"ದಶಲಕ್ಷಣಯುಕ್ತನಾದ ದೇಹಿಯನ್ನು ಮನವು ಮೂರುವಿಧಗಳಲ್ಲಿಯೂ ಮೂರು ಅಧಿಷ್ಠಾನಗಳಲ್ಲಿಯೂ ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುತ್ತದೆಯೆಂದು ತಿಳಿಯುವನಾಗು.

"ಶುಭವನ್ನೋ ಅಶುಭವನ್ನೋ ಜೀವನು ಅನುಭವಿಸುವನಾಗುತ್ತಾನೆ. ಮನಸ್ಸಿಗೆ ಸಂಬಂಧಪಟ್ಟುದನ್ನು ಮನಸ್ಸಿನಿಂದ, ವಾಕ್ಕಿಗೆ ಸಂಬಂಧಪಟ್ಟುದನ್ನು ವಾಕ್ಕಿನಿಂದ, ಕಾಯಕ್ಕೆ ಸಂಬಂಧಪಟ್ಟುದನ್ನು ಕಾಯದಿಂದ ಅನುಭವಿಸುವನು.

"ವಾಗ್ದಂಡ, ಮನೋದಂಡ, ಕರ್ಮದಂಡ—ಇವು ಮೂರನ್ನೂ ಯಾವನು ತನ್ನ ಬುದ್ಧಿಯಲ್ಲಿ ಇಡುವವನಾಗುವನೋ ಅವನೇ ತ್ರಿದಂಡಿಯೆನಿಸಿಕೊಂಡಿರುವನು.

"ಸರ್ವಭೂತಗಳ ವಿಷಯದಲ್ಲಿಯೂ ಈ ಮೂರು ದಂಡಗಳನ್ನುಳ್ಳವನಾಗಿ, ಕಾಮಕ್ರೋಧಗಳನ್ನೂ ಯಾವನು ಜಯಿಸಿರುವನೋ ಅವನು ಸಿದ್ಧಿಯನ್ನು ಪಡೆಯುವನಾಗುತ್ತಾನೆ."

ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪಉಚ್ಯತೇ ॥
ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪಉಚ್ಯತೇ ॥
ಮನಃಪ್ರಸಾದಸ್ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥

(ಭಗವದ್ಗೀತೆ ಅ. ೧೭, ಶ್ಲೋ. ೧೪, ೧೫, ೧೬).

"ದೇವ, ದ್ವಿಜ, ಗುರು, ಪ್ರಾಜ್ಞ—ಇವರುಗಳ ಪೂಜೆಯೂ, ಶೌಚವೂ ಆರ್ಜವವೂ ಬ್ರಹ್ಮಚರ್ಯವೂ ಅಹಿಂಸೆಯೂ—ಇವು ಕಾಯಿಕ ತಪಸ್ಸು.

"ಉದ್ವೇಗವನ್ನುಂಟುಮಾಡದೆ ಸತ್ಯವಾಗಿಯೂ ಪ್ರಿಯವಾಗಿಯೂ ಹಿತವಾಗಿಯೂ ಇರುವ ಮಾತು ಮತ್ತು ಸ್ವಾಧ್ಯಾಯಾಭ್ಯಸನ—ಇವು ವಾಚಕ ತಪಸ್ಸು.

"ಮನಃಪ್ರಸಾದ, ಸೌಮ್ಯತ್ವ, ಮೌನ, ಆತ್ಮವಿನಿಗ್ರಹ, ಭಾವಸಂಶುದ್ಧಿ—ಇವು ಮಾನಸಿಕ ತಪಸ್ಸು."

ನ ಜಾತು ಕಾಮಃ ಕಾಮಾನಾ ಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯಏವಾಭಿವರ್ಧತೇ ॥

(ಮಹಾಭಾರತ. ಅನುಶಾಸನಪರ್ವ, ಅ. ೧೧೬, ಶ್ಲೋ. ೩೭) ಇದರ ಪರಿವರ್ತನವನ್ನು ೧೬೯ ನೇ ಪುಟದಲ್ಲಿ ನೋಡಬಹುದು).

ಅಸಂಶಯಂ ಮಹಾಬಾಹೋ ಮನೋದುರ್ನಿಗ್ರಹಂ ಚಲಂ ।
ಅಭ್ಯಾಸೇನ ಚ ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥
ಯತೋಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಂ ।
ತತಸ್ತತೋ ನಿಯಮ್ಯೈತ ದಾತ್ಮನ್ಯೇವ ವಶಂ ನಯೇತ್ ॥

(ಭಗವದ್ಗೀತೆ. ಅ ೬, ಶ್ಲೋ. ೩೫, ೨೬).

"ಎಲೈ ಮಹಾಬಾಹುವೇ, ಚಲಿಸುತ್ತಲೇ ಇರುವ ಮನಸ್ಸನ್ನು ನಿಗ್ರಹಿಸುವುದು ಕಷ್ಟವೆನ್ನುವುದರಲ್ಲಿ ಸಂದೇಹವೇ ಇಲ್ಲ. ಆದರೂ, ಕೌಂತೇಯನೇ, ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಅದನ್ನು ನಿಗ್ರಹಿಸಬಹುದಾಗಿದೆ.

"ಅಸ್ಥಿರವಾಗಿಯೂ ಚಂಚಲವಾಗಿಯೂ ಇರುವ ಮನಸ್ಸು ಯಾವ ಯಾವ ದಿಕ್ಕಿಗೋಡುವುದೋ ಆಯಾ ದಿಕ್ಕುಗಳಿಂದ ಅದನ್ನು ಹಿಡಿದು ತಂದು ಆತ್ಮನ ವಶಕ್ಕೇ ಬಿಡುತ್ತಿರಬೇಕು."

ಅಭ್ಯಾಸೇಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।
ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥

(ಭಗವದ್ಗೀತೆ. ಅ. ೧೨, ಶ್ಲೋ. ೧೦).

"ಅಭ್ಯಾಸದಲ್ಲಿಯೂ ನೀನು ಸಮರ್ಥನಾಗದಿರುವ ಪಕ್ಷಕ್ಕೆ, ಸರ್ವ ಕರ್ಮಗಳನ್ನೂ ನನ್ನ ಕರ್ಮವೆಂದು ತಿಳಿದು ಮಾಡುವನಾಗು. ಸರ್ವ ಕರ್ಮಗಳನ್ನೂ ನನ್ನ ಕರ್ಮವೆಂದು ಭಾವಿಸಿ ಮಾಡಿದಾಗಲೂ ನೀನು ಸಿದ್ಧಿಯನ್ನು ಹೊಂದುವನಾಗುತ್ತೀಯೆ."

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ । ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ । ತೇಷಾಂ ಶಾಂತಿಶ್ಶಾಶ್ವತೀನೇತರೇಷಾಂ ॥ (ಕಠೋಪನಿಷತ್ತು, V. 13).

"ನಿತ್ಯರೊಳಗೆಲ್ಲಾ ನಿತ್ಯನಾವನೋ, ಚೇತನಗಳೊಳಗೆಲ್ಲಾ ಚೇತನನು ಅವನೋ, ತಾನು ಏಕನಾಗಿ ಅನೇಕರಿಗೆ ಕಾಮಗಳನ್ನು ಯಾವನುಂಟುಮಾಡುತ್ತಾನೆಯೋ, ಆ ಏಕನು ತಮ್ಮೊಳಗೇ ಕುಳಿತಿರುವುದನ್ನು ಆರು ಕಾಣುವರೋ ಅಂತಹ ಜ್ಞಾನಿಗಳಿಗೇ ಶಾಶ್ವತಶಾಂತಿಯು ಲಭಿಸುವುದು, ಮತ್ತಾರಿಗೂ ಇಲ್ಲ."

ಗೋತ್ರಜಸ್ಸಹಜಶತ್ರುರಿತ್ಯಸೌ । ನೀತಿರಸ್ತು ಧನಲೋಭದುರ್ಧಿಯಾಂ । ವೃದ್ಧತುಲ್ಯಲಘುಪುಂಭಿರ್ವೃತಂ ಜಗದ್ಧಿ ಧನಸ್ಯ ಪಿತೃಮಿತ್ರಪುತ್ರವತ್ ॥ (ಬಾಲಭಾರತ-ಉದ್ಯೋಗಪರ್ವ, II. 17.)

"ಧನಲೋಭದಿಂದ ಕುರುಡಾಗಿರುವ ಮನಸ್ಸನ್ನುಳ್ಳವರು ಗೋತ್ರಜನು ತಮಗೆ ಸಹಜ ಶತ್ರುವೆಂದು ಭಾವಿಸುವರು. ಜ್ಞಾನಧನವನ್ನುಳ್ಳಾತನಿಗಾದ್ದರೋ ವೃದ್ಧರಿಂದಲೂ ತುಲ್ಯರಿಂದಲೂ ಕಿರಿಯರಿಂದಲೂ ತುಂಬಿರುವ ಈ ಲೋಕವು ಪಿತೃ ಮಿತ್ರ ಪುತ್ರರುಗಳಿಂದ ತುಂಬಿರುವಂತೆ ಇರುವುದು."

ಅವಿಜಿತ್ಯ ಯ ಆತ್ಮಾನಮಮಾತ್ಯಾನ್ ವಿಜಿಗೀಷತೇ ।
ಅಮಿತ್ರಾನ್ವಾಽಜಿತಾಮಾತ್ಯಃ ಸೋಽವಶಃ ಪರಿಹೀಯತೇ ॥

ಆತ್ಮಾನಮೇವ ಪ್ರಥಮಂ ದ್ವೇಷರೂಪೇಣ ಯೋಜಯೇತ್ |
ತತೋಽಮಾತ್ಯಾನಮಿತ್ರಾಂಶ್ಚ ನ ಮೋಘಂ ವಿಜಿಗೀಷತೇ ||

(ಬಾಲಭಾರತಂ. ಅ. ೩೯, ಶ್ಲೋ. ೮೯, ೩೦.)

"ತನ್ನನ್ನು ತಾನು ಜಯಿಸದೆ ತನ್ನ ಮಂತ್ರಿಗಳನ್ನು ಜಯಿಸಲಿಚ್ಛಯಿಸುವವನ, ತನ್ನ ಮಂತ್ರಿಗಳನ್ನು ಜಯಿಸದೆ ತನ್ನ ಶತ್ರುಗಳನ್ನು ಜಯಿಸಲಿಚ್ಛಯಿಸುವವನ—ಹೀಗೆ ಪರಾಧೀನನಾಗಿರುವವನ ಮನೋರಥವು ಭಂಗವೇ ಆಗುವುದು.

"ಆದರೆ ಆವನು ತನ್ನ ಶತ್ರುವಾದ ತನ್ನನ್ನು ತಾನು ಮೊದಲು ಜಯಿಸಿ ಆಮೇಲೆ ತನ್ನ ಮಂತ್ರಿಗಳನ್ನೂ ಶತ್ರುಗಳನ್ನೂ ಜಯಿಸುವನೋ, ಅಂತಹನ ಕರ್ಮವು ನಿರರ್ಥಕವಾಗುವುದೇ ಇಲ್ಲ."

ಧರ್ಮಸ್ಯ ವಿಧಯೋ ನೈಕೇ ಯೇ ವೈ ಪ್ರೋಕ್ತಾ ಮನೀಷಿಭಿಃ |
ಸ್ವಂಸ್ವಂ ವಿಜ್ಞಾನಮಾಶ್ರಿತ್ಯ ದಮಸ್ತೇಷಾಂ ಪರಾಯಣಂ ||
ದಮಂ ನಿಶ್ರೇಯಸಂ ಪ್ರಾಹು ರ್ವೃದ್ಧಾ ನಿಶ್ಚಿತ ದರ್ಶಿನಃ |
ಬ್ರಾಹ್ಮಣಸ್ಯ ವಿಶೇಷೇಣ ದಮೋ ಧರ್ಮಸ್ಸನಾತನಃ ||
ಅದಾಂತಃ ಪುರುಷಃ ಕ್ಲೇಶಮಭೀಕ್ಷ್ಣಂ ಪ್ರತಿಪದ್ಯತೇ |
..................................
ಅನರ್ಥಾಂಶ್ಚ ಬಹೂನನ್ಯಾನ್ ಪ್ರಸೃಜತ್ಯಾತ್ಮದೋಷಜಾನ್ |
ಆಶ್ರಮೇಷು ಚತುರ್ಷ್ವಾಹು ರ್ದಮಮೇವೋತ್ತಮಂ ವ್ರತಮ್ ||
ತಸ್ಯ ಲಿಂಗಾನಿ ವಕ್ಷ್ಯಾಮಿ ಯೇಷಾಂ ಸಮುದಯೋ ದಮಃ |
ಕ್ಷಮಾ ಧೃತಿರಹಿಂಸಾ ಚ ಸಮತಾ ಸತ್ಯಮಾರ್ಜವಮ್ ||
ಇಂದ್ರಿಯಾಭಿಜಯೋ ದಾಕ್ಷ್ಯಂ ಮಾರ್ದವಂ ಹ್ರೀರಚಾಪಲಮ್ |
ಅಕಾರ್ಪಣ್ಯಮಸಂರಂಭಃ ಸಂತೋಷಃ ಪ್ರಿಯವಾದಿತಾ ||
ಅವಿಹಿಂಸಾನಸೂಯಾ ಚಾಪ್ಯೇಷಾಂ ಸಮುದಯೋ ದಮಃ ||

(ಮಹಾಭಾರತ—ಶಾಂತಿಪರ್ವ. ಅ. ೧೬೦, ಶ್ಲೋ. ೬, ೧೩, ೧೪-೧೬)

"ತಮ್ಮ ತಮ್ಮ ವಿಜ್ಞಾನವನ್ನು ಆಶ್ರಯಿಸಿ ಪಂಡಿತರು ಧರ್ಮವನ್ನು ವಿಧವಿಧವಾಗಿ ಹೇಳಿರುವರು. ಆದರೂ ದಮವು ಧರ್ಮಕ್ಕೆಲ್ಲಾ ಆಧಾರಭೂತವಾಗಿದೆ.

"ವೃದ್ಧರೂ ಸಿದ್ಧಿ ತವಾದುದನ್ನು ನೋಡಿರುವವರೂ ದಮವು ನಿಶ್ಶ್ರೇಯಸವೆಂದು ಹೇಳಿರುತ್ತಾರೆ. ಮುಖ್ಯವಾಗಿ ಬ್ರಾಹ್ಮಣನಿಗೆ ದಮವೇ ಸನಾತನ ಧರ್ಮವಾಗಿದೆ.

"ದಮವಿಲ್ಲದಾತನು ಎಲ್ಲೆಡೆಯಲ್ಲಿಯೂ ಕ್ಲೇಶಕ್ಕೆ ಗುರಿಯಾಗುವನು, ಮತ್ತು ತನ್ನ ದೋಷಗಳಿಂದಲೇ ಹುಟ್ಟುವ ಅನೇಕ ತೊಂದರೆಗಳನ್ನು ತಾನೇ ಉಂಟುಮಾಡಿಕೊಳ್ಳುವನಾಗುತ್ತಾನೆ.

"ಆಶ್ರಮ ಚತುಷ್ಟಯಗಳಿಗೂ ದಮವೇ ಉತ್ತಮವ್ರತ. ದಮದ ಲಕ್ಷಣಗಳನ್ನು ನಿನಗೆ ತಿಳಿಸುವೆನು ; ಇವಕ್ಕೆಲ್ಲಾ ದಮವೇ ಮೂಲ.

"ಕ್ಷಮ, ಧೃತಿ (self-possession or control), ಅಹಿಂಸೆ, ಸಮತೆ (equability), ಸತ್ಯ, ಆರ್ಜವ ( straightforwardness), ಇಂದ್ರಿಯಾಭಿಜಯ, ದಾಕ್ಷ್ಯ (skill), ಮಾರ್ದವ (gentleness), ಹ್ರೀ, ಅಚಾಪಲ, ಅಕಾರ್ಪಣ್ಯ (absence of scorn), ಅಸಂರಂಭ (absence of excitement), ಸಂತೋಷ, ಪ್ರಿಯವಾದ, ಅವಿಹಿಂಸೆ, ಅನಸೂಯೆ—ಇವುಗಳಿಗೆಲ್ಲಾ ದಮವೇ ಮೂಲ."

ಧೃತಿಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ |
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಂ ||

"ಧೃತಿ, ಕ್ಷಮೆ, ದಮೆ, ಅಸ್ತೇಯ, ಶೌಚ, ಇಂದ್ರಿಯನಿಗ್ರಹ, ಧೀಃ, ವಿದ್ಯೆ, ಸತ್ಯ, ಅಕ್ರೋಧ—ಇವು ಹತ್ತೂ ಧರ್ಮದ ಲಕ್ಷಣಗಳು." (ಮನುಸ್ಮೃತಿ. ಅ. ೬, ಶ್ಲೋ. ೯೨).

ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ |
ಏತಂ ಸಾಮಾಸಿಕಂ ಧರ್ಮಂ ಚಾತುರ್ವರ್ಣ್ಯೇ ಬ್ರವೀನ್ಮನುಃ ||
(ಮನುಸ್ಮೃತಿ. ಅ. ೧೦, ಶ್ಲೋ. ೬೩).

"ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯನಿಗ್ರಹ—ಇದು ಮನುವು ಚಾತುರ್ವರ್ಣಗಳಿಗೂ ಹೇಳಿರುವ ಧರ್ಮದ ಸಾರ."

ಸತ್ಯಮಸ್ತೇಯ ಮಕ್ರೋಧೋ ಹ್ರೀಃ ಶೌಚಂ ಧೃತಿರ್ದಮಃ |
ಸಂಯತೇಂದ್ರಿಯತಾ ವಿದ್ಯಾ ಧರ್ಮಸ್ಸರ್ವ ಉದಾಹೃತಃ ||
(ಯಾಜ್ಞವಲ್ಕ್ಯ. ಅ. ೩, ಶ್ಲೋ. ೬೬).

"ಸತ್ಯ, ಅಸ್ತೇಯ (ಕದಿಯದಿರುವುದು), ಅಕ್ರೋಧ, ಹ್ರೀ, ಶೌಚ, ಧೃತಿ, ದಮ, ಇಂದ್ರಿಯನಿಗ್ರಹ, ವಿದ್ಯೆ—ಇವೇ ಸರ್ವ ಧರ್ಮ.'

---

ಇದು ಸನಾತನ ಧರ್ಮದೀಪಿಕೆಯಲ್ಲಿ ನೀತಿಪ್ರಕಾಶಿಕೆಯೆಂಬ ತೃತೀಯಭಾಗದಲ್ಲಿ ಆತ್ಮಹಿತಧರ್ಮವಿವರಣೆಯೆಂಬ ಸಪ್ತಮಾಧ್ಯಾಯ.



# ತೃತೀಯ ಭಾಗ.

## ಅಷ್ಟಮಾಧ್ಯಾಯ.



## ಗುರುಸಂಗ ಧರ್ಮ ವಿವರಣೆ.

---



ಸ್ವಾರ್ಥಪರವಲ್ಲದ ವಿಶ್ವಾಸವು ಪರಹಿತಾರ್ಥಕ್ಕಾಗಿ ತ್ಯಾಗಗಳನ್ನು ಮಾಡುವಂತೆಯೂ, ಸರ್ವಭೂತಗಳ ಏಳಿಗೆಗಾಗಿ ಆತ್ಮನಿಗ್ರಹ ನಿರತನಾಗಿರುವಂತೆಯೂ ಪ್ರೇರಿಸುತ್ತದೆ; ಆದುದರಿಂದಲೇ ಅಂತಹ ವಿಶ್ವಾಸವು ಅಭಿನ್ನಭಾವನೆಯನ್ನು ವೃದ್ಧಿಗೊಳಿಸುವ ಧರ್ಮಗಳಿಗೆಲ್ಲಾ ಮೂಲವಾಗಿರುವುದು. ದ್ವೇಷವು, ಇತರರಲ್ಲಿರುವುದನ್ನು ನಾವು ಕಸಿದುಕೊಳ್ಳುವಂತೆಯೂ, ಅಪೇಕ್ಷಣೀಯಗಳಾದ ವಸ್ತುಗಳನ್ನು ಪರರಿಗೆ ನೋವನ್ನುಂಟುಮಾಡಿ ತೆಗೆದುಕೊಂಡು ಆತ್ಮಸುಖಕ್ಕಾಗಿ ಉಪಯೋಗಿಸಿಕೊಳ್ಳುವಂತೆಯೂ ಪ್ರೇರಿಸುತ್ತದೆ; ಆದುದರಿಂದ ದ್ವೇಷವು ಭಿನ್ನಭಾವನೆಯನ್ನು ವೃದ್ಧಿಗೊಳಿಸುವ ಅಧರ್ಮಗಳಿಗೆಲ್ಲಾ ಮೂಲವಾಗಿರುವುದು. ಇದೂ ಅಲ್ಲದೆ, ನಾವು ವಿಶ್ವಾಸಿಸುವವರಾಗಿ, ಆತ್ಮಸುಖವನ್ನು ತ್ಯಾಗಮಾಡಿದಾಗ ನಮಗೆ ಸುಖವು ತೋರುತ್ತದೆ; ಈ ರೀತಿಯಲ್ಲಿ ನಾವು, ಪರಮಸುಖವು, ನಿಜವಾದ ಆನಂದವು, ಕೊಡುವುದರಲ್ಲಿದೆಯೇ ಹೊರತು ತೆಗೆದುಕೊಳ್ಳುವುದರಲ್ಲಿಲ್ಲ ಎಂಬುದನ್ನು ಕಲಿಯುವರಾಗುತ್ತೇವೆ. ಕೊಡುವುದು ಜೀವಾತ್ಮನಿಗೆ ಸಂತೋಷವನ್ನುಂಟುಮಾಡುವುದು, ತೆಗೆದುಕೊಳ್ಳುವುದು ಕೋಶಗಳಿಗೆ ಸಂತೋಷವನ್ನುಂಟುಮಾಡುವುದು.

ಗುರುಜನಸಂಗದಲ್ಲಿ, ದೊಡ್ಡವರೆಂದು ನಾವು ಸನ್ಮಾನಿಸುವವರಸಂಗದಲ್ಲಿ, ವಿಶ್ವಾಸವೆಂಬುದು ಮಾನವರನ್ನು ಹೇಗೆ ನಡೆದುಕೊಳ್ಳುವಂತೆ

ಮಾಡುವುದೋ ಅದನ್ನು ವಿಚಾರಮಾಡಿ ತಿಳಿಯೋಣ. ಹಿರಿಯರು ಯಾರು ಯಾರೆಂದರೆ— ದೇವರು, ಪ್ರಭು, ಮಾತಾಪಿತೃಗಳು, ವಿದ್ಯಾಗುರುಗಳು, ಮತ್ತು ವೃದ್ಧರು.

ದೇವರಲ್ಲಿ ನಮಗಿರುವ ವಿಶ್ವಾಸವು ಸದ್ಗೌರವ, ಭಕ್ತಿ, ಆರಾಧನ, ನಮ್ರಭಾವ ಎಂಬ ರೂಪಗಳಲ್ಲಿ ಹೊರಪಡುತ್ತದೆ. ಸದ್ಭಕ್ತರಲ್ಲೆಲ್ಲಾ ಈ ಗುಣಗಳು ತೋರಬರುವುವು. ಅವತಾರಪುರುಷನಾದ ಶ್ರೀಕೃಷ್ಣನನ್ನು ಭೀಷ್ಮಾಚಾರ್ಯರು ಹೇಗೆ ಸನ್ಮಾನಿಸಿ ಪೂಜೆಗೈವರೋ ನೋಡಿರಿ: ಯುಧಿಷ್ಠಿರನ ರಾಜಸೂಯ ಯಾಗದಲ್ಲಿ ಮೊದಲ ಅರ್ಘ್ಯವನ್ನು ಶ್ರೀಕೃಷ್ಣನಿಗೇ ಕೊಡಬೇಕೆಂದು ಭೀಷ್ಮಾಚಾರ್ಯರು ಹೇಳುವರು. "ಬ್ರಹ್ಮಾಂಡದೊಳಗೆಲ್ಲಾ ಪುರಾಣವೆನಿಸಿಕೊಂಡಿರುವ ಶ್ರೀಕೃಷ್ಣನಿಗೆ ಮಾಡುವ ಸನ್ಮಾನವನ್ನು ಒಪ್ಪದವರು ಮೃದುವಚನಗಳಿಗೂ ಸತ್ಕಾರಕ್ಕೂ ಅರ್ಹರೇ ಅಲ್ಲ. ಪದ್ಮದಳನೇತ್ರನನ್ನು, ಶ್ರೀಕೃಷ್ಣನನ್ನು ಆರಾಧಿಸಲೊಲ್ಲದ ಮಾನವರು ಬದುಕಿದ್ದರೂ ಸತ್ತವರಂತೆಯೇ ಭಾವಿಸಲ್ಪಡಬೇಕು" ಎಂದು ನಾರದರು ಹೇಳುತ್ತಾರೆ. (ಮಹಾಭಾರತ. ಸಭಾಪರ್ವ. ಅ. ೩೮). ಭೀಷ್ಮಾಚಾರ್ಯರು ಶರತಲ್ಪದಲ್ಲಿ ಸಾಯುತ್ತ ಮಲಗಿರುವಾಗ ಮನೋವಾಕ್ಕಾಯಗಳೆಲ್ಲದರಲ್ಲಿಯೂ ಶ್ರೀಕೃಷ್ಣನನ್ನೇ ಧ್ಯಾನಿಸುತ್ತಿದ್ದರು. ಶ್ರೀಕೃಷ್ಣನ ಪರಮ ಪ್ರಸಾದವನ್ನು ಹೊಂದಬೇಕೆಂಬುದೊಂದೇ ಅವರ ಯೋಚನೆಯಾಗಿತ್ತು. (ಮಹಾಭಾರತ. ಶಾಂತಿಪರ್ವ). ತಮ್ಮ ಪರಮ ಧರ್ಮೋಪದೇಶವನ್ನು ಭೀಷ್ಮಾಚಾರ್ಯರು ವಾಸುದೇವನ ಸಹಸ್ರನಾಮೋಚ್ಚಾರಣೆಯನ್ನು ಮಾಡಿ ಮುಗಿಸಿದರು. ಉತ್ಕ್ರಮಣ ಕಾಲದಲ್ಲಿ ಅವರು ಇತರರ ಅಪ್ಪಣೆಯನ್ನು ಕೇಳುವುದಕ್ಕೆ ಮೊದಲೇ ಶ್ರೀಕೃಷ್ಣನ ಅಪ್ಪಣೆಯನ್ನು ಬೇಡುವರಾದರು. (ಮಹಾಭಾರತ. ಅನುಶಾಸನಪರ್ವ, ಅ. ೧೬೭).

ದೈತ್ಯರಾಜನಾದ ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನು ಪರಮ ಭಾಗವತರಲ್ಲಿ ಅಗ್ರಗಣ್ಯನು. ತನಗೆ ವಿದ್ಯಾಗುರುಗಳಾದವರು ಏನೇನನ್ನು ಹೇಳಿದರೂ ಕೇಳದೆ, ಎಡೆಬಿಡದೆ ಹರಿಯನ್ನೇ ಧ್ಯಾನಿಸುತ್ತಲೂ ಸ್ತುತಿಸುತ್ತಲೂ ಹೋದನು. ಅವನ ತಂದೆಯು ಬೆದರಿಸಿದುದೂ, ಕೊಲ್ಲಿಸಲೆತ್ನಿಸಿ

ದುದೂ ವ್ಯರ್ಥವಾಯಿತು ; ಕಾಲಲ್ಲಿ ಹೊಸಗುವೆನೆಂದು ಬಂದ ಮದಿಸಿದ ಆನೆಯೂ ನೋಯಿಸಲಾರದೆ ಹೋಯಿತು ; ಅವನನ್ನು ನಜ್ಜುಗುಜ್ಜುಮಾಡಬೇಕಾಗಿದ್ದ ಬಂಡೆಗಳು ಅವನ ಮೈಮೇಲೆ ತುಪ್ಪಳದಂತೆ ನೆಲಿಸಿದುವು; ಅವನ ಶಿರಸ್ಸನ್ನು ಖಂಡಿಸಬೇಕಾಗಿದ್ದ ಖಡ್ಗವು ಅವನ ಕೊರಳಸಂಪರ್ಕದಿಂದ ಮೊಂಡಾಗಿ ಬಿದ್ದಿತು ; ಅವನ ನಾಳಗಳೊಳಗೆಲ್ಲಾ ಮೃತ್ಯುವನ್ನೊಯ್ಯಬೇಕಾಗಿದ್ದ ವಿಷವು, ನೀರಿನಂತೆ, ಕೆಡಕಿಲ್ಲದುದಾಯಿತು ; ಕೊಟ್ಟಕೊನೆಗೆ ಅವತಾರಪುರುಷನಾದ ನೃಸಿಂಹನು ಕಲ್ಲಿನ ಕಂಬದಿಂದುದ್ಭವಿಸಿ ಬಂದು, ಘಾತಿಸಲೆಳಸಿದ್ದ ಘಾತುಕನನ್ನೇ ಘಾತಿಸಿ ಹರಿಭಕ್ತನನ್ನು ಸಲಹಿದನು. (ವಿಷ್ಣುಪುರಾಣ I. ೧೬—೨೦).

ಧ್ರುವನು, ತನ್ನ ಬಲದಾಯಿಯ ಹಿಂಸೆಯನ್ನು ತಡೆಯಲಾರದೆ, ತನ್ನ ತಂದೆಯ ಅರಮನೆಯನ್ನು ಬಿಟ್ಟು, ಕಾಡಿಗೆ ಹೋಗಿ, ಪರಮಭಕ್ತಿಯಿಂದಲೂ ಶ್ರದ್ಧೆಯಿಂದಲೂ ಚಿತ್ತಸ್ಥೈರ್ಯದಿಂದಲೂ ತಪಸ್ಸನ್ನು ಮಾಡಿ ಹರಿಯನ್ನು ಮೆಚ್ಚಿಸಿದನು. ಹರಿಯು ಪ್ರತ್ಯಕ್ಷನಾಗಿ, ವರಗಳನ್ನು ಕೊಟ್ಟು, ತ್ರಿಲೋಕಿಯ ಸೀಮಾಂತದಲ್ಲಿರುವ ನಕ್ಷತ್ರವನ್ನು ಭದ್ರಾಸನವಾಗಿಕೊಟ್ಟನು. ಆ ನಕ್ಷತ್ರವು ಧ್ರುವನಕ್ಷತ್ರ. ಅಲ್ಲಿ ಧ್ರುವನು ಬಾಳುತ್ತಲೂ ಆಳುತ್ತಲೂ ಇರುವನು. (ವಿಷ್ಣುಪುರಾಣ. I, ೧೧—೧೨).

ಶ್ರೀರಾಮಾವತಾರದಲ್ಲಿ ಮಾನವ ಸದ್ಗುಣ ಸಂಪನ್ನತೆಯು ರಾಮಚಂದ್ರಮೂರ್ತಿಯಲ್ಲಿ ಶೋಭಿಸಿತು. ಈಶ್ವರೇಚ್ಛೆಯನ್ನು ಮನೋವಾಕ್ಕಾಯಗಳಾವುದರಲ್ಲಿಯೂ ಮೀರದಿರುವುದೇ ರಾಮಾವತಾರದಲ್ಲಿ ಬಹು ಸ್ಪಷ್ಟವಾಗಿ ತೋರಬರುವುದು. ತನಗೆ ರಾಜ್ಯಪಟ್ಟಾಭಿಷೇಕವು ತೊಟ್ಟನೆ ತಪ್ಪಿಹೋದಕೂಡಲೆ ಪ್ರಾರಂಭವಾದ ಪ್ರಚಂಡಾವರ್ತಮಾರುತದೊಳಗೆಲ್ಲಾ ಶ್ರೀರಾಮನು ಸಿಜ್ಞಲನುತಿಯನ್ನು ಬೀರುತ್ತಾ, ಸಕಲವೂ ಸದ್ವಿಧಿಗನುಸಾರವಾಗಿಯೇ ಸಂಭವಿಸುವುದು ಎಂದು ಸರ್ವರಿಗೂ ಜ್ಞಾಪಕಕೊಡುತ್ತಾ, ಮಿಥ್ಯಾಪ್ರಪಂಚನೊಳಗೆ ತಥ್ಯವಾಗಿರುವುದನ್ನು ತಿಳಿದು, ಆ ಪ್ರಚಂಡಾವರ್ತಮಾರುತದ ಹಾವಳಿಗೊಳಪಡದೆ, ಸರ್ವರಿಗೂ ಸಮಾಧಾನವನ್ನು ಹೇಳುತ್ತಾ ತನ್ನ ಮಹಿಮೆಯನ್ನು ಮೆರೆಯಿಸಿದವನಾದನು.

ಪರಮೇಶ್ವರನನ್ನು ಸನ್ಮಾನಿಸಿದ ದೈತ್ಯರಾಕ್ಷಸರುಗಳು ಹತರಾದು ದನ್ನು ಕುರಿತು ಪುರಾಣಗಳಲ್ಲಿ ಎಷ್ಟೆಷ್ಟನ್ನೋ ಓದುತ್ತಲೇ ಇದೇವೆ. ಲಂಕಾಧಿನಾಥನಾದ ರಾವಣನಂತಹ ಮಹಾಮಹಾ ಲೋಕಾಧಿಪತಿಗಳೂ ಬಿದ್ದುರುಳಿದರು ; ಏಕೆಂದರೆ, ತಾವು ಈಶ್ವರಸಮರೆಂದು ಭಾವಿಸಿದವರಾಗಿ, ಲೋಕಹಿತಾರ್ಥಕ್ಕಾಗಿರುವ ಪ್ರೀತಿಪೂರಿತ ಸಂಕಲ್ಪಕ್ಕೆ ವಿರೋಧಿಗಳಾಗಿ ನಿಂತರು. (ರಾಮಾಯಣ, ಯುದ್ಧಕಾಂಡ). ಮಗಧ ದೇಶಾಧಿಪತಿಯಾದ ಜರಾಸಂಧನು, ಸೆರೆಯಲ್ಲಿಟ್ಟಿದ್ದ ರಾಜರುಗಳನ್ನು ಬಿಡಲೊಲ್ಲೆನೆಂದು ಶ್ರೀಕೃಷ್ಣನ ಆಜ್ಞೆಯನ್ನೂ ನಿರಾಕರಿಸಿ ನುಡಿಯಲು, ಭೀಮಸೇನನಿಂದ ಕೊಲ್ಲಲ್ಪಟ್ಟನು. (ಮಹಾಭಾರತ, ಸಭಾಪರ್ವ). ಶಿಶುಪಾಲನು, ತಾನು ಹೀಯಾಳಿಸಿದ ಶ್ರೀಕೃಷ್ಣನ ಚಕ್ರಾಯುಧದಿಂದಲೇ ಹತನಾದನು. (ಮಹಾಭಾರತ, ಸಭಾಪರ್ವ). ದುರ್ಯೋಧನನು ಶ್ರೀಕೃಷ್ಣನ ಹಿತವಾದವನ್ನು ಘೋರ್ವರ್ತನದಿಂದ ತಿರಸ್ಕಾರಮಾಡುತ್ತಾ ಹೋಗಿ, ಕೊನೆಗೆ ಪುತ್ರಮಿತ್ರರೊಡನೆ ಮಡಿದನು. (ಮಹಾಭಾರತ, ಶಲ್ಯಸೌಪ್ತಿಕಪರ್ವಗಳು). ಈ ಬಗೆಯ ಪಟ್ಟಿಯನ್ನು ಅನೇಕ ಪುಟಗಳವರೆಗೂ ಬಳೆಯಿಸಿಕೊಂಡು ಹೋಗಬಹುದು. ಈಶ್ವರನ ವಿರೋಧಿಗಳು ನಾಶವಾಗಲೇಬೇಕು ಎಂಬ ತತ್ವವು ಇವುಗಳೊಳಗೆಲ್ಲಾ ಪ್ರಕಾಶಿಸುತ್ತಲೇ ಇದೆ.

ಎಲ್ಲರಿಗೂ ರಾಜಭಕ್ತಿಯಿರಬೇಕೆಂದು ಶಾಸ್ತ್ರಗಳು ಶಾಸನಮಾಡಿವೆ. ರಾಜಭಕ್ತಿಪ್ರದರ್ಶಕಗಳಾದ ಉದಾಹರಣೆಗಳೂ ಉಂಟು. ಯುಧಿಷ್ಠಿರನು ಇಂದ್ರಪ್ರಸ್ಥದಲ್ಲಿ ರಾಜ್ಯಂ ಗೈಯುತ್ತಿರುವಾಗ, ಅವನ ತಮ್ಮಂದಿರು ನಾಲ್ವರೂ ದಿಗ್ವಿಜಯಕ್ಕೆ ಹೋಗಿ, ತಾವು ಗೆದ್ದುತಂದ ಧನವನ್ನೆಲ್ಲಾ ಮಹಾರಾಜನ ಪಾದಪದ್ಮಂಗಳಲ್ಲಿ ಸಮರ್ಪಿಸುವರು. ತಮ್ಮೊಡೆಯನಿಗಾಗಿ ಯುದ್ಧಮಾಡುವರು, ತಮಗಾಗಲ್ಲ. ಪಗಡೆಯ ಆಟದಲ್ಲಿ ಸೋತು ರಾಜ್ಯಭ್ರಷ್ಟನಾಗಿ, ಯುಧಿಷ್ಠಿರನು ಹೊರಟಾಗ, ಪ್ರಜೆಗಳು ಧೃತರಾಷ್ಟ್ರನ ಆಜ್ಞಾನುವರ್ತಿಗಳಾಗಿರಲೊಲ್ಲದೆ ಬೆನ್ನು ಹತ್ತಿ ಬರಲು, ಪ್ರಭುಭಕ್ತಿಪರಾಯಣನಾದ ಯುಧಿಷ್ಠಿರನು ಅವರನ್ನು ಕುರಿತು—"ನೀವೆಲ್ಲಾ ಮರಳಿ ಹಸ್ತಿನಾಪುರಕ್ಕೇ ತೆರಳಿರಿ, ನಿಮ್ಮೊಡೆಯನಿಗೆ ದ್ರೋಹಿಗಳಾಗದೆ, ಬಾಳಿರಿ, ಹೀಗೆ ಮಾಡದಿದ್ದರೆ ಲೋಕಕ್ಕೆ ಸುಖವುಂಟಾಗದು" ಎಂದು ಹೇಳಿದನು.

ರಾಜನು ಧರ್ಮನಿರತನಾಗಿಯೇ ಇರಬೇಕೆಂದೂ, ರಾಜನಲ್ಲಿ ಮಹಾ ಮಹಾಗುಣಗಳನೇಕಗಳು ಇದ್ದೇ ಇರಬೇಕೆಂದೂ ವಿಧಿಸಿದ್ದುದರಿಂದ ಪ್ರಜೆಗಳಲ್ಲಿ ರಾಜಭಕ್ತಿಯು ಚೆನ್ನಾಗಿ ಪೋಷಿತವಾಯಿತು. ಅಂಗೀರಸಕುಲೋತ್ಪನ್ನನಾದ ಉತಥ್ಯನು ಯುವನಾಶ್ವನ ಪುತ್ರನಾದ ಮಾಂಧಾತ ಮಹಾರಾಜನಿಗೆ ರಾಜಧರ್ಮಗಳನ್ನು ತಿಳಿಸುವಾಗ, "ಸದ್ಧರ್ಮಪರಿಪಾಲನಾರ್ಥವಾಗಿಯೇ ರಾಜನಿರುವುದು, ಸ್ವೇಚ್ಛಾಚಾರಿಯಾಗಿದ್ದುಕೊಂಡಿರುವುದಕ್ಕಲ್ಲ. ಓ ಮಾಂಧಾತನೇ, ರಾಜನು ಲೋಕರಕ್ಷಕನಾಗಿರುವನು. ಸದ್ಧರ್ಮನಿರತನಾಗಿರುವಪಕ್ಷಕ್ಕೆ, ಭೂಚರ ದೇವನಾಗಿ ಸನ್ಮಾನಿಸಲ್ಪಡುವನಾಗುತ್ತಾನೆ. ಧರ್ಮವನ್ನು ಬಿಟ್ಟು ನಡೆಯುವವನಾದರೆ, ನರಕಕ್ಕೇ ಬೀಳುವನು. ಸರ್ವ ಭೂತಗಳಿಗೂ ಸದ್ಧರ್ಮವೇ ಆಧಾರ, ಮತ್ತು ಸದ್ಧರ್ಮಕ್ಕೆ ರಾಜನೇ ಆಧಾರ. ಸದ್ಧರ್ಮವನ್ನು ಪರಿಪಾಲಿಸುವ ರಾಜನೊಬ್ಬನೇ ರಾಜನಾಗಿ ರಾಜಿಸುವನು. ರಾಜನು ಅಧರ್ಮಪ್ರವರ್ತನವನ್ನು ನಿಗ್ರಹಿಸದೆ ಬಿಟ್ಟರೆ, ದೇವತೆಗಳೂ ಅವನ ಅರಮನೆಯನ್ನು ಬಿಡುವರು, ಮತ್ತು ಮಾನವರಲ್ಲಿ ಅಂತಹನು ದುಷ್ಕೀರ್ತಿಗೊಳಗಾಗುವನು. (ಮಹಾಭಾರತ—ಶಾಂತಿಪರ್ವ, ಅ. ೯೦).

ದೇಶವಾತ್ಸಲ್ಯವೂ (patriotism) ಲೋಕಹಿತಚಿಂತನೆಯೂ (public spirit) ರಾಜಭಕ್ತಿಗೆ ಅನ್ಯೋನ್ಯವಾಗಿ ಸಂಬಂಧಪಟ್ಟಿರುವುದರಿಂದ, ಅವುಗಳನ್ನು ರಾಜಭಕ್ತಿಯಿಂದ ಪ್ರತ್ಯೇಕಿಸಲೇಕೂಡದು. ನಿಜವಾದ ಭಕ್ತಿಗೆ ವಿಷಯುವಾಗಿರುವುದು "ದೇಶ ಮತ್ತು ದೇಶದ ದೊರೆ." ದೇಶಾಭಿಮಾನವಿಲ್ಲದೆಯೇ ಆಗಲಿ, ತನ್ನ ಜನ್ಮಭೂಮಿಗಾಗಿ ತನ್ನ ಪ್ರಾಣವನ್ನೂ ತೆರಲು ಸಿದ್ಧನಾಗಿಲ್ಲದೆಯಾಗಲಿ, ಯಾವನೂ ಇರಕೂಡದು; ಏಕೆಂದರೆ ದೇಶವಾತ್ಸಲ್ಯವೂ ಲೋಕಹಿತಚಿಂತನೆಯೂ ಇಲ್ಲದಿದ್ದಲ್ಲಿ ದೇಶೋನ್ನತಿಯು ಇರಲೇ ಆರದು. ದೇಶೋನ್ನತಿಯೆಂದರೆ, ವಿಚಾರಮಾಡಿ ನೋಡುವಲ್ಲಿ, ದೇಶದಲ್ಲಿರುವ ವಂಶಗಳ ಮತ್ತು ಬಿಡಿಜನರ ಅಭ್ಯುದಯ. ಮೊತ್ತವನ್ನೂ ಭಾಗವನ್ನೂ ಪ್ರತ್ಯೇಕಿಸಲಾಗುವುದೇ ಇಲ್ಲ. ಲೋಕ ಹಿತಚಿಂತನೆ ಇದ್ದಲ್ಲಿ ಮಾನವನು ತನ್ನ ದೇಶದ ಸುಖದುಃಖಗಳನ್ನು ತನ್ನವಾಗಿರುವಂತೆಯೇ ಭಾವಿಸುವನು. ಅವುಗಳು, ನಿಜವನ್ನು ನೋಡಹೋದಲ್ಲಿ, ತನ್ನವಾಗಿಯೇ ಇರುವುವು. ದುರ್ಬಲರಿಗೆ ಅನ್ಯಾಯವಾಗದಂತೆ ನೋಡಿಕೊಳ್ಳ

ವುದಕ್ಕೂ, ಅನೃತವನ್ನು ಪ್ರತಿಭಟಿಸುವುದಕ್ಕೂ, ರಾಜ್ಯಶಾಸನಗಳನ್ನು ಕಾಪಾಡುವುದಕ್ಕೂ, ನ್ಯಾಯಕ್ಕಾಗಿ ಎದುರುಬೀಳುವುದಕ್ಕೂ, ದೇಶಕ್ಕೆ ನಷ್ಟವನ್ನುಂಟುಮಾಡಿ ಅನ್ಯಾಯದಿಂದ ತಾನು ಲಾಭವನ್ನು ಸಂಪಾದಿಸದಿರುವುದಕ್ಕೂ, ತಾನು ತೆರಬೇಕಾದುದನ್ನು ತೆರದೆ ದೇಶಕ್ಕೆ ಮೋಸವನ್ನು ಮಾಡಲು ಒಪ್ಪದೆಯಿರುವುದಕ್ಕೂ, ಲೋಕಹಿತಚಿಂತನವು ಸರ್ವಪ್ರಯತ್ನವನ್ನೂ ಮಾಡುವುದು. ಭಾರತಭೂಮಿಯ ಪುರಾತನಕಾಲದ ವೀರರು ಪರಹಿತಾರ್ಥಿಗಳಾಗಿದ್ದರೆಂದು ಪದೇಪದೇ ವರ್ಣಿಸಲ್ಪಟ್ಟಿದೆ. "ಬಡಜನರ ರಕ್ಷಣೆಯನ್ನೂ ಲೋಕದ ಜನರ ಜೀವನವನ್ನೂ ನೋಡಿಕೊಳ್ಳುವನಾಗು" ಎಂದು ಶ್ರೀಕೃಷ್ಣನು ಅರ್ಜುನನಿಗೆ ಆಜ್ಞಾಪಿಸುತ್ತಾನೆ. (ಭಗವದ್ಗೀತೆ. ಅ. ೩. ಶ್ಲೋ. ೨೦. ೨೫). ತನ್ನ ಮತ್ತು ತನ್ನ ಕುಟುಂಬದವರ ಯೋಗಕ್ಷೇಮವನ್ನು ಮಾತ್ರ ಚಿಂತಿಸುವ ಮಾನವನು ದೂರದೃಷ್ಟಿಯಿಲ್ಲದವನಾಗಿರುವುದಲ್ಲದೆ ತನ್ನ ಮತ್ತು ತನ್ನವರ ಉತ್ತರೋತ್ತರದ ಏಳಿಗೆಯ ಬುಡವನ್ನೂ ಕೈಯಾರ ಕೊಯ್ಯುವವನಾಗುತ್ತಾನೆ.

ಮಾತಾಪಿತೃಗಳ ವಿಷಯದಲ್ಲಿ ಪರಿಪೂರ್ಣವಾದ ವಿಧೇಯತ್ವವು ಇದ್ದೇಇರಬೇಕೆಂದು ಸನಾತನಧರ್ಮವು ಪದೇಪದೇ ಸಾರುತ್ತದೆ. ಮಾನವರಿಗೆಲ್ಲಾ ಮೇಲುಪಜ್ತಿಯಾದ ರಾಮಚಂದ್ರಮೂರ್ತಿಯು ತನ್ನ ತಂದೆಯ ಮಾತನ್ನು ಹೇಗೆ ಪರಿಪಾಲಿಸಿದನೋ ನೋಡಿರಿ. ರಾಮಚಂದ್ರನನ್ನು ರಾಜ್ಯದಿಂದ ಹೊರಕ್ಕೆ ಅಟ್ಟುವುದಕ್ಕೆ ದಶರಥನು ಒಪ್ಪಿಕೊಳ್ಳಲೇಬೇಕಾಗಿಬರಲು, ಕೈಕೆಯು ರಾಮನನ್ನು ಕುರಿತು ನಿಮ್ಮಪ್ಪನು ಮನಸ್ಸಿನಲ್ಲಿರುವುದನ್ನು ಆಡಲು ಹೆದರಿರುವನು ಎಂದು ಹೇಳಲು, ರಾಮನು—"ಎಲೈ, ಪೂಜ್ಯಳೆ, ರಾಜನಭಿಮತವನ್ನು ನೀನೇ ನನಗೆ ತಿಳಿಸು ; ಪಿತೃವಾಕ್ಯಪರಿಪಾಲನೆಗಿಂತ, ಪಿತೃಸೇವೆಗಿಂತ, ಸೇವೆಯೇ ಇಲ್ಲ" ಎಂದು ಉತ್ತರವನ್ನಿತ್ತನು. ನ್ಯಾಯವಲ್ಲದುದನ್ನು ಒಪ್ಪಲೇಕೂಡದು ಎಂದು ಇತರರು ಹೇಳಿದಾಗ, "ಪಿತೃವಾಕ್ಯವನ್ನು ಉಲ್ಲಂಘಿಸಲು ನನಗೆ ಅಧಿಕಾರವೇ ಇಲ್ಲ, ಪಿತೃಶಾಸನಾನುವರ್ತಿಯಾಗಿಯೇ ನಾನಿರುವೆನು" ಎಂಬ ಉತ್ತರವೊಂದನ್ನೇ ಶ್ಚಲಮತಿಯಿಂದ ಕೊಡುತ್ತಾ ಹೋದನು. ಮುಂದೂಕೂಡ, ತಂದೆಯು ಸತ್ತಮೇಲೆ, ಮನಸ್ಸು ಕೊಂಚವೂ ಇಲ್ಲದೆ, ರಾಜಪ್ರತಿನಿಧಿಯಾಗಿ ರಾಮನ

ಹೆಸರಿನಲ್ಲಿ ರಾಜ್ಯಂಗೈಯುತ್ತಿದ್ದ ಭರತನು ರಾಮನೆಡೆಗೆ ಬಂದು, ಸಿಂಹಾಸನವನ್ನೇರುವನಾಗು ಎಂದು ಬಗೆಬಗೆಯಲ್ಲಿ ಪ್ರೇರಿಸಿದಾಗಲೂ ಕೂಡ, "ತಂದೆಯ ಮಾತಿನಿಂದ ನಾನು ವನಕ್ಕೆ ಬಂದೆನು, ನೀನು ಸಿಂಹಾಸನವನ್ನೇರಿದೆ; ತಂದೆಯ ಮಾತಿನಂತೆ ನಾವಿಬ್ಬರೂ ನಡೆಯಲೇ ಬೇಕು, ತಂದೆಯ ಮಾತು ಎಂದಿಗೂ ಅಸತ್ಯವಾಗಕೂಡದು" ಎಂದು ರಾಮನು ಹೇಳುವವನಾದನು.

ಶುಚಿಯಿಲ್ಲದ ಬೇಡನ ಮೈಯನ್ನು ಹೊತ್ತಿದ್ದ ಬ್ರಹ್ಮಜ್ಞನಾದವನೋರ್ವನಿದ್ದನೆಂತಲೂ, ಸುಜ್ಞಾನವನ್ನು ಪಡೆಯಬೇಕೆಂದು ತನ್ನಲ್ಲಿಗೆ ಕೌಶಿಕನೆಂಬ ಒಬ್ಬ ಬ್ರಾಹ್ಮಣನು ಬರಲು, ಅವನನ್ನು ಆ ಬೇಡನು ತನ್ನ ಮಾತಾಪಿತೃಗಳ ಸನ್ನಿಧಿಗೆ ಕರೆದೊಯ್ದನೆಂತಲೂ, ಒಂದು ಕಥೆಯು ಮಹಾಭಾರತದಲ್ಲಿದೆಯಷ್ಟೆ. ಮಾತಾಪಿತೃಗಳನ್ನು ಶ್ರದ್ಧಾಭಕ್ತಿ ಪೂರ್ವಕವಾಗಿ ನಾನು ಸೇವಿಸುತ್ತಿರುವುದರಿಂದ ನನಗೀ ಬ್ರಹ್ಮಜ್ಞಾನವು ಲಭಿಸಿತು ಎಂದು ಹೇಳುತ್ತಾ ಆ ಬೇಡನು ಆ ಬ್ರಾಹ್ಮಣನನ್ನು ವೃದ್ಧರಾದ ತನ್ನ ತಾಯಿ ತಂದೆಗಳನ್ನು ಬಿಟ್ಟಿದ್ದ ಸುಂದರಗಳಾದ ಕೊಟ್ಟಡಿಗಳೊಳಕ್ಕೆ ಕರೆದುಕೊಂಡು ಹೋದನು. ತಾಯಿ ತಂದೆಗಳಿಗೆ ಕಾಲುಮುಟ್ಟಿ ನಮಸ್ಕಾರಮಾಡಿ, ಬ್ರಾಹ್ಮಣನ ಸಂಗತಿಯನ್ನು ಅವರಿಗರುಹಿ, ಬ್ರಾಹ್ಮಣನನ್ನು ಕುರಿತು—"ಈ ನನ್ನ ತಾಯಿ ತಂದೆಗಳು ನಾನಾರಾಧಿಸುವ ದಿವ್ಯ ಮೂರ್ತಿಗಳು. ದೇವತೆಗಳಿಗೇನೇನು ಸಲ್ಲತಕ್ಕುದೋ ಅವುಗಳನ್ನೆಲ್ಲಾ ಇವರಿಗೆ ನಾನು ಸಲ್ಲಿಸುವನಾಗಿದೇನೆ. ಪ್ರಾಜ್ಞರುಸುರುವ ಪವಿತ್ರಾಗ್ನಿತ್ರಯಗಳಂತೆ ಇವರು ನನಗಿರುವರು. ಎಲೈ ಬ್ರಾಹ್ಮಣನೇ, ಚತುರ್ವೇದಗಳೂ ಯಾಗಾದಿ ಕರ್ಮಗಳೂ ಎಷ್ಟು ಪವಿತ್ರವೋ, ಅಷ್ಟು ಪವಿತ್ರವಾಗಿ ಇವರು ನನಗೆ ಕಾಣುವರು. ಮಾತಾಪಿತೃಗಳು, ಹೋಮಾಗ್ನಿ, ಆತ್ಮ, ಗುರು—ಇವರೈವರೂ, ಎಲೈ ಬ್ರಾಹ್ಮಣವರ್ಯನೆ, ಮಹಾಪೂಜಾರ್ಹರು. ವೇದಾಧ್ಯಯನ ಮಾಡಬೇಕೆಂದು ನೀನು ನಿನ್ನ ತಾಯಿ ತಂದೆಗಳನ್ನು ಬಿಟ್ಟು ಬಂದಿರುವುದು ತಪ್ಪು; ಹಿಂದಕ್ಕೆ ಹೋಗಿ ಅವರ ಮನಸ್ಸನ್ನು ಸಂತೋಷಪಡಿಸು, ಮಾತಾಪಿತೃಗಳಿಗೆ ಹಿಂದಿರುಗಿ ಹೋಗು, ಮಾತಾಪಿತೃ ಸೇವಾ ನಿರತನಾಗಿರು; ಇದಕ್ಕಿಂತಲೂ ಪವಿತ್ರವಾದ ಸದ್ಧರ್ಮವನ್ನು ನಾನರಿಯೆನು" ಎಂದು ಹೇಳಿದನು. (ಮಹಾಭಾರತ. ವನಪರ್ವ. ಅ. ೨೧೩—೨೧೫).

ಯಾವ ಕೋಮಲಾಂಗಿಗಾಗಿ ತನ್ನ ತಂದೆಯ ಹೃದಯವು ಒಳಗೊಳಗೇ ವಿರಹಾಗ್ನಿಯಿಂದ ತೊಳಲಿ ಬಳಲುತ್ತಿತ್ತೋ, ಆ ಕನ್ನೆಯನ್ನು ತನ್ನ ತಂದೆಗೆ ಸಂಪಾದಿಸಿಕೊಡುವುದಕ್ಕಾಗಿ ಭೀಷ್ಮನು ರಾಜಪದವಿಯನ್ನೂ ವಿವಾಹವನ್ನೂ ತ್ಯಾಗಮಾಡಿ, ತನ್ನ ತಂದೆಯ ಮನಸ್ಸನ್ನು ಸಂತೋಷಪಡಿಸಿ, ತನಗೆ ಸಾವು ತಾನು ಬಯಸುವವರೆಗೂ ಬಾರದಿರುವಂತೆ ವರವನ್ನು ಪಡೆದುದನ್ನು ಯಾವನು ತಾನೆ ಅರಿಯನು ? ಚಂದ್ರವಂಶದವನಾದ ಶಂತನು ಎಂಬ ಮಹಾರಾಜನು ಪರಮ ಸುಂದರಿಯಾದ ಸತ್ಯವತಿಯೆಂಬುವಳನ್ನು ಮದುವೆಮಾಡಿಕೊಳ್ಳಬೇಕೆಂದು ಬಯಸಿದನು. ಆದರೆ ತನ್ನ ಮಗನಾದ ಭೀಷ್ಮನಿಗೆ ತೊಂದರೆಯುಂಟಾಗುವುದೆಂದು ಹೆದರಿ ಹಿಂದೆಗೆದನು. ಬಲದಾಯಿಯು ತನ್ನ ಪ್ರೇಮ ಪುತ್ರನ ವಿಷಯದಲ್ಲಿ ನಿರ್ದಯಳಾಗಿರಬಹುದೆಂದು ಅವನಿಗೆ ತೋರಿತು. ಈ ಚಿಂತೆಯಿಂದ ಅವನ ಮುಖವು ಬದಲಾಯಿಸಿತು. ಇದನ್ನು ನೋಡಿ ಭೀಷ್ಮನು ಮಂತ್ರಿಗಳನ್ನು ಕೇಳಿ, ಕಾರಣವನ್ನು ತಿಳಿದನು. ಸತ್ಯವತಿಯ ತಂದೆಯ ಬಳಿಗೆ ಹೋಗಿ, ನಿನ್ನ ಮಗಳನ್ನು ಮಹಾರಾಜರಿಗೆ ಕೊಟ್ಟು ವಿವಾಹವನ್ನು ಬೆಳೆಯಿಸಬೇಕೆಂದು ಕೇಳಿಕೊಂಡನು. "ಮಹಾರಾಜನಿಗೆ ವಯಸ್ಸು ಕಳೆದಿದೆ. ಅಲ್ಪಕಾಲದಲ್ಲಿಯೇ ನೀನು ರಾಜ್ಯಂಗೈಯುವನಾಗುವೆ ; ನಿನಗೇ ಅವಳನ್ನು ಕೊಟ್ಟು ಮದುವೆ ಮಾಡುವುದರಲ್ಲಿ ನನಗೆ ಸಂತೋಷ" ಎಂದು ಆ ತಂದೆಯು ಹೇಳುವನಾದನು. "ನೀನು ಹಾಗೆನ್ನಬಾರದು. ನನ್ನ ತಂದೆಯು ಅವಳನ್ನು ಮದುವೆಯಾಗಬೇಕೆಂದು ಬಯಸಿದಾಗಲೇ ಅವಳು ನನಗೆ ತಾಯಿಯಾದಳು. ರಾಜನಿಗೇ ಅವಳನ್ನು ಕೊಡು" ಎಂದು ಭೀಷ್ಮನು ನುಡಿದನು. ಆಗ ಸತ್ಯವತಿಯ ತಂದೆಯು—"ಆಗಬಹುದು. ಅವಳ ಮಗನಿಗೇ ಪಟ್ಟಾಭಿಷೇಕವಾಗುವ ಪಕ್ಷಕ್ಕೆ ನಾನು ಕೊಡುವೆನು" ಎಂದನು. ಒಡನೆಯೇ ಭೀಷ್ಮನು—"ನನ್ನ ಬಾಧ್ಯತೆಯನ್ನು ನಾನು ಬಿಟ್ಟೆನೆಂದು ಇಗೋ ವಾಗ್ದಾನ ಮಾಡುತ್ತೇನೆ. ನನ್ನ ಬಲದಮ್ಮನನ್ನೇ (ಬಲದಾಯಿಯ ಮಗನನ್ನೇ) ಸಿಂಹಾಸನದಮೇಲೆ ಕುಳ್ಳಿರಿಸುವೆನು" ಎಂದು ಹೇಳಿದನು. ಅದಕ್ಕೆ ಸತ್ಯವತಿಯ ತಂದೆಯು—"ಸರಿ ; ಕೊಟ್ಟಮಾತನ್ನು ನೀನು ಲ್ಲಂಘಿಸುವುದಿಲ್ಲವೆಂಬುದನ್ನು ನಾವು ಬಲ್ಲೆವು. ನಿನ್ನ ಮಕ್ಕಳು ಚಿಕ್ಕಪ್ಪನ ಸಂಗಡ ವ್ಯಾಜ್ಯಮಾಡುವರಾಗಬಹುದಷ್ಟೆ. ಅದನ್ನು ನಿಲ್ಲಿಸುವುದಕ್ಕೆ

ಏನು ತಾನೇ ಇದೆ?" ಎಂದು ಕೇಳಿದನು. ಆಗ ಭೀಷ್ಮನು—"ನಾನು ಮದುವೆಯನ್ನೇ ಮಾಡಿಕೊಳ್ಳುವುದಿಲ್ಲವೆಂದು ಶಪಥಮಾಡುವವನಾಗುತ್ತೇನೆ. ಚಿಕ್ಕಪ್ಪನ ಸಂಗಡ ವ್ಯಾಜ್ಯವಾಡುವುದಕ್ಕೆ ಮಕ್ಕಳೇ ನನಗಿರುವುದಿಲ್ಲ. ಈಗಲಾದರೂ ನನ್ನ ತಂದೆಯ ಬಯಕೆಯನ್ನು ಸಲ್ಲಿಸುವನಾಗು" ಎಂದು ನುಡಿದನು. ಭೀಕರಗಳಾದ ಭೀಷ್ಮನ ಶಪಥಗಳನ್ನು ದೇವತೆಗಳು ಕೇಳಿ ಆಕಾಶವಾಣಿಯಲ್ಲಿ—"ಬಹುಕಾಲದಿಂದಲೂ ದೇವವ್ರತನೆಂದು ಪ್ರಸಿದ್ಧನಾಗಿದ್ದನು, ಈಗ ಭೀಷ್ಮನೆಂಬ ಹೆಸರಿನಿಂದ ಶೋಭಿಸುವನಾಗಲಿ" ಎಂದರು. ತನಗೆ ತಾನೇ ಭೀಕರನಾದನೇ ಹೊರತು, ಇತರರಿಗಿಲ್ಲ. ಭಾರತೀಯರ ಪ್ರೀತಿಗೂ ಪ್ರೇಮಕ್ಕೂ ಪಾತ್ರನಾಗಿರುವನು. ಶಂತನು, ನಡೆದ ಸಂಗತಿಯನ್ನೂ ತನ್ನ ಮಗನ ಶಪಥಗಳನ್ನೂ ಕೇಳಿ, ಪ್ರತಿಕ್ರಿಯೆ ಯಾವುದೂ ಇಲ್ಲವೆಂಬುದನ್ನು ತಿಳಿದವನಾಗಿ, ಸತ್ಯವತಿಯನ್ನು ಮದುವೆ ಮಾಡಿಕೊಳ್ಳಲು ಒಪ್ಪಿದನು. ಭೀಷ್ಮನ ಸ್ಥೈರ್ಯ ಧೈರ್ಯಾದಿ ಸದ್ಗುಣಗಳನ್ನು ಮೆಚ್ಚಿ—"ನೀನು ಅಪೇಕ್ಷಿಸಿದ ಹೊರತು ನಿನಗೆ ಸಾವು ಬಾರದಿರಲಿ" ಎಂದು ಹರಸಿದನು. ತಮ್ಮ ಕಾಮಗಳನ್ನು ಈ ರೀತಿಯಲ್ಲಿ ಗೆದ್ದು, ತಮ್ಮ ವೀರ್ಯವನ್ನು ಈ ರೀತಿಯಲ್ಲಿ ಕಾಪಾಡಿಕೊಳ್ಳುವ ಮಾನವರು ತಮಗೆ ಇಚ್ಛೆ ಇರುವವರೆಗೂ ಮೃತ್ಯುವನ್ನು ಸೋಲಿಸಬಲ್ಲವರಾಗಿರಬಹುದು. (ಮಹಾಭಾರತ. ಆದಿಪರ್ವ. ಅ. ೧೦೦).

ದುರ್ಯೋಧನನು ಮೂರ್ಖನಾಗಿಯೂ ಅಹಂಕಾರಿಯಾಗಿಯೂ ಮಾತಾಪಿತೃಗಳ ಮಾತುಗಳನ್ನು ಮೀರುವವನಾಗಿಯೂ ಇದ್ದುದರಿಂದ ಅವನ ವಂಶವನ್ನೇ ಹಾಳುಮಾಡಿದ ಯುದ್ಧವು ಶೀಘ್ರದಲ್ಲಿ ಆಗುವಂತಾಯಿತು. ಅವನ ತಂದೆಯು ಅವನಿಗೆ—"ಪಾಂಡವರು ದಾಯಭಾಗವನ್ನು ಕೇಳುವುದು ನ್ಯಾಯವಾಗಿಯೇ ಇದೆ, ಪಿತರಾರ್ಜಿತ ಸ್ವತ್ತಿನಲ್ಲಿ ಅವರಿಗೆ ಬರುವ ಭಾಗವನ್ನು ಕೊಟ್ಟುಬಿಡು" ಎಂದು ಎಷ್ಟೆಷ್ಟೋ ಸಾರಿ ಹೇಳಿದನು; ಆದರೆ ದುರ್ಯೋಧನನು ತಂದೆಯ ವಿನಯ ವಚನಗಳನ್ನು ತಿರಸ್ಕರಿಸುವವನಾಗಿ, ತನ್ನ ದಾರಿಯನ್ನೇ ಹಿಡಿಯುವವನಾದನು. ಅವನ ತಾಯಿಯಾದ ಗಾಂಧಾರಿಯು ಅವನಿಗೆ "ನಿನ್ನ ಧರ್ಮವನ್ನರಿತು ನೀನು ನಿನ್ನ ತಂದೆಯವರ ಮಾತನ್ನು ನಡೆಯಿಸುವವನಾಗು" ಎಂದು ಸಭಾಸ್ಥಾನದಲ್ಲಿ ಎಲ್ಲರಮುಂದೆಯೂ

ನಿಂತು ವಿಧವಿಧವಲ್ಲಿ ಬೇಡಿಕೊಂಡಾಗಲೂ ಕೂಡ, ಮಾತೃವಾಕ್ಯವನ್ನು ಪರಿಪಾಲಿಸದೆ ಆಕೆಗೆ ಅವಮರ್ಯಾದೆಯಿಂದಲೂ ಕ್ರೌರ್ಯದಿಂದಲೂ ಮಾತನಾಡಿ, ಅಪಜಯವನ್ನು ತನ್ನ ತಲೆಯಮೇಲೆ ತಾನೇ ತಂದುಹಾಕಿಕೊಂಡನು. ತಾಯಿಗೇ ಆಗಲಿ ತಂದೆಗೇ ಆಗಲಿ ಅವಿಧೇಯತ್ವದಿಂದಲೋ ಅವಮರ್ಯಾದೆಯಿಂದಲೋ ಯಾವನು ವ್ಯಥೆಯನ್ನುಂಟುಮಾಡುತ್ತಾನೆಯೋ ಅವನು ಬಾಳುವುದೇ ಇಲ್ಲ.

ಶುಶ್ರೂಷೆಗೂ ಪೂಜೆಗೂ ಅರ್ಹರಾದವರೆಂದು ಸನಾತನ ಧರ್ಮವು ಮಾತಾಪಿತೃಗಳ ಜತೆಗೆ ವಿದ್ಯಾಗುರುವನ್ನೂ ಸೇರಿಸುತ್ತದೆ, ಮತ್ತು ಹಿಂದೂ ಬಾಲಕರಿಗೆಲ್ಲಾ ಮೇಲುಪಙ್ತಿಯಾಗಿರುವುದಕ್ಕೆ ಯೋಗ್ಯರಾದ ಪೂರ್ವದ ಮಹಾ ಮಹಾ ಶೂರರಲ್ಲಿ ಈ ಸದ್ಗುಣವೂ ಇದ್ದುದನ್ನು ನಾವು ತಿಳಿದಿರುತ್ತೇವೆ. ಭೀಷ್ಮಾಚಾರ್ಯರಲ್ಲಿಯೂ ದ್ರೋಣಾಚಾರ್ಯರಲ್ಲಿಯೂ, ಅವರಿಗೆ ವಿರೋಧಿಗಳಾಗಿ ಯುದ್ಧ ಮಾಡಲೇಬೇಕಾಗಿ ಬಂದಾಗಲೂ ಕೂಡ, ಪಾಂಡವರಿಗೆ ಎಷ್ಟು ಪ್ರೀತಿಯಿತ್ತು, ಎಷ್ಟು ಗೌರವವಿತ್ತು! ಕುರುಕ್ಷೇತ್ರದಲ್ಲಿ, ಯುದ್ಧಾರಂಭವಾಗುವುದಕ್ಕೆ ಮುಂಚೆ, ಅವರುಗಳು ತಮ್ಮ ಗುರುಗಳ ಪಾದಾರವಿಂದಗಳಿಗೆ ಭಕ್ತಿಯಿಂದೆರಗಿದುದನ್ನು ನೋಡಿರಿ! ದೃಷ್ಟದ್ಯುಮ್ನನು ದ್ರೋಣಾಚಾರ್ಯರ ತಲೆಯ ಬಿಳಿಯ ಕೂದಲನ್ನು ಮುಷ್ಟಿಯಲ್ಲಿ ಹಿಡಿದುಕೊಂಡಾಗ, ಅರ್ಜುನನು ಆರ್ತಸ್ವರದಿಂದ ಕೂಗಿದುದನ್ನು ಕೇಳಿರಿ! "ಗುರುಗಳನ್ನು ಜೀವದೊಡನೆಯೇ ತರುವವನಾಗು! ಅವರನ್ನು ಕೊಲ್ಲಬೇಡ ಕೊಲ್ಲಬೇಡ! ಅವರನ್ನು ಕೊಲ್ಲಲಾಗದು!" ಎಂದು ಕೂಗಿಕೊಂಡನಲ್ಲವೆ? ಕೊಲೆಯ ಪಾತಕವು ಪೂರಯಿಸಿ ಹೋದಾಗ—"ನಾಣಿಲ್ಲದ ನೀಚನಾಗಿ ನಾನು ನರಕಕ್ಕುರುಳಿದೆ!" ಎಂದು ಅರ್ಜುನನು ಬಿಕ್ಕಿಬಿಕ್ಕಿ ಅತ್ತನು. (ಮಹಾಭಾರತ. ದ್ರೋಣಪರ್ವ. ಅ. ೧೯೩—೧೯೮).

ಮೊದಲೇ ಕೊಟ್ಟ ಮಾತನ್ನು ನಡೆಯಿಸುವಾಗಲೂ, ಕರ್ತವ್ಯವೆಂದೇ ಸ್ಪಷ್ಟವಾಗಿ ತೋರುವಾಗಲೂ, ಗುರುವಚನವನ್ನೂ ಮೀರಿ ನಡೆಯಬಹುದೆಂದು ಸನಾತನ ಧರ್ಮವು ತಿಳಿಸುತ್ತದೆ. ಧರ್ಮಕ್ಕೆಲ್ಲಾ ಉದಾಹರಣರೂಪವಾಗಿರುವ ಭೀಷ್ಮಾಚಾರ್ಯರ ಚರಿತ್ರೆಯಲ್ಲಿಯೇ ಸ್ಪಷ್ಟವಾಗಿ ಇದಕ್ಕೆ ನಿದರ್ಶನ ವಿರುತ್ತದೆ. ತಂದೆಯಾದ ಶಂತನುವಿನ ಮರಣಾನಂತರದಲ್ಲಿ,

ಭೀಷ್ಮಾಚಾರ್ಯರು, ತಾವು ಮಾತು ಕೊಟ್ಟಿದ್ದಂತೆಯೇ, ತಮ್ಮ ತಮ್ಮನಾದ
ಚಿತ್ರಾಂಗದನನ್ನು ಸಿಂಹಾಸನದಮೇಲೆ ಕುಳ್ಳಿರಿಸಿದರು; ಚಿತ್ರಾಂಗದನು
ಯುದ್ಧವೊಂದರಲ್ಲಿ ಹತನಾಗಲು, ತಮ್ಮ ಎರಡನೆಯ ತಮ್ಮನಾದ ವಿಚಿತ್ರ
ವೀರ್ಯನನ್ನು ಹಸ್ತಿನಾಪುರಕ್ಕೆ ಅಧಿಪತಿಯಾಗಿ ಮಾಡಿದರು. ವಿಚಿತ್ರವೀ
ರ್ಯನಿಗೆ ತಕ್ಕ ಕನ್ಯಕೆಯರನ್ನು ವಿಚಾರಿಸುತ್ತಿರಲು, ಕಾಶೀರಾಜನಿಗೆ ಮೂರು
ಮಂದಿ ಪುತ್ರಿಯರಿರುವಂತೆಯೂ, ಅವರಿಗಾಗಿ ಕಾಶೀರಾಜನು ಸ್ವಯಂವರ
ಮಹೋತ್ಸವವನ್ನು ಮಾಡುವಂತೆಯೂ, ಆ ಪುತ್ರಿಯರು ಸರ್ವ ಪ್ರಕಾರ
ದಲ್ಲಿಯೂ ವಿವಾಹಾರ್ಹರಾಗಿರುವಂತೆಯೂ ಅವರಿಗೆ ತಿಳಿಯ ಬಂತು.
ಕಾಶಿಗೆ ಹೋಗಿ, ನಿಜಭುಜ ಪರಾಕ್ರಮದಿಂದ ಅಲ್ಲಿ ನೆರೆದಿದ್ದ ರಾಜರನ್ನು
ಗೆದ್ದು, ಆ ಕನ್ನೆಯರನ್ನು ಕರೆದು ತಂದರು. ಹಸ್ತಿನಾವತಿಗೆ ಬಂದಮೇಲೆ
ಆ ಪುತ್ರಿಯರಲ್ಲಿ ಕಿರಿಯರಿಬ್ಬರು, ಅಂಬಿಕೆ ಅಂಬಾಲಿಕೆ ಯೆಂಬುವರು,
ವಿಚಿತ್ರವೀರ್ಯನನ್ನು ವರಿಸುವುದಕ್ಕೆ ಒಪ್ಪಿದರು. ಹಿರಿಯಳಾದ ಅಂಬೆಯಾ
ದರೋ ತಾನು ವರಿಸುವೆನೆಂದು ಮೊದಲೇ ತಾನು ನಿಶ್ಚಯಮಾಡಿಕೊಂಡಿದ್ದ,
ಬೇರೊಂದು ದೇಶದ ದೊರೆಯಾದ ಸಾಲ್ವನನ್ನು ವರಿಸಲಿಚ್ಛಯಿಸಿದಳು.
(ಮಹಾಭಾರತ. ಆದಿಪರ್ವ. ಅ. ೧೦೨). ಭೀಷ್ಮಾಚಾರ್ಯರು ಆಕೆಯನ್ನು
ಪರಿವಾರ ಸಮೇತವಾಗಿ ಸಾಲ್ವರಾಜನೆಡೆಗೆ ಕಳುಹಿಸಿದರು. ಆದರೆ ಸಾಲ್ವನು
ಈಕೆಯು ಯುದ್ಧದಲ್ಲಿ ಗೆಲ್ಲಲ್ಪಟ್ಟಿರುವಳು, ಇವಳನ್ನು ದಾನವಾಗಿ ನಾನು
ಸ್ವೀಕರಿಸಲಾರೆನು ಎಂದು ಹೇಳಿ ಅವಳನ್ನು ಭೀಷ್ಮರೆಡೆಗೇ ಮರಳಿ ಕಳುಹಿ
ಸಿದನು. ಅಂಬೆಯು ಆಗ ಭೀಷ್ಮಾಚಾರ್ಯರಿಗೆ—"ಯುದ್ಧದಲ್ಲಿ ನನ್ನನ್ನು
ನೀವು ಗೆದ್ದಿರಿ ಯೆಂದು ಸಾಲ್ವನು ನನ್ನನ್ನು ವರಿಸದಿರುವುದರಿಂದ, ನೀವೇ
ನನ್ನನ್ನು ಮದುವೆಮಾಡಿಕೊಳ್ಳಬೇಕು" ಎಂದಳು. ಭೀಷ್ಮರು ಅವಳಿಗಾಗಿ
ಬಹಳ ಚಿಂತೆಪಟ್ಟರು. ಬದುಕಿರುವವರೆಗೂ ಬ್ರಹ್ಮಚಾರಿಯಾಗಿಯೇ
ಇರುವೆನೆಂದು ಶಪಥಮಾಡಿದ್ದುದರಿಂದ ಅವಳನ್ನು ಮದುವೆಯಾಗುವುದಕ್ಕೆ
ಒಪ್ಪಲಿಲ್ಲ. ಆಮೇಲೆ ಅಂಬೆಯು ಕುಪಿತಳಾಗಿ, ಭೀಷ್ಮಾಚಾರ್ಯರ ಗುರು
ಗಳಾದ ಪರಶುರಾಮರ ಸನ್ನಿಧಿಗೆ ಹೋದಳು. ಪರಶುರಾಮರು ಅವಳ
ಪಕ್ಷವನ್ನು ವಹಿಸಿ, ಅಂಬೆಯನ್ನು ಮದುವೆಯಾಗೆಂದು ಭೀಷ್ಮಾಚಾರ್ಯರಿಗೆ
ಆಜ್ಞಾಪಿಸಿದರು. ತಮ್ಮ ಗುರುಗಳ ನ್ಯಾಯವಿರುದ್ಧವಾದ ಆಜ್ಞೆಯನ್ನು

ನೆರವೇರಿಸುವುದಕ್ಕಿಂತ ತಮ್ಮ ಶಪಥವನ್ನು ಕಾಪಾಡಿಕೊಳ್ಳುವುದೇ ಗುರುತರ ಕರ್ತವ್ಯವೆಂದು ಭಾವಿಸಿ, ಭೀಷ್ಮರು ಪರಶುರಾಮರ ಮಾತನ್ನು ಕೇಳದೇ ಹೋದರು. ಕೊನೆಗೆ ಪರಶುರಾಮರಿಗೂ ಭೀಷ್ಮರಿಗೂ ಘೋರ ಯುದ್ಧವು ಪ್ರಾರಂಭವಾಗಿ, ಅನೇಕ ದಿವಸಗಳವರೆಗೂ ಕದನವು ನಡೆಯಿತು; ಇಬ್ಬರೂ ಗಾಯಗಳನ್ನು ಪಡೆದರು; ಆಯಾಸದಿಂದಲೂ ರಕ್ತಸ್ರಾವದಿಂದಲೂ, ಗಾಯದ ಗಾಸಿಯಿಂದಲೂ ಇಬ್ಬರೂ ಅನೇಕ ವೇಳೆ ಮೂರ್ಛಿತರಾದರು. ಆದರೂ ಎಚ್ಚೆತ್ತುಕೂಡಲೆ ಇಬ್ಬರೂ ಮರಳಿ ಕದನವೆಸಗಿದರು. ಕೊನೆಗೆ, ವೃದ್ಧರಾದ ಪರಶುರಾಮರು, ಇಪ್ಪತ್ತೆಂಟನೆಯ ದಿನದಲ್ಲಿ ತಾವಿನ್ನು ಕಾದಲಾರೆವೆಂದು ಹೇಳಿದುದರಿಂದ, ಭೀಷ್ಮರು ತಮ್ಮ ಹಠವನ್ನು ಸಾಧಿಸುವವರಾದರು. ಆದರೂ, ಮನಃಪೂರ್ವಕವಾಗಿಯಲ್ಲದಿದ್ದರೂ, ಭೀಷ್ಮರು ಅಂಬೆಗೆ ಬಹು ಕ್ಲೇಶವನ್ನುಂಟುಮಾಡಿದ್ದುದರಿಂದ, ಅಂಬೆಯ ಮೂಲಕವಾಗಿ ಭೀಷ್ಮರಿಗೆ ಮರಣವುಂಟಾಗಬೇಕೆಂದು ಅವರ ಕರ್ಮ ಪರಿಪಾಕವೇ ತೀರ್ಮಾನಮಾಡಿತು.

ವೃದ್ಧರ ಸೇವೆಯನ್ನೆಸಗಬೇಕು ಎಂಬುದು ಹಿರಿಯರ ಸಂಗಕ್ಕೆ ಸಂಬಂಧಪಡುವ ಕೊನೆಯ ಸದ್ಗುಣ. ಹಿರಿಯರ ಸಂಗದ ಏಳಿಗೆಯಲ್ಲಿ ಇದು ಪುಷ್ಪಪ್ರಾಯವಾಗಿರುವುದು, ಮತ್ತು ಪುರಾತನ ಕಾಲದ ಆರ್ಯರಲ್ಲಿ ಇದೂ ಒಂದು ದೊಡ್ಡ ಗುಣವಾಗಿತ್ತು. ದೀರ್ಘಾನುಭವದ ಫಲವಾಗಿರುವ ದಿವ್ಯಜ್ಞಾನವು ಒಂದು ಮಹಾನಿಧಿ, ಈ ನಿಧಿಯು ವೃದ್ಧರ ಸ್ವಾಧೀನದಲ್ಲಿರುವುದು; ಹೇಳಿದುದನ್ನು ಲಾಲಿಸಿ ಕೇಳುವ, ವಿನಯ ಸಂಪನ್ನರಾದ ಮತ್ತು ಮರ್ಯಾದೆಯನ್ನು ಬಲ್ಲ ಬಾಲರಿಗೆ ಅವರು ತಮ್ಮ ನಿಧಿಯನ್ನು ಮನಃಪೂರ್ವಕವಾಗಿ ಸೂರೆಗೊಡಲು ಸಿದ್ಧರಾಗಿರುವರು. ನಮ್ಮ ನವೀನ ಕಾಲಸ್ಥಿತಿಯಲ್ಲಿ, ವೃದ್ಧರಿಗೆ ಮಾಡಬೇಕಾದ ಸೇವೆಯನ್ನು ನಾವು ಮರೆಯುವಂತಾಗಿರುವುದರಿಂದ, ಈ ಸದ್ಗುಣ ಸಂಪಾದನೆಗಾಗಿ ನಾವು ನಿರಾಲಸ್ಯದಿಂದ ಕೃಷಿಮಾಡುವುದು ನಮ್ಮ ಕರ್ತವ್ಯವಾಗಿರುತ್ತದೆ.

## ಸ್ಮೃತ್ಯಾದಿ ವಚನಗಳು.

ನ ಯುಜ್ಯಮಾನಯಾ ಭಕ್ತ್ಯಾ ಭಗವತ್ಯಖಿಲಾತ್ಮನಿ |
ಸದೃಶೋಽಸ್ತಿ ಶಿವಃ ಪಂಥಾ ಯೋಗಿನಾಂ ಬ್ರಹ್ಮಸಿದ್ಧಯೇ ||

ಜ್ಞಾನವೈರಾಗ್ಯಯುಕ್ತೇನ ಭಕ್ತಿಯುಕ್ತೇನ ಚಾತ್ಮನಾ |
ಪರಿಪಶ್ಯತ್ಯುದಾಸೀನಂ ಪ್ರಕೃತಿಂ ಚ ಹತೌಜಸಮ್ ||
ಸತಾಂ ಪ್ರಸಂಗಾನ್ ಮಮ ವೀರ್ಯಸಂವಿದೋ
ಭವನ್ತಿ ಹೃತ್ಕರ್ಣರಸಾಯನಾಃ ಕಥಾಃ |
ತಜ್ಜೋಷಣಾದಾಶ್ವಪವರ್ಗವರ್ತ್ಮನಿ
ಶ್ರದ್ಧಾ ರತಿರ್ಭಕ್ತಿರನುಕ್ರಮಿಷ್ಯತಿ ||
ಭಕ್ತ್ಯಾಪುಮಾನ್ ಜಾತವಿರಾಗ ಐಂದ್ರಿಯಾ
ದ್ದೃಷ್ಟಶ್ರುತಾನ್ಮದ್ರಚನಾನುಚಿಂತಯಾ |
ಚಿತ್ತಸ್ಯ ಯತ್ತೋ ಗ್ರಹಣೇ ಯೋಗಯುಕ್ತೋ
ಯತಿಷ್ಯತೇ ಋಜುಭಿರ್ಯೋಗಮಾರ್ಗೈಃ ||
ಅಸೇವಯಾಯಂ ಪ್ರಕೃತೇರ್ಗುಣಾನಾಂ |
ಜ್ಞಾನೇನ ವೈರಾಗ್ಯವಿಜೃಂಭಿತೇನ |
ಯೋಗೇನ ಮಯ್ಯರ್ಪಿತಯಾ ಚ ಭಕ್ತ್ಯಾ |
ಮಾಂ ಪ್ರತ್ಯಗಾತ್ಮಾನಮಿಹಾವರುಂಧೇ ||

(ವಿಷ್ಣು ಭಾಗವತ. ಸ್ಕಂದ. ೩, ಅ. ೨೫, ಶ್ಲೋ ೧೯,೧೮,೨೫,೨೭).

"ಅಖಿಲಾತ್ಮನಾದ ಭಗವಂತನಲ್ಲಿ ಭಕ್ತಿಯಿಡುವುದೊಂದಲ್ಲದೆ ಯೊ
ಗಳಿಗೆ ಬ್ರಹ್ಮಸಿದ್ಧಿಗೆ ಮತ್ತಾವ ಶಿವಪಥವೂ ಇಲ್ಲ.

"ಜ್ಞಾನ ವೈರಾಗ್ಯ ಭಕ್ತಿಗಳಿಂದ ಭರಿತವಾಗಿರುವ ಚಿತ್ತವನ್ನುಳ್ಳ
ನಾಗಿ ಯೋಗಿಯು ಪ್ರಕೃತಿಗೆ ಬಲ ಕಡಮೆಯಾಗುವುದನ್ನೂ ಪುರುಷನು
ಲಿಪ್ತನಾಗಿರುವುದನ್ನೂ ಕಾಣುವನಾಗುವನು.

"ಸತ್ಪುರುಷರೆಲ್ಲೆಲ್ಲಿ ಸೇರುವರೋ ಅಲ್ಲಲ್ಲಿ ನನ್ನ ಪ್ರಭಾವದ
ಜ್ಞಾನವನ್ನುಂಟುಮಾಡುವ ಮತ್ತು ಹೃತ್ಕರ್ಣಗಳಿಗೆ ರಸಾಯನಗಳಾಗಿರುವ
ಕಥೆಗಳು ಕಥಿಸಲ್ಪಡುವುವು. ಅವುಗಳ ಸೇವನೆಯಿಂದ ಮೋಕ್ಷಮಾ
ದಲ್ಲಿ ಧ್ಯಾನಮನಸಿಗೆ ಶ್ರದ್ಧಾ ರತಿ ಭಕ್ತಿಗಳು ಕ್ರಮ ಕ್ರಮವಾಗಿ ಬಳೆ
ಯುವುವು."

"ನನ್ನಲ್ಲಿ ಭಕ್ತಿಯಿಟ್ಟಿರುವನಾದುದರಿಂದ ಐಂದ್ರಿಯ ವಿಷಯುಗಳಲ್ಲಿ
ಮನಸ್ಸನ್ನಿಡದವನಾಗಿ ವೈರಾಗ್ಯವನ್ನು ಪಡೆದು, ನನ್ನ ರಚನೆಯ ರಹಸ್ಯಗ

ಳನ್ನೇ ಚಿಂತಿಸುತ್ತಾ, ಮನಸ್ಸನ್ನು ನಿಗ್ರಹಿಸುತ್ತಾ, ಯೋಗದ ಋಜುಮಾರ್ಗಗಳಿಂದ ಮೋಕ್ಷಕ್ಕೆ ಯತ್ನಿಸುವನು.

"ಪ್ರಕೃತಿ ಗುಣಗಳ ಸೇವೆಯನ್ನು ಬಿಡುತ್ತಾ ವೈರಾಗ್ಯದ ಬಲದಿಂದ ತನ್ನ ಜ್ಞಾನಯೋಗಗಳನ್ನು ವಿಜೃಂಭಿಸಿಕೊಳುತ್ತಾ ನನಗರ್ಪಿತವಾಗಿರುವ ಭಕ್ತಿಯ ಪ್ರಭಾವದಿಂದ ಪ್ರತ್ಯಗಾತ್ಮನಾದ ನನ್ನನ್ನು ತನ್ನಲ್ಲಿ ಹಿಡಿದು ನಿಲ್ಲಿಸುವನಾಗುತ್ತಾನೆ."

ಸ್ವಭಾವಮೇಕೇ ಕವಯೋ ವದಂತಿ ಕಾಲಂ ತಥಾನ್ಯೇ ಪರಿಮುಹ್ಯ
ಮಾನಾಃ ‖
ದೇವಸ್ಯೈಷ ಮಹಿಮಾ ತು ಲೋಕೇ ಯೇನೇದಂ ಭ್ರಾಮ್ಯತೇ
ಬ್ರಹ್ಮಚಕ್ರಮ್ ‖
ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರ
ಮಮ್ ಚ ದೈವತಮ್ ‖
ಪತಿಂ ಪತೀನಾಂ ಪರಮಂ ಪರಸ್ತಾದ್ವಿದಾಮ ದೇವಂ ಭುವನೇಶ
ಮೀಡ್ಯಮ್ ‖
ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ।
ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ ।
ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ।
ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ‖
ನ ತಸ್ಯ ಕಶ್ಚಿತ್ಪತಿರಸ್ತಿ ಲೋಕೇನಚೇಶಿತಾ ನೈವ ಚ ತಸ್ಯ ಲಿಂಗಂ ।
ಸಕಾರಣಂ ಕರಣಾಧಿಪಾಧಿಪೋ ನಚಾಸ್ಯಕಶ್ಚಿಜ್ಜನಿತಾನಚಾಧಿಪಃ ‖
ಏಕೋ ವಶೀ ನಿಷ್ಕ್ರಿಯಾಣಾಂ ಬಹೂನಾಂ
ಏಕಂ ಬೀಜಂ ಬಹುಧಾ ಯಃ ಕರೋತಿ ।
ತಮಾತ್ಮಸ್ಥಂ ಯೇನು ಪಶ್ಯಂತಿ ಧೀರಾಃ
ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ‖
ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾ
ಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್ ।

ತತ್ಕಾರಣಂ ಸಾಂಖ್ಯಯೋಗಾದಿಗಮ್ಯಂ
ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ ||

(ಶ್ವೇತಾಶ್ವತರೋಪನಿಷತ್ತು. VI, 1, 7, 8, 9, 12, 13).

"ಈ ಜಗತ್ತು ತನ್ನ ಸ್ವಭಾವದಿಂದಲೇ ಆಯಿತೆಂದು ಕೆಲವರು, ಕಾಲವಶದಿಂದಾಯಿತೆಂದು ಕೆಲವರು ಮೋಹಪ್ರಭಾವದಿಂದ ಹೇಳುತ್ತಾರೆ. ನಿಜವಾಗಿಯೂ ಲೋಕದಲ್ಲೀಬ್ರಹ್ಮಚಕ್ರವು ಭಗವಂತನ ಮಹಿಮೆಯಿಂದಲೇ ಭ್ರಮಿಸುತ್ತಲಿರುತ್ತದೆ.

"ಈಶ್ವರರೊಳಗೆಲ್ಲಾ ಪರಮ ಮಹೇಶ್ವರನೆಂದು, ದೇವತೆಗಳೊಳಗೆಲ್ಲಾ ಪರಮ ದೇವನೆಂದು, ಪತಿಗಳೊಳಗೆಲ್ಲಾ ಪರಮ ಪತಿಯೆಂದು, ಹಿರಿಯರೊಳಗೆಲ್ಲಾ ಹಿರಿಯನೆಂದು, ಪರಮ ದೇವನೆಂದು, ಪೂಜ್ಯನಾದ ಭುವನೇಶನೆಂದು (ಭಗವಂತನನ್ನು) ನಾವು (ಉಪನಿಷತ್ತುಗಳು) ಭಾವಿಸುತ್ತೇವೆ.

"ಆ ಭಗವಂತನಿಗೆ ಕಾರಣವೂ ಇಲ್ಲ, ಕಾರ್ಯವೂ ಇಲ್ಲ, ಸಮರೂ ಇಲ್ಲ ಅಧಿಕರೂ ಇಲ್ಲ, ಅವನ ಪರಶಕ್ತಿಯು ವಿವಿಧ ರೂಪಗಳಾಗಿದೆಯೆಂದು ಶ್ರವಣಮಾಡಲ್ಪಡುತ್ತದೆ, ಮತ್ತು ಅವನ ಜ್ಞಾನ ಬಲ ಕ್ರಿಯೆಗಳು ನೈಸರ್ಗಿಕಗಳು.

"ಜಗತ್ತಿನಲ್ಲಿ ಅವನಿಗೆ ಪತಿಯಾಗಿ ಯಾರೂ ಇಲ್ಲ, ಈಶನಾಗಿ ಯಾರೂ ಇಲ್ಲ, ಲಿಂಗವಾಗಿ ಯಾವುದೂ ಇಲ್ಲ. ಅವನೇ ಕಾರಣನು, ಕರಣಾಧಿಪರಿಗೆಲ್ಲಾ ಅಧಿಪನು; ಅವನಿಗೆ ಜನಕನಿಲ್ಲ, ಅಧಿಪನಿಲ್ಲ.

"ನಿಷ್ಕ್ರಿಯರಾದ ಅನೇಕರಿಗೆಲ್ಲಾ ಏಕಾಧಿಪನಾಗಿಯೂ, ಒಂದೇ ಬೀಜವನ್ನು ಬಹುವಾಗಿ ಮಾಡುವವನಾಗಿಯೂ, ಆತ್ಮಸ್ಥನಾಗಿಯೂ ಇರುವ ಅವನನ್ನು ಯಾವ ಧೀರರು ಕಾಣುತ್ತಾರೆಯೋ ಅವರಿಗೇ ಶಾಶ್ವತ ಸುಖ, ಇತರರಿಗಿಲ್ಲ.

"ನಿತ್ಯರೊಳಗೆಲ್ಲಾ ನಿತ್ಯನು, ಚೇತನರೊಳಗೆಲ್ಲಾ ಚೇತನನು, ಬಹುಗಳಲ್ಲಿ ಏಕನು, ಸರ್ವಾಭೀಷ್ಟಗಳನ್ನೂ ಸಲ್ಲಿಸುವವನು—ಸಾಂಖ್ಯಯೋಗಗಮ್ಯನಾದ ಆ ಕಾರಣನನ್ನು ತಿಳಿದವನಾಗಿ, ಮಾನವನು ಸರ್ವಪಾಶಗಳಿಂದಲೂ ವಿಮುಕ್ತನಾಗುವನು."

ಅರಾಜಕೇ ಹಿ ಲೋಕೇಽಸ್ಮಿನ್ ಸರ್ವತೋ ವಿದ್ರುತೇ ಭಯಾತ್ ।
ರಕ್ಷಾರ್ಥಮಸ್ಯ ಸರ್ವಸ್ಯ ರಾಜಾನಮಸೃಜತ್ಪ್ರಭುಃ ॥
ಇನ್ದ್ರಾನಿಲಯಮಾರ್ಕಾಣಾಮಗ್ನೇಶ್ಚ ವರುಣಸ್ಯ ಚ ।
ಚನ್ದ್ರವಿತ್ತೇಶಯೋಶ್ಚೈವ ಮಾತ್ರಾ ನಿರ್ಹೃತ್ಯ ಶಾಶ್ವತೀಃ ॥
ತದರ್ಥಂ ಸರ್ವಭೂತಾನಾಂ ಗೋಪ್ತಾರಂ ಧರ್ಮಮಾತ್ಮಜಮ್ ।
ಬ್ರಹ್ಮತೇಜೋಮಯಂ ದಣ್ಡಮಸೃಜತ್ಪೂರ್ವಮೀಶ್ವರಃ ॥
ದಣ್ಡಃ ಶಾಸ್ತಿ ಪ್ರಜಾಸ್ಸರ್ವಾಃ ದಣ್ಡ ಏವಾಭಿರಕ್ಷತಿ ।
ದಣ್ಡಸ್ಸುಪ್ತೇಷು ಜಾಗರ್ತಿ ದಣ್ಡಂ ಧರ್ಮಂ ವಿದುರ್ಬುಧಾಃ ॥
ತಸ್ಯಾಹುಸ್ಸಂಪ್ರಣೇತಾರಂ ರಾಜಾನಂ ಸತ್ಯವಾದಿನಮ್ ।
ಸಮೀಕ್ಷ್ಯಕಾರಿಣಂ ಪ್ರಾಜ್ಞಂ ಧರ್ಮಕಾಮಾರ್ಥಕೋವಿದಮ್ ॥
ತಂ ರಾಜಾ ಪ್ರಣಯನ್ ಸಮ್ಯಕ್ ತ್ರಿವರ್ಗೇಣಾಭಿವರ್ಧತೇ ।
ಕಾಮಾತ್ಮಾ ವಿಷಮಃ ಕ್ಷುದ್ರೋ ದಣ್ಡೇನೈವ ನಿಹನ್ಯತೇ ॥
ದಣ್ಡೋ ಹಿ ಸುಮಹತ್ತೇಜೋ ದುರ್ಧರಶ್ಚಾಕೃತಾತ್ಮಭಿಃ ।
ಧರ್ಮಾದ್ವಿಚಲಿತಂ ಹನ್ತಿ ನೃಪಮೇವ ಸಬಾನ್ಧವಮ್ ॥

(ಮನುಸ್ಮೃತಿ. ಅ. ೭, ಶ್ಲೋ. ೩, ೪, ೧೪, ೧೮, ೨೬—೨೮).

"ಅರಾಜಕರಾಗಿದ್ದ ಜನರು ಭಯದಿಂದ ದಿಕ್ಕಾಪಾಲಾಗಿ ಚದರಿದ್ದಾಗ, ಈ ಸರ್ವಲೋಕ ರಕ್ಷಣಾರ್ಥವಾಗಿ ಭಗವಂತನು ರಾಜನನ್ನು ಸೃಷ್ಟಿಸಿದನು.

"ಇಂದ್ರ, ವಾಯು, ಯಮ, ಸೂರ್ಯ, ಅಗ್ನಿ, ವರುಣ, ಚಂದ್ರ, ಕುಬೇರ—ಇವರುಗಳ ಶಾಶ್ವತಾಂಶಗಳಿಂದ (ರಾಜನನ್ನು) ಸೃಷ್ಟಿಸಿದನು.

"ರಾಜನಿಗಾಗಿ ಈಶ್ವರನು ತನ್ನ ಮಗನಾದ ಧರ್ಮನನ್ನು, ಸರ್ವಭೂತ ರಕ್ಷಕನನ್ನಾಗಿ, ಬ್ರಹ್ಮತೇಜೋಮಯವಾದ ದಂಡರೂಪದಲ್ಲಿ ಸೃಷ್ಟಿಸಿದನು.

"ಈ ದಂಡವೇ ಸರ್ವಪ್ರಜೆಗಳನ್ನೂ ಆಳುವುದು, ಈ ದಂಡವೇ ಸರ್ವರನ್ನೂ ಅಭಿರಕ್ಷಿಸುವುದು ; ಇತರರು ಸುಷುಪ್ತ್ಯವಸ್ಥೆಯಲ್ಲಿರುವಾಗ ದಂಡವು ಜಾಗರಾವಸ್ಥೆಯಲ್ಲಿರುವುದು ; ಬುಧರು ದಂಡವನ್ನೇ ಧರ್ಮವನ್ನಾಗಿ ತಿಳಿವರು.

"ಧರ್ಮಾರ್ಥಕೋವಿದನಾಗಿಯೂ, ಪ್ರಾಜ್ಞನಾಗಿಯೂ, ಸಮೀಕ್ಷ್ಯಕಾರಿಯಾಗಿಯೂ, ಸತ್ಯವಾದಿಯಾಗಿಯೂ ಇರುವ ರಾಜನನ್ನು ದಂಡಧಾರಿಯೆಂದು ಕರೆಯುತ್ತಾರೆ.

"ಆ ದಂಡವನ್ನು ಧರ್ಮದಿಂದ ವಹಿಸುವವನಾಗಿದ್ದರೆ, ರಾಜನು ತ್ರಿವರ್ಗದಿಂದಲೂ ಅಭಿವರ್ಧಿಸುತ್ತಾನೆ; ಕಾಮಾತ್ಮನಾಗಿಯೂ ವಿಷಮನಾಗಿಯೂ ಕ್ಷುದ್ರನಾಗಿಯೂ ಇದ್ದರೆ, ಆ ದಂಡದಿಂದಲೇ ಹತನಾಗುವನು.

"ಆ ದಂಡವೇ ಅಲ್ಲವೆ ಮಹತ್ತಾದ ತೇಜಸ್ಸು! ಆತ್ಮವನ್ನು ಜಯಿಸದೆಯೇ ಇರುವವನರು ಅದನ್ನು ಧರಿಸುವುದು ಕಷ್ಟ; ಧರ್ಮವನ್ನು ಬಿಟ್ಟು ಹೋಗುವ ರಾಜನನ್ನು, ಅವನ ಬಂಧುವರ್ಗದೊಡನೆ, ಅದು ಕೊಲ್ಲುವುದು."

ತೇನ ಧರ್ಮೋತ್ತರಶ್ಚಾಯಂ ಕೃತೋ ಲೋಕೋ ಮಹಾತ್ಮನಾ |
ರಞ್ಜಿತಾಶ್ಚ ಪ್ರಜಾಸ್ಸರ್ವಾಸ್ತೇನ ರಾಜೇತಿ ಶಬ್ದ್ಯತೇ ||
(ಮಹಾಭಾರತ. ಶಾಂತಿಪರ್ವ. ಅ. ೫೯, ಶ್ಲೋ. ೧೩೫).

"ಮಹಾತ್ಮನಾದ ರಾಜನಿಂದ ಈ ಲೋಕವು ಧರ್ಮೋತ್ತರವಾಗಿ ಮಾಡಲ್ಪಟ್ಟಿತು, ಮತ್ತು ಸರ್ವಪ್ರಜೆಗಳೂ ರಂಜಿತರಾದರು. ಆದುದರಿಂದಲೇ ಆ ಮಹಾತ್ಮನನ್ನು ರಾಜನೆನ್ನುತ್ತಾರೆ."

ರಾಜಾ ಪ್ರಜಾನಾಂ ಹೃದಯಂ ಗರೀಯಃ
ಗತಿಃ ಪ್ರತಿಷ್ಠಾ ಸುಖಮುತ್ತಮಂ ಚ |
ಸಮಾಶ್ರಿತಾ ಲೋಕಮಿಮಂ ಪರಂ ಚ
ಜಯನ್ತಿ ಸಮ್ಯಕ್ಪುರುಷಾ ನರೇನ್ದ್ರ ||
ನರಾಧಿಪಶ್ಚಾಪ್ಯನುಶಿಷ್ಯ ಮೇದಿನೀಂ
ದಮೇನ ಸತ್ಯೇನ ಚ ಸೌಹೃದೇನ |
ಮಹದ್ಭಿರಿಷ್ಟ್ವಾ ಕ್ರತುಭಿರ್ಮಹಾಯಶಾಃ
ತ್ರಿವಿಷ್ಟಪೇ ಸ್ಥಾನಮುಪೈತಿ ಶಾಶ್ವತಮ್ ||
(ಮಹಾಭಾರತ. ಶಾಂತಿಪರ್ವ. ಅ. ೬೮, ಶ್ಲೋ. ೫೯, ೬೦).

"ರಾಜನು ಪ್ರಜೆಗಳಿಗೆಲ್ಲಾ ಅಂತರ ಹೃದಯವಾಗಿರುವನು; ಹಿಲ್ಲೈ ಧರ್ಮರಾಜನೇ, ಅವನೇ ಅವರಿಗೆಲ್ಲಾ ಗತಿಯಾಗಿಯೂ ಪ್ರತಿಷ್ಠೆಯಾಗಿಯೂ

ಉತ್ತಮ ಸುಖವಾಗಿಯೂ ಇರುವನು ; ಅವನನ್ನು ಆಶ್ರಯಿಸಿ ಪ್ರಜೆಗಳು ಧರ್ಮನಿರತರಾಗಿ ಇಹವನ್ನೂ ಪರವನ್ನೂ ಗೆಲ್ಲುವರು.

"ರಾಜನೂ ಕೂಡ ಮೇದಿನಿಯನ್ನು ದಮ ಸಹಿತನಾಗಿಯೂ ಸತ್ಯ ಸಹಿತನಾಗಿಯೂ ಸೌಹಾರ್ದ ಸಹಿತನಾಗಿಯೂ ಆಳಿ, ಅನೇಕ ಕ್ರತುಗಳನ್ನೆಸಗಿ, ಮಹಾ ಯಶಸ್ವಿಯಾಗಿ, ಸ್ವರ್ಗದಲ್ಲಿ ಶಾಶ್ವತ ಪದವನ್ನು ಪಡೆಯುವನು."

ಉಪಾಧ್ಯಾಯಾನ್ ದಶಾಚಾರ್ಯ ಆಚಾರ್ಯಾಣಾಂ ಶತಂ ಪಿತಾ |
ಸಹಸ್ರಂ ತು ಪಿತೄನ್ ಮಾತಾ ಗೌರವೇಣಾತಿರಿಚ್ಯತೇ ‖
(ಮನುಸ್ಮೃತಿ. ಅ. ೨, ಶ್ಲೋ. ೧೪೫).

"ಹತ್ತು ಮಂದಿ ಉಪಾಧ್ಯಾಯರಿಗಿಂತಲೂ ಆಚಾರ್ಯನು ಅಧಿಕನು ; ನೂರುಮಂದಿ ಆಚಾರ್ಯರಿಗಿಂತಲೂ ತಂದೆಯು ಅಧಿಕನು ; ಸಾಸಿರಮಂದಿ ತಂದೆಗಳಿಗಿಂತಲೂ ತಾಯಿಯು ಗೌರವಕ್ಕೆ ಅರ್ಹಳು."

ಆಚಾರ್ಯಶ್ಚ ಪಿತಾ ಚೈವ ಮಾತಾ ಭ್ರಾತಾ ಚ ಪೂರ್ವಜಃ |
ನಾರ್ತೇನಾಪ್ಯವಮನ್ತವ್ಯಾ ಬ್ರಾಹ್ಮಣೇನ ವಿಶೇಷತಃ ‖
ತೇಷಾಂ ತ್ರಯಾಣಾಂ ಶುಶ್ರೂಷಾ ಪರಮಂ ತಪಉಚ್ಯತೇ |
ತ ಏವ ಹಿ ತ್ರಯೋ ಲೋಕಾಸ್ತ ಏವ ತ್ರಯಆಶ್ರಮಾಃ ‖
ತ ಏವ ಹಿ ತ್ರಯೋ ವೇದಾಸ್ತ ಏವೋಕ್ತಾಸ್ತ್ರಯೋಗ್ನಯಃ |
ಸರ್ವೇ ತಸ್ಯಾದೃತಾ ಧರ್ಮಾಃ ಯಸ್ಯೈತೇ ತ್ರಯ ಆದೃತಾಃ ‖
ಅನಾದೃತಾಸ್ತು ಯಸ್ಯೈತೇ ಸರ್ವಾಸ್ತಸ್ಯಾಫಲಾಃ ಕ್ರಿಯಾಃ |
(ಮನುಸ್ಮೃತಿ. ಅ. ೨, ಶ್ಲೋ. ೨೨೫, ೨೨೯, ೨೩೦, ೨೩೪).

"ಆಚಾರ್ಯನನ್ನು, ತಂದೆಯನ್ನು, ತಾಯಿಯನ್ನು, ಅಣ್ಣನನ್ನು, ಅವರಿಂದ ನಮಗೆ ಸಂಕಟವುಂಟಾದರೂ, ನಾವು ಅವಮರ್ಯಾದೆಯಿಂದ ಕಾಣಬಾರದು. ಬ್ರಾಹ್ಮಣನಿಗಿದು ವಿಶೇಷ ಧರ್ಮವಾಗಿದೆ.

"ಈ ಮೂರುಮಂದಿಯ ಶುಶ್ರೂಷೆಯು ಪರಮ ತಪಸ್ಸೆಂದು ಹೇಳಲ್ಪಡುತ್ತದೆ.

"ಏಕೆಂದರೆ ಅವರೇ ಲೋಕತ್ರಯಗಳೆಂದು, ಆಶ್ರಮತ್ರಯಗಳೆಂದು, ವೇದತ್ರಯಗಳೆಂದು, ಅಗ್ನಿತ್ರಯಗಳೆಂದೂ ಹೇಳಲ್ಪಡುತ್ತಾರೆ.

"ಈ ಮೂರು ಮಂದಿಯನ್ನು ಆದರಿಸುವುದಾದರೆ, ಸರ್ವ ಧರ್ಮಗಳನ್ನೂ ಆದರಿಸಿದಂತಾಗುವುದು ; ಈ ಮೂರು ಮಂದಿಯನ್ನಾದರಿಸದಿದ್ದರೆ, ಸಕಲ ಕರ್ಮಗಳೂ ನಿಷ್ಫಲಗಳಾಗುವುವು."

ಊರ್ಧ್ವಂ ಪ್ರಾಣಾಹ್ಯುತ್ಕ್ರಮನ್ತಿ ಯೂನಃಸ್ಥವಿರ ಆಯತಿ |
ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ||
ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ |
ಚತ್ವಾರಿ ತಸ್ಯ ವರ್ಧನ್ತೇ ಆಯುಃ ಪ್ರಜ್ಞಾ ಯಶೋ ಬಲಮ್ ||
(ಮನುಸ್ಮೃತಿ. ಅ. ೨, ಶ್ಲೋ. ೧೨೦, ೧೨೧).

"ಹಿರಿಯರು ಕಿರಿಯರೆಡೆಗೈತಂದಾಗ ಕಿರಿಯರ ಪ್ರಾಣಗಳು ದೇಹದಿಂದ ಹೊರಕ್ಕೆ ಬರಲು ಊರ್ಧ್ವಗತಿಯನ್ನೈದುವುವು ; ಪ್ರತ್ಯುತ್ಥಾನಮಾಡಿ ಅವರನ್ನು ಎದುರುಗೊಂಡು, ಅಭಿನಂದಿಸಿದ ಕೂಡಲೇ ಕಿರಿಯರು ಆ ಪ್ರಾಣವಾಯುಗಳನ್ನು ಮರಳಿ ಹೊಂದುತ್ತಾರೆ.

"ನಿತ್ಯವೂ ವೃದ್ಧರನ್ನು ಅಭಿನಂದಿಸಿ ಸೇವಿಸುವ ಶೀಲವುಳ್ಳವನು ನಾಲ್ಕು ಬಗೆಯ ಏಳಿಗೆಯನ್ನು ಹೊಂದುತ್ತಾನೆ. ಆಯುಸ್ಸೂ, ಪ್ರಜ್ಞೆಯೂ, ಯಶಸ್ಸೂ, ಬಲವೂ ಹೆಚ್ಚುವುವು."

ಇದು ಸನಾತನ ಧರ್ಮದೀಪಿಕೆಯಲ್ಲಿ ನೀತಿಪ್ರಕಾಶಿಕೆಯೆಂಬ ತೃತೀಯಭಾಗದಲ್ಲಿ ಗುರುಸಂಗ ಧರ್ಮವಿವರಣೆಯೆಂಬ ಅಷ್ಟಮೋಧ್ಯಾಯ.



# ತೃತೀಯ ಭಾಗ.

## ನವಮಾಧ್ಯಾಯ.

### ಸಮಾನಸಂಗ ಧರ್ಮ ವಿವರಣೆ.



ನಮ್ಮ ಸುತ್ತಲೂ ಇರುವ ನಮಗೆ ಸಮಾನರಾದವರ ಸಂಗಡ ನಮ್ಮ ನಡತೆಗಳನ್ನು ಯಾವ ರೀತಿಯಲ್ಲಿಟ್ಟುಕೊಂಡಿರಬೇಕೋ, ಮತ್ತು ಸ್ವಗೃಹವನ್ನೂ ನೆರೆಯನ್ನೂ ಸುಖದ ತವರಮನೆಯಾಗಿ ಮಾಡಿಟ್ಟುಕೊಳ್ಳುವುದಕ್ಕೆ ಯಾವ ಯಾವ ಧರ್ಮಾಚಾರಗಳನ್ನು ಸ್ವೀಕರಿಸಿ, ಯಾವ ಯಾವ ದುರಾಚಾರಗಳನ್ನು ತ್ಯಜಿಸಬೇಕೋ ಅವುಗಳನ್ನು ಇನ್ನು ವಿಚಾರಮಾಡಿ ತಿಳಿಯಬೇಕಾಗಿದೆ. ಸ್ವಗೃಹದ ವಿಷಯಗಳನ್ನು ಮೊದಲೇ ಪರ್ಯಾಲೋಚನೆಗೆ ತರೋಣ ; ಏಕೆಂದರೆ, ಅವುಗಳು ಬಹು ಮುಖ್ಯಗಳಾಗಿರುವುವು. ಸಂಸಾರದ ಸದ್ಧರ್ಮಗಳನ್ನು ಸದಾಚರಣೆಗೆ ತಂದಿರುವ, ಪರಿಶುದ್ಧಗಳಾದ ಮತ್ತು ಸುಖಕ್ಕೆ ನೆಲೆಮನೆಗಳಾದ ಗೃಹಗಳೇ ಸಂಪದ್ಯುಕ್ತಗಳಾದ ಸಂಸ್ಥಾನಗಳಿಗೂ, ಜಯಲಕ್ಷ್ಮಿಯು ನೆಲೆಗೊಂಡಿರುವ ಜನಸ್ತೋಮ ಸಮುದಾಯಗಳಿಗೂ ಮೂಲಾಧಾರಗಳಾಗಿರುವುವು. ತಾಯಿ ತಂದೆಗಳಲ್ಲಿ ಮಕ್ಕಳು ಹೇಗೆ ನಡೆದುಕೊಳ್ಳಬೇಕೋ ಅದನ್ನು ವಿಚಾರಮಾಡಿ ತಿಳಿದುದಾಯಿತು ; ಪತಿ ಪತ್ನಿಯರುಗಳ ಸಹೋದರೀ ಸಹೋದರರುಗಳ ನಡತೆಗಳನ್ನು ಈಗ ಚಿಂತಿಸಿ ತಿಳಿಯಬೇಕಾಗಿದೆ.

ಪತಿ ಪತ್ನಿಯರ ಪರಸ್ಪರ ಪ್ರೇಮಗಳನ್ನು ಕುರಿತ ಕಥೆಗಳು ಆರ್ಯರ ಗ್ರಂಥಗಳಲ್ಲಿ ಬೇಕಾದಷ್ಟಿರುವುವು. “ಪತಿ ಪತ್ನಿಯರಿಬ್ಬರೂ ಒಬ್ಬರೆ” ಎಂದು ಮನುವು ಹೇಳುತ್ತಾನೆ. (ಮನುಸ್ಮೃತಿ. ಅ. ೯, ಶ್ಲೋ. ೪೫). ಪ್ರೇಮವು ಇಬ್ಬರನ್ನೂ ಒಬ್ಬರನ್ನಾಗಿಯೇ ಮಾಡುವುದು. ಪತಿಯ ಪ್ರೇ

ಮವು ಪೋಷಿಸುವುದಾಗಿಯೂ ರಕ್ಷಿಸುವುದಾಗಿಯೂ ಆದರಿಸುವುದಾಗಿಯೂ ಇರುವುದು ; ಪತ್ನಿಯ ಪ್ರೇಮವು ನಮ್ರತೆಯುಳ್ಳದಾಗಿಯೂ ವಿಲಾಸಯುಕ್ತವಾಗಿಯೂ ಭಕ್ತಿಪೂರಿತವಾಗಿಯೂ ಇರುವುದು. "ಪತಿ ಪತ್ನಿಯರು ಬದುಕಿರುವವರೆಗೂ ವ್ಯಭಿಚಾರಿಗಳಾಗದಿರಲಿ" ಎಂದು ಮನುವು ಹೇಳುತ್ತಾನೆ. (ಮನುಸ್ಮೃತಿ. ಅ. ೯, ಶ್ಲೋ. ೧೦೧). ರಾಮಚಂದ್ರನೂ ಸೀತೆಯೂ ದಂಪತಿಗಳಿಗೆಲ್ಲಾ ಮೇಲುಪಙ್ಕ್ತಿಯಾಗಿದಾರೆ; ಸಂಸಾರದ ಸುಖಗಳನ್ನೊಡಗೂಡಿ ಅನುಭವಿಸುವರು ; ಸಂಕಟಗಳನ್ನೂ ಒಡಗೂಡಿಯೇ ಅನುಭವಿಸುವರು ; ಸಂದಿಗ್ಧ ಕಾರ್ಯಗಳಲ್ಲಿ ಪರಸ್ಪರವಾಗಿ ಆಲೋಚನೆಗಳನ್ನು ಕೇಳುವರು ; ಕಷ್ಟಗಳನ್ನು ಇಬ್ಬರೂ ಹಂಚಿಕೊಳ್ಳುವರು. ಮೊದಲು ಮೊದಲಲ್ಲಿ ಇಬ್ಬರೂ ಪರಮ ಸುಖಿಗಳಾಗಿರುವರು ; ಹೊತ್ತು ಮೀಳಗದೆ ಇರುವವರೆಗೂ ರಾಜಪುತ್ರನೂ ರಾಜಪುತ್ರಿಯೂ ಆನಂದಭರಿತರಾಗಿರುತ್ತಾರೆ. ರಾಮಚಂದ್ರನ ಪಟ್ಟಾಭಿಷೇಕ ಮಹೋತ್ಸವವು ಸಮೀಪಿಸಿದಾಗ, ಜಾಯಾಪತಿಗಳಿಬ್ಬರೂ ವ್ರತವನ್ನಾಚರಿಸಿ ಪ್ರಾರ್ಥಿಸುತ್ತಿರುವರು ; ಅರಣ್ಯವಾಸದ ಶಾಸನವು ಹೊರಟಾಗ, ಸೀತೆಗೆ ದಿಗಿಲಾಗುವುದೇ ಇಲ್ಲ ; ಪತಿಸಾನ್ನಿಧ್ಯವೊಂದೇ ಅವಳಿಗೆ ಬೇಕಾಗಿರುತ್ತದೆ ; "ಯಾರ ಹೃದಯವು ನಿನ್ನದಾಗಿಯೇ ಇರುವುದೋ, ಮತ್ತಾರನ್ನೂ ಅರಿಯದೋ, ಸರ್ವಕಾಲದಲ್ಲಿಯೂ ನಿನ್ನನ್ನೇ ಅಂಟಿರುವುದೋ, ನೀನಿಲ್ಲದಿದ್ದರೆ ಸಾಯಬೇಕೆಂದೇ ನಿರ್ಧಾರಮಾಡಿಕೊಂಡಿರುವುದೋ, ಅಂತಹಳು ನಿನ್ನ ಜತೆಯಲ್ಲಿ ಬರಲು ಬಯಸುವಳು" ಎನ್ನುತ್ತಾಳೆ. ತನ್ನಿನಿಯನ ಪಕ್ಕದಲ್ಲಿ ತಾನಿರುವವರೆಗೂ ತನಗೆ ಮುಳ್ಳುಗಳು ಬಟ್ಟೆಯಂತೆ ಮೃದುವಸ್ತುಗಳು, ಮಾರ್ಗದ ಧೂಳಿಯೂ ಗಂಧದ ಧೂಳಿ, ಹುಲ್ಲು ಹೊದಿಗೆಯು ದುಪ್ಪಟಿ, ಬೇರುನಾರುಗಳು ಮೃಷ್ಟಾನ್ನ ಎಂದು ಹೇಳಿಕೊಳ್ಳುವಳು. "ಎಲೈ ರಾಮಚಂದ್ರನೇ, ನೀನಿರುವುದು ಸ್ವರ್ಗ, ನೀನಿಲ್ಲದುದು ನರಕ" ಎನ್ನುತ್ತಾಳೆ. ನೀನು ಪಟ್ಟಣದಲ್ಲಿಯೇ ಉಳಿಯಬೇಕೆಂದು ರಾಮಚಂದ್ರನು ವಾದಿಸುವುದಕ್ಕೆ ಪ್ರಾರಂಭಿಸಿದಾಗ ಸೀತೆಯ ಎದೆಯು ಕುಗ್ಗಿಹೋಗುವುದು. ತನ್ನ ಜತೆಯಲ್ಲಿ ಬರಬಹುದೆಂದು ಆತನು ಒಪ್ಪಿದಾಗ, ಅವಳು ಸಂತೋಷಾತಿಶಯದಿಂದ ತನ್ನ ಸಖಿಯರಿಗೆ ತನ್ನ ದೊಡ್ಡ ದೊಡ್ಡ ಸೀರೆಗಳನ್ನೂ ರತ್ನಖಚಿತಗಳಾದ ಆಭ

ರಣಗಳನ್ನೂ ಕೊಟ್ಟು, ಮಡದಿಯರು ಮೋಹಿಸುವ ಸುವಸ್ತುಗಳೆಲ್ಲವನ್ನೂ ನಿಟ್ಟುಸುರೊಂದನ್ನೂ ಬಿಡದೆ ತೊರೆದವಳಾಗಿ, ದೇಶೋಚ್ಚಾಟನವೂ ದಂಪತಿಗಳನ್ನಗಲಿಸಲಾರದೆಯೇ ಹೋಯಿತೆಂಬ ಸಂತೋಷವೊಂದಕ್ಕೇ ಮನ ಮನಿತ್ತಳು. ರಾಮಚಂದ್ರನು ಹಗಲೂ ಇರುಳೂ ಪಕ್ಕದಲ್ಲಿಯೇ ಇದ್ದುದರಿಂದ, ರಾಜವೈಭವಗಳನ್ನೆಲ್ಲಾ ಮರೆತು ಕಾಡಿನ ನೆರಳುಗಳಲ್ಲಿ ಕುಣಿಕುಣಿದಾಡುತ್ತ, ಆಡುವ ಬಾಲೆಯಂದದಲ್ಲಿ, ಅವಳು ಸುಖಿಯಾಗಿದ್ದಳೆಂದು ವರ್ಣಿತವಾಗಿದೆ. ಈ ರೀತಿಯಲ್ಲಿ ಕುಣಿಕುಣಿದಾಡಿಕೊಂಡಿದ್ದರೂ ಅವಳು ವಿವೇಕಿಯಾಗಿದ್ದಳು. ದಂಡಕಾರಣ್ಯದ ಅಂಚಿನಲ್ಲಿ ಇಬ್ಬರೂ ಸುತ್ತಾಡುತ್ತಿರುವಾಗ, ಪತಿಗೆ ಗಂಭೀರವಾಕ್ಕುಗಳಿಂದ ಸಲಹೆಗಳನ್ನು ಕೊಟ್ಟುದನ್ನು ಕೇಳುವವರಾಗುತ್ತೇವೆ. ಮಹಾ ಪರಾಕ್ರಮಿಯಾದ ರಾವಣನೆಂಬ ರಾಕ್ಷಸನಿಂದ ಸೀತೆಯು ಅಪಹರಿಸಲ್ಪಟ್ಟಾಗ, ಅವಳನ್ನು ಬಹುಕಾಲದವರೆಗೂ ಹುಡುಕುವುದರಲ್ಲಿಯೂ, ಅವಳಿಗಾಗಿ ವ್ಯಥೆಪಡುವುದರಲ್ಲಿಯೂ ಪತಿಯ ಪ್ರೇಮವು ಹೇಗೆ ಉಕ್ಕಿಯುಕ್ಕಿ ಬರುವುದು! "ಸೀತಾ, ಸೀತಾ" ಎಂದುಕೊಂಡು, ರಾಮನು ವ್ಯಥೆಪಡುತ್ತಾ ಅವಳನ್ನು ಹುಡುಕುವನು. "ಬ್ರಾತುಕೊಂಡಿರುವೆಯಾ? ಪ್ರಾಣಿಯು ಕಲಹಾಸಕ್ತಳಾಗಿರುವೆಯಾ? ಅಯ್ಯೋ! ಬಾ! ಇಂತಹ ಅಟವಿ ನನಗೆ ಮೃತ್ಯುವಾಗಿದೆ!" ಎಂದು ಶೋಕಿಸುವನು. ರಾಮನು ಹೀಗೆ ಶೋಕಿಸುತ್ತಲೂ ತಡಕುತ್ತಲೂ ಇರುವ ವೇಳೆಯಲ್ಲಿ, ಸೀತೆಯು ವ್ಯಭಿಚಾರದ ಪ್ರೇರಣೆಗಳಿಗೂ ಕ್ರೂರವಚನಗಳಿಗೂ ಅಟ್ಟಹಾಸದ ನುಡಿಗಳಿಗೂ ಗುರಿಯಾಗಿರುವಳು. "ಧರ್ಮಪತ್ನಿಯಾದ ನಾನು ನನ್ನ ಪತಿಗೆಂದೂ ದ್ರೋಹವನ್ನೆಸಗೆನು. ಸಂಪತ್ತಿನಿಂದಲೂ ಧನದಿಂದಲೂ ನೀನು ನನ್ನನ್ನು ಪ್ರೇರಿಸಲಾರೆ. ಸೂರ್ಯನ ಕಿರಣಗಳು ಹೇಗೆ ಸೂರ್ಯನನ್ನೇ ಸೇರುವುವೊ ಹಾಗೆಯೇ ನಾನೂ ರಾಘವನನ್ನೇ ಸೇರುವೆನು" ಎನ್ನುತ್ತಿದ್ದಳು.

ಸಾವಿತ್ರಿಯ ಚರಿತ್ರೆಯನ್ನು ಕೇಳಿರಿ. ಸಾವಿತ್ರಿಯು ಮೃತ್ಯುಪತಿಯಾದ ಯಮನ ಹಿಡಿತದಿಂದ ತನ್ನ ಪತಿಯನ್ನು ಗೆದ್ದು ತಂದಳು. ಮದ್ರದೇಶಾಧಿಪನಾದ ಅಶ್ವಪತಿಯೆಂಬುವನು ದೇವತಾಪೂಜೆಯನ್ನು ಬಹುಕಾಲದವರೆಗೂ ಮಾಡಿ ಮಗಳೊಬ್ಬಳನ್ನು ಪಡೆದನು. ಸಾವಿತ್ರಿಯೆಂಬ ಹೆಸರನ್ನು

ಅವಳಿಗಿಟ್ಟರು. ಚಿನ್ನದ ಬೊಂಬೆಯಂತೆ ಥಳಥಳಿಸುತ್ತಿದ್ದಳು, ಮಲ್ಲಿಗೆಯ ಮೊಗ್ಗಿನಂತೆ ಮುದ್ದಾಗಿದ್ದಳು; ತಮ್ಮ ಪೂರ್ವ ಸುಕೃತದಿಂದ ತಮ್ಮಲ್ಲಿ ಬಂದ ದೇವಿಯೆಂದು ಭಾವಿಸಿ ಜನರು ಅವಳನ್ನು ಪೂಜಿಸುತ್ತಿದ್ದರು. ಅವಳು ಮೈನೆರೆದಮೇಲೆ ಅವಳ ತಂದೆಯು—"ನಿನ್ನ ಮನವೊಪ್ಪುವ ವರನನ್ನು ನೀನೇ ಹುಡುಕಿಕೊಂಡು ಬಾ" ಎಂದು ಅವಳಿಗೆ ಹೇಳಿದನು. ಪರಿವಾರ ಸಮೇತಳಾಗಿ ವರಾನ್ವೇಷಣಕ್ಕೆ ಅವಳೇ ಹೊರಟಳು. ಅನೇಕ ತಿಂಗಳುಗಳ ಮೇಲೆ ಅವಳು ಮರಳಿ ಬಂದಾಗ, ನಾರದ ಮಹರ್ಷಿಗಳು ಅವಳ ತಂದೆಯ ಬಳಿಯಲ್ಲಿದ್ದರು. ಅವರ ಮುಂದೆ ವರಾನ್ವೇಷಣದ ಸುದ್ದಿಯನ್ನು ಅರುಹಿದಳು. "ಸಾಲ್ವದೇಶಾಧಿಪತಿಯಾಗಿದ್ದ ದ್ಯುಮತ್ಸೇನನು ವೃದ್ಧನಾಗಿಯೂ ಅಂಧನಾಗಿಯೂ ದೇಶಭ್ರಷ್ಟನಾಗಿಯೂ ಈಗ ಒಂದು ವನದಲ್ಲಿ ತಪಸ್ಸನ್ನು ಮಾಡುತ್ತಿರುವನು. ಅವನ ಮಗನಾದ ಸತ್ಯವಂತನೆಂಬುವನನ್ನು ಪತಿಯಾಗಿ ವರಿಸಿರುವೆನು" ಎಂದಳು. ಆಗ ನಾರದರು—"ಛಿ, ಛಿ ! ರಾಜನೆ, ಅರಿಯದ ಸಾವಿತ್ರಿ ಅನುಚಿತವನ್ನೆಸಗಿದಳು" ಎಂದರು. ರಾಜನು—"ಅವನು ಸಾವಿತ್ರಿಗೆ ತಕ್ಕ ವರನಲ್ಲವೇನು ? ಅವನು ಹೆಳವನೋ, ದಡ್ಡನೋ, ಕ್ಷಮೆಯಿಲ್ಲದವನೋ, ಧೈರ್ಯವಿಲ್ಲದವನೋ ?" ಎಂದು ಕೇಳಲು, ನಾರದರು—"ಯಾವ ಸುಗುಣದಲ್ಲಿಯೂ ಅವನಿಗೆ ಕುಂದಕವಿಲ್ಲ, ಸೂರ್ಯದೇವನಂತೆ ಪ್ರಬಲನಾಗಿಯೂ ತೇಜಸ್ವಿಯಾಗಿಯೂ ಸತ್ಯವಂತನಿರುವನು ; ರಂತಿದೇವನಂತೆ ಉದಾರಿ, ಸಿಬಿಯಂತೆ ಧರ್ಮಜ್ಞ, ಯಯಾತಿಯಂತೆ ಗಂಭೀರ, ಚಂದಿರನಂತೆ ಸುಂದರ. ಆದರೆ ಸದ್ಗುಣ ಸಂಪನ್ನನಾದವನು ಈ ಲೋಕದಿಂದ ವರ್ಷವೊಂದರಲ್ಲಿಯೇ ತೆರಳುವನಾಗುತ್ತಾನೆ. ಅವನ ಆಯುಃಪರಿಮಿತಿಯು ಬಹು ಸ್ವಲ್ಪವಾಗಿದೆ" ಎಂದು ನುಡಿದರು. ಮುನಿವರ್ಯರ ವಚನವನ್ನು ಲಾಲಿಸಿ ಸಾವಿತ್ರಿಯು, ಎದೆ ಕುಗ್ಗಿಹೋಗುತ್ತಿದ್ದರೂ—"'ಕೊಟ್ಟೆನು ಎಂದು ಮಾನವನಾದವನು ಒಂದಾವರ್ತಿ ತಾನೇ ಹೇಳಬಲ್ಲನು. ಸತ್ಯವಂತನಿಗೆ ನನ್ನನ್ನು ನಾನು ಅರ್ಪಿಸಿರುವೆನು' ಎಂದು ನಾನು ಆಗಲೇ ಒಂದಾವರ್ತಿ ಹೇಳಿಯೇ ಇದ್ದೇನೆ. ಮರಳಿ ನಾನು ವರಾನ್ವೇಷಣವನ್ನು ಮಾಡಲೇ ಆರೆ" ಎಂದು ಹೇಳುವಳಾದಳು. ನಾರದರು—"ಎಲೈ ರಾಜನೆ, ನಿನ್ನ ಮಗಳು ಚಂಚಲಚಿತ್ತಳಲ್ಲ. ಈ ಮದುವೆಯನ್ನು

ನಾನು ಹರಸಿದೇನೆ" ಎಂದು ಹೊರಟುಹೋದರು.

ಚಾರರು ಅತಿ ವೇಗದಿಂದ ದ್ಯುಮತ್ಸೇನನೆಡೆಗೈದಿದರು. ದ್ಯುಮತ್ಸೇನನು ಅಶ್ವಪತಿಗೆ—"ಬಾಂಧವ್ಯವನ್ನು ಬಳೆಯಿಸಬೇಕೆಂದು ನಾನೇ ಮೊದಲು ಇಚ್ಛಯಿಸಿದೆನು ; ಆದರೆ ನನ್ನ ದುರವಸ್ಥೆಯ ದೆಸೆಯಿಂದ ಕೇಳಲಾರದೆ ಹೋದೆನು. ಪೂಜ್ಯಳಾದ ಸಾವಿತ್ರಿಯು ತನಗೆ ತಾನೇ ನಮ್ಮ ಮನೆಗೆ ಬರುವಳಾದುದರಿಂದ ಸಾಕ್ಷಾಲ್ಲಕ್ಷ್ಮಿಯೇ ನಮ್ಮ ಮನೆಗೆ ಬರುವಳಾಗುತ್ತಾಳೆ ಎನ್ನುವುದರಲ್ಲಿ ನನಗೆ ಲೇಶವೂ ಸಂಶಯವೇ ಇಲ್ಲ" ಎಂಬ ಸದುತ್ತರವನ್ನು ಕಳುಹಿಸಿದನು. ಮದುವೆಯೂ ಕೂಡಲೇ ಬಳೆಯಿತು. ಸಾವಿತ್ರಿಯು ಅರಮನೆಯಿಂದ ತಪಸ್ವಿಯ ಪರ್ಣಕುಟೀರಕ್ಕೆ ಪರಮ ಸಂಭ್ರಮದಿಂದ ಬಂದಳು. ನೀಚೋಚ್ಚ ಭಾವನೆಗಳೇನನ್ನೂ ಇಟ್ಟುಕೊಳ್ಳದೆ ಮನೆಯ ಕೆಲಸಗಳನ್ನೆಲ್ಲಾ ಪರಮ ಹರ್ಷದಿಂದ ಮಾಡುತ್ತ, ವೃದ್ಧರಾದ ತನ್ನ ಅತ್ತೆಮಾವಂದಿರ ಶುಶ್ರೂಷೆಗಳನ್ನು ನಿರಾಲಸ್ಯದಿಂದೆಸಗುತ್ತಾ, ಸದ್ವಿನಯದಿಂದಲೂ ಸವಿನುಡಿಗಳಿಂದಲೂ ತನ್ನ ಪತಿಯ ಹೃದಯವನ್ನು ತನ್ನದಾಗಿ ಮಾಡಿಟ್ಟುಕೊಂಡಳು. ಬಾಹ್ಯ ವೃತ್ತಿಯಲ್ಲಿ ಹೀಗಿದ್ದರೂ, ನಾರದಮುನಿಯ ಮಾತಿನಿಂದ ಹೊತ್ತಿಡಲ್ಪಟ್ಟ ಮನೋವ್ಯಥಾಗ್ನಿಯು ಅಂತರಂಗದಲ್ಲಿ ಬುದುಬುದುಗುಟ್ಟುತ್ತಲೇ ಇತ್ತು, ಮತ್ತೂ ಆ ವರ್ಷದ ದಿವಸಗಳನ್ನು ಎಣಿಸುತ್ತಲೇ ಇದ್ದಳು. ಕೊನೆಗೆ ಸತ್ಯವಂತನ ಮೃತ್ಯುಕಾಲಕ್ಕೆ ನಾಲಕ್ಕೇ ದಿವಸವುಳಿಯಿತು. ಉಪವಾಸ ವ್ರತದಿಂದಲೂ ಪೂಜೆಯಿಂದಲೂ ದೇವತಾ ಸಹಾಯವನ್ನು ಪಡೆಯಬೇಕೆಂದು ನಿಶ್ಚಯಿಸಿಕೊಂಡಳು. ಬಿಂದುತೊಟ್ಟು ನೀರನ್ನೂ ಕುಡಿಯದೆ ಮೂರುದಿವಸಗಳು ನಿರಾಹಾರದಲ್ಲಿದ್ದಳು. ಆ ಮೃತ್ಯುದಿವಸದ ಪ್ರಾತಃಕಾಲದಲ್ಲಿ ಹೊತ್ತಿಗೆ ಮುಂಚೆಯೇ ಎದ್ದು, ಪ್ರಾತರಾಹ್ನಿಕಗಳನ್ನು ಮುಗಿಯಿಸಿ ಹಿರಿಯರಿಗೆಲ್ಲಾ ನಮಿಸಿದಳು. ಆ ಅರಣ್ಯವಾಸಿಗಳಾದ ಋಷಿಶ್ರೇಷ್ಠರೆಲ್ಲರೂ ಆದಿನ ಅವಳಿಗೆ "ಸುಮಂಗಲೀಭವ" ಎಂದು ಹರಸಿದರು. ಹೆಗಲಿನಮೇಲೆ ಕೊಡಲಿಯನ್ನು ಹೊತ್ತು ಪ್ರತಿನಂತೆ ಸತ್ಯವಂತನು ಕಾಡಿಗೆ ಹೊರಟಾಗ, ತನ್ನ ಹೃದಯವನ್ನು ಗಟ್ಟಿಮಾಡಿಕೊಂಡು ಅವನ ಬೆಂಬಿಡದೆ ತಾನೂ ಹೊರಟಳು. ಏಕೆಂದು ಅವನು ಕೇಳಲು; ಈ ದಿವಸ ನಿನ್ನಬಳಿಯಲ್ಲಿಯೇ ಇರಬೇಕೆಂದು ಆಸೆಯಾಗುತ್ತದೆ ಎಂದಳು.

ಇಬ್ಬರೂ ಜತೆಯಾಗಿ ನಡೆದರು; ಕಾಡು ಗುಡ್ಡಗಳ, ಜಲಪಾತಗಳ, ಪಕ್ಷಿ ಮೃಗಗಳ ಸೊಗಸುಗಳನ್ನು ನೋಡಿನೋಡಿ ಸಂತೋಷಪಟ್ಟರು. ಸತ್ಯವಂತನು ತನ್ನ ನಿತ್ಯದ ಕೆಲಸಗಳನ್ನು ಪ್ರಾರಂಭಿಸಿ, ಸಮಿತ್ತುಗಳನ್ನು ಕತ್ತರಿಸಿ, ಹಣ್ಣುಹಂಪಲುಗಳನ್ನು ಕೊಯ್ದು, ತನ್ನ ಬುಟ್ಟಿಗೆ ತುಂಬಿದನು. ತೊಟ್ಟನೆ ಪ್ರಾಣವು ಹೋಗಿ, ತಲೆಯನೋವು ಉಂಟಾಯಿತು. ತನ್ನವಸ್ಥೆಯನ್ನು ಸಾವಿತ್ರಿಗೆ ತಿಳಿಸಿ ಮಲಗಿದನು. ಆಗ ಸಾವಿತ್ರಿಯು ತನ್ನಿನಿಯನ ತಲೆಯನ್ನು ತನ್ನ ತೊಡೆಯಮೇಲಿಟ್ಟುಕೊಂಡು, ಮುಂದಿಂತಾಗುವುದೆಂಬುದನ್ನು ತಿಳಿಯದೆ ತಲ್ಲಣಿಸುತ್ತ ಕುಳಿತಳು. ಗಂಭೀರವಾಗಿಯೂ ಭೀಕರವಾಗಿಯೂ ಇರುವ, ಕರ್ರಗಿದ್ದರೂ ಹೊಳೆಹೊಳೆಯುತ್ತಿರುವ ರೂಪವದೊಂದು ರಕ್ತವಸ್ತ್ರಧಾರಿಯಾಗಿ, ತನ್ನ ಮಗ್ಗುಲಲ್ಲಿ ನಿಂತು, ನಟ್ಟದ್ದರೂ ಳಳಪಳನೆ ಮಿಂಚುವ ದೃಷ್ಟಿಯೊಡನೆ ಸತ್ಯವಂತನನ್ನು ದೃಷ್ಟಿಸುತ್ತಿರುವುದನ್ನು ಕಾಣುವಳಾದಳು. ಮೆಲ್ಲನೆ ತನ್ನ ಪತಿಯ ತಲೆಯನ್ನು ನೆಲದಮೇಲಿಟ್ಟು, ಎದ್ದುನಿಂತು, ಆ ಮಹಾನುಭಾವನಿಗೆ ನಮಿಸಿದಳು. ಆ ರೂಪವು—"ಸತ್ಯವಂತನ ದಿನಗಳು ಮುಗಿದುವು; ನಾನು ಯಮ, ಮೃತ್ಯುಪತಿ; ಸತ್ಯವಂತನು ಧರ್ಮನಿರತನಾಗಿದ್ದುದರಿಂದ, ಎಂದಿನಂತೆ ನನ್ನ ದೂತರನ್ನು ಅಟ್ಟುವುದಕ್ಕೆ ಬದಲಾಗಿ, ನಾನೇ ಬಂದಿದ್ದೇನೆ' ಎಂದಿತು. ಹೀಗೆಂದ ಮೇಲೆ ಯಮನು ಸತ್ಯವಂತನ ಸ್ಥೂಲ ಶರೀರದಿಂದ ಸೂಕ್ಷ್ಮ ಶರೀರವನ್ನು ಸೆಳೆದುಕೊಂಡವನಾಗಿ ದಕ್ಷಿಣದಿಕ್ಕಿಗೆ ತೆರಳಿದನು. ಸಾವಿತ್ರಿಯೂ ಬೆಂಬಿಡಿದು ತೆರಳಿದಳು. ಆಗ ಯಮನು—"ಸಾವಿತ್ರಿ, ಇಲ್ಲಿ ನಿಲ್ಲು; ಹಿಂದಿರುಗಿ ಹೋಗಿ ನಿನ್ನ ಪತಿಯ ಉತ್ತರಕ್ರಿಯೆಗಳನ್ನು ಮಾಡುವಳಾಗು; ನೀನು ಮಾಡಬೇಕಾದುದನ್ನೆಲ್ಲಾ ಮಾಡಿರುತ್ತೀಯೆ; ಮರ್ತ್ಯರು ಎಷ್ಟುದೂರ ಹಿಂದೆ ಬರಬಹುದೋ ಅಷ್ಟುದೂರ ನಿನ್ನ ಪತಿಯ ಹಿಂದೆ ನೀನು ಬಂದೆ" ಎಂದನು. ಸಾವಿತ್ರಿಯು—"ಪತಿಯು ಹೋದೆಡೆಗೆ ಸತಿಯೂ ಹೋಗಬೇಕು. ಪತಿವ್ರತೆಯರಿಗೆ ಇದೇ ಸನಾತನ ಧರ್ಮ. ನನ್ನ ಪತಿಯನ್ನು ನಾನು ಅಖಂಡಭಕ್ತಿಯಿಂದ ಸೇವಿಸಿರುವೆನಾದರೆ, ಗುರುಹಿರಿಯರನ್ನು ನಾನು ಭಕ್ತಿಯಿಂದ ಪೂಜಿಸಿರುವೆನಾದರೆ, ವ್ರತಾಚರಣೆಗಳಲ್ಲಿ ಶಕ್ತಿಯಿರುವುದಾದರೆ, ನಿನ್ನ ಪ್ರಸಾದದ ಪ್ರಭಾವದಿಂದ, ಓ ಧರ್ಮರಾಜನೆ, ನನ್ನ

ಪಥವು ಸುಪಥವಾಗಲಿ" ಎಂದಳು. ಹಿರಿಯರು ಪ್ರೀತಿಪುರಸ್ಸರವಾಗಿ ತನಗೆ ಹೇಳಿಕೊಟ್ಟಿದ್ದ ಧರ್ಮಮಂತ್ರಗಳನ್ನು ತನ್ನ ಸಾಧುಬುದ್ಧಿಯಿಂದ ತಾನೇ ಕಲಿತಿದ್ದ ಮಂತ್ರಗಳನ್ನೂ, ಎಳೆಯಮಗುವಿನಂದದಲ್ಲಿ ನಿಷ್ಕಾಪಟ್ಯದಿಂದ, ಪಠಿಸುತ್ತಾ—"ಭಕ್ತಿಯಿಂದ ಕರ್ಮಗಳನ್ನೆಸಗುತ್ತಾ, ಗೃಹಸ್ಥಾಶ್ರಮ ಧರ್ಮ ಮಾರ್ಗವನ್ನು ಹಿಡಿದು, ಸುಜ್ಞಾನವನ್ನೂ ಪುಣ್ಯವನ್ನೂ ಅರ್ಜಿಸಿರುವೆನು. ನಾನು ಕೂಡಿಟ್ಟ ಫಲಗಳು ನನಗೇ ಇಲ್ಲವಾಗುವಂತೆ, ಮೃತ್ಯುವೇ, ಈ ದಾರಿಗಳನ್ನು ಮುಚ್ಚದಿರು" ಎಂದು ಹೇಳಿಕೊಂಡಳು. "ಸಾವಿತ್ರಿ, ನೀನು ಜ್ಞಾನವಂತಳು, ವಿವೇಕಶಾಲಿ; ನಿನ್ನ ನುಡಿಗಳು ಮಧುರಗಳಾಗಿವೆ. ನಿನ್ನ ಪತಿಯ ಪ್ರಾಣವೊಂದನ್ನುಳಿದು, ಯಾವವರವನ್ನು ಬೇಕಾದರೂ ಕೊಡು ವೆನು" ಎಂದು ಯಮನು ನುಡಿಯಲು, ಸಾವಿತ್ರಿಯು—"ಎಲೈ, ದಯಾಸಿಂ ಧುವೇ, ಸತ್ಯವಂತನ ತಂದೆಯು ಅಂಧಕಾರದಲ್ಲಿ ಜೀವಿಸುತ್ತಿರುವನು; ನಿನ್ನ ಪ್ರಸಾದದಿಂದ ಅವನ ನೇತ್ರಗಳು ಮರಳಿ ಹಗಲನ್ನು ನೋಡುವಂತಾಗಲಿ" ಎಂದು ಕೇಳಿಕೊಂಡಳು. "ಮರ್ತ್ಯಾಂಗನಾಶಿರೋಮಣಿಯೆ, ನೀನು ಕೇಳಿ ದುದನ್ನು ಕೊಟ್ಟಿರುತ್ತೇನೆ. ಇನ್ನು ಹಿಂದಿರುಗುವಳಾಗು; ನಿನ್ನ ಮರ್ತ್ಯ ಲೋಕದ ಹೆಜ್ಜೆಗಳು ಬಳಲಿರುವುವು. ಅಂಧಕಾರಮಯವಾದ ಮೃತ್ಯು ಪಥವನ್ನು ಅವು ಮೆಟ್ಟಲರಿಯವು," ಎಂದು ಯಮನುಸುರಲು,—"ಆತನು, ನನ್ನ ಪತಿಯು, ಎಲ್ಲಿಗೆ ಹೋಗುವನೋ, ಅಲ್ಲಿಗೆ ನಾನೂ ಹೋಗಲೇಬೇ ಕಲ್ಲವೆ ? ಓ ಮೃತ್ಯುರಾಜನೆ, ಸಜ್ಜನರ ಸಂಗವು ಫಲದಾಯಕ. ನಿನ್ನಂ ತಹರ ಸನ್ನಿಧಿಯಲ್ಲಿ ಇರುವುದು ಹಿತಕರ. ಇಂತಹ ಸಜ್ಜನಸಂಗವು ನಿಷ್ಫ ಲವೆಂದಿಗೂ ಆಗದು" ಎನಲು, ಯಮರಾಜನು—"ಹಾಗಾದರೆ, ಎರಡನೆ ಯ ವರವೊಂದನ್ನು ಫಲವಾಗಿ ಸ್ವೀಕರಿಸು. ಅನವೃಶಳಾದ ಮಾನಿನಿಯೇ, ನಿನ್ನ ಪತಿಯ ಪ್ರಾಣವನ್ನು ಮಾತ್ರ ಕೇಳದಿರು" ಎಂದನು. ಸಾವಿತ್ರಿ ಯು—"ಹಾಗಾದರೆ, ಎಲೈ ಮರ್ತ್ಯಲೋಕಾಧಿಪತಿಯೇ, ನನ್ನ ಪತಿಯ ತಂದೆಗೆ ಅವನರಾಜ್ಯವನ್ನು, ದುಷ್ಟರು ಅವನಿಂದ ಕಸಿದುಕೊಂಡಿರುವುವನ್ನು, ಕೊಡುವವನಾಗು" ಎಂದು ಬೇಡಿದಳು. "ಆಗಲಿ; ಅವನು ಮರಳಿ ಸಿಂ ಹಾಸನವನ್ನು ಹೊಂದಿ, ರಾಜ್ಯಂಗೈಯುವವನಾಗುತ್ತಾನೆ. ಇನ್ನಾದರೂ ಹಿಂದಿರುಗು, ಎಲೈ ಸುಂದರಾಂಗಿಯೇ, ಇನ್ನು ಮುಂದಕ್ಕೆ ಬಾರದಿರು"

ಎಂದು ಯಮನು ನುಡಿದನು. ಆದರೂ ಸಾವಿತ್ರಿಯು ಸವಿನುಡಿಗಳನ್ನು ನುಡಿಯುತ್ತಾ, ಮಧುರವಾಗಿ ಸ್ತುತಿಸುತ್ತಾ, ಮೃತ್ಯುರಾಜನೊಡನೆಯೇ ತೆರಳಿ, ಆತನಿಂದ ಮತ್ತೆರಡು ವರಗಳನ್ನು ಪಡೆದಳು. ತನ್ನ ತಂದೆಗೆ ನೂರುಮಂದಿ ಮಕ್ಕಳಾಗಬೇಕೆಂಬುದೊಂದು ವರ, ತನಗೂ ನೂರುಮಂದಿ ಮಕ್ಕಳಾಗಬೇಕೆಂಬುದು ಮತ್ತೊಂದು ವರ. ನಾಲ್ಕನೆಯ ವರವನ್ನು ಕೊಟ್ಟ ಕೂಡಲೆ ಸಾವಿತ್ರಿಯು ಸದ್ಧರ್ಮವನ್ನೂ ಸತ್ಕರ್ಮವನ್ನೂ ಸ್ತುತಿಸುವಳಾದಳು. ಆಗ ಯಮನು ಅವಳ ವಾಕ್ಚಾತುರ್ಯಕ್ಕೂ ಜ್ಞಾನಕ್ಕೂ ಮೆಚ್ಚಿ ಮತ್ತೂ ಒಂದು ವರವನ್ನು ಕೊಡುವೆನೆಂದನು. ಆಗ ಸಾವಿತ್ರಿಯು—"ಎಲೈ ಧರ್ಮರಾಜನೆ, ನೂರುಮಕ್ಕಳಾಗುವಂತೆ ನನಗೆ ವರವನ್ನು ಕೊಟ್ಟಿರುವೆ; ಆ ಮಕ್ಕಳಿಗೆ ನನ್ನ ಪತಿಯಲ್ಲದೆ ಉಳಿದವರು ತಂದೆಯಾಗುವುದಾದರೆ ಧರ್ಮವೇ ಹತವಾಗುವುದರಿಂದ, ನನ್ನ ಪತಿಯ ಪ್ರಾಣವನ್ನೇ ನಾನು ಕೇಳಬೇಕಾಗಿದೆ ; ಎಲೈ ಧರ್ಮರಾಜನೆ, ದಯಾಪಾಲಿಸು" ಎಂದಳು. ಈರೀತಿಯಲ್ಲಿ ಈ ಪತಿವ್ರತಾಶಿರೋಮಣಿಯು ಸತ್ತಗಂಡನನ್ನು ಬದುಕಿಸಿಕೊಂಡು ಬಂದುದಲ್ಲದೆ, ತನ್ನ ವಂಶಕ್ಕೆ ಆಯುರಾರೋಗ್ಯೈಶ್ವರ್ಯಗಳನ್ನೂ ತಂದಳು. ಮೃತ್ಯುರಾಜನಾದ ಯಮನೂ ಕೂಡ ಪರಿಶುದ್ಧಾತ್ಮಳಾದ ಪತಿವ್ರತೆಯ ಪರಮಭಕ್ತಿಗೆ ಸೋಲಬೇಕಾಯಿತು.

(ಮಹಾಭಾರತ—ವನಪರ್ವ. ಅ. ೨೯೨—೨೯೮).

ನಳಮಹಾರಾಜನ ರಾಣಿಯಾದ ದಮಯಂತಿಯ ಕಥೆಯನ್ನು ಹಿಂದೂ ಬಾಲನು ಮರೆಯಕೂಡದು. ವೀರಸೇನನ ಮಗನಾದ ಮತ್ತು ನಿಷಧ ದೇಶಕ್ಕೆ ದೊರೆಯಾದ ನಳನು ವಿದರ್ಭದೇಶಾಧಿಪತಿಯಾದ ಭೀಮನ ಮಗಳನ್ನು, ದಮಯಂತಿಯೆಂಬುವಳನ್ನು, ಮೋಹಿಸಿದ್ದನು; ಮತ್ತು ದಮಯಂತಿಯೂ ನಳನನ್ನು ಮೋಹಿಸಿದ್ದಳು. ಇವರು ಒಬ್ಬರನ್ನೊಬ್ಬರು ನೋಡಿಯೇ ಇರಲಿಲ್ಲ; ಪೃಥ್ವಿಯೊಳಗೆಲ್ಲಾ ಉಪಮಾನರಹಿತವಾಗಿರುವಂತೆ ಒಬ್ಬರ ಮಹಿಮೆಯನ್ನು ಮತ್ತೊಬ್ಬರು ಕೇಳಿದ್ದರು. ಹೀಗಿರುವಲ್ಲಿ ದಮಯಂತಿಯ ಸ್ವಯಂವರ ಮಹೋತ್ಸವವು ಪ್ರಕಟಿತವಾಯಿತು. ನಳಮಹಾರಾಜನೂ ಸ್ವಯಂವರಕ್ಕೆ ಹೋದನು. ಇಂದ್ರ, ಅಗ್ನಿ, ಯಮ, ವರುಣ ಮುಂತಾದವರೂ ದಮಯಂತಿಯನ್ನು ಕಾಮಿಸಿ ಬಂದಿದ್ದರು,

ಇಂದ್ರಾದಿ ದೇವತೆಗಳನ್ನೆಲ್ಲಾ ಬಿಟ್ಟು ದಮಯಂತಿಯು ನಳನನ್ನೇ ವರಿಸಿದಳು. ನಳನೂ ದಮಯಂತಿಯೂ ಪರಸ್ಪರ ಪ್ರೀತಿಯಿಂದ ಹನ್ನೊಂದು ವರುಷಗಳ ವರೆಗೂ ಸುಖದಿಂದಿದ್ದರು ; ಮತ್ತು ಅವರಿಗೆ ಎರಡು ಮಕ್ಕಳೂ ಆದುವು. ಹನ್ನೆರಡನೆಯ ವರುಷದಲ್ಲಿ ಪುಷ್ಕರನು ಬಂದು, ನಳನನ್ನು ಪಗಡೆಯ ಆಟಕ್ಕೆ ಕರೆದನು. ನಳನು ಆಡಿ ಸೋಲುಸೋಲುತ್ತಾ ಹೋಗಿ, ಕಡೆಗೆ ತನ್ನ ರಾಜ್ಯವನ್ನೂ ಸಂಪತ್ತನ್ನೂ, ಹೊದ್ದಿದ್ದ ಬಟ್ಟೆಗಳನ್ನೂ ಪುಷ್ಕರನಿಗೆ ಸೋತು, ರಾಜ್ಯಭ್ರಷ್ಟನಾಗಿ, ತನ್ನ ಮೈಯನ್ನು ಅರ್ಧಮಟ್ಟಿಗೆ ಮುಚ್ಚಿದ್ದ ಒಂದೇ ಒಂದು ಬಟ್ಟೆಯೊಡನೆ ರಾಜಧಾನಿಯಿಂದ ಹೊರಟನು. ದಮಯಂತಿಯು, ಆಟದ ರೀತಿಯನ್ನು ತಿಳಿದವಳಾಗಿ, ತನ್ನ ತಂದೆಯ ಅರಮನೆಗೆ ತನ್ನ ಇಬ್ಬರು ಮಕ್ಕಳನ್ನೂ ಕಳುಹಿಸಿ, ತನ್ನ ಪತಿಯ ಹಿಂದೆ ಒಂದೇ ಒಂದು ಸೀರೆಯಲ್ಲಿ ಹೊರಟಳು. ರಾಜಧಾನಿಯ ಉಪಾಂತಪ್ರದೇಶದಲ್ಲಿ, ಅನ್ನ, ನೀರೂ ಇಲ್ಲದೆ ಜಾಯಾಪತಿಗಳಿಬ್ಬರೂ ಅಲೆಯುತ್ತಿದ್ದರು. ಆಹಾರಕ್ಕಾಗಿ ಕೆಲವು ಪಕ್ಷಿಗಳನ್ನು ತಾನು ಹೊದ್ದಿದ್ದ ಬಟ್ಟೆಯಿಂದ ಹಿಡಿಯುವುದಕ್ಕೆ ಹೋಗಿ, ನಳನು ತನ್ನ ಒಂದು ಬಟ್ಟೆಯನ್ನೂ ಕಳೆದುಕೊಂಡನು. ಅವರ ಕಷ್ಟಗಳು ಹೆಚ್ಚಿದುವು. ಆಶೆಗಳೆಲ್ಲಾ ಭಂಗಗಳಾಗಿ ಹೋದುವು. ಮುಂದಣ ಆಲೋಚನೆಯೇನೂ ತೋರದೆ, ತನ್ನ ಹೆಂಡತಿಯಾದ ದಮಯಂತಿಗೆ ಕ್ಷುದ್ಬಾಧೆಯಾದರೂ ತಪ್ಪಲೆಂದು ಬಯಸಿ, ನಳನು ಅವಳ ತವರಮನೆಯ ದಾರಿಯನ್ನು ಪುನಃ ಪುನಃ ಅವಳಿಗೆ ತೋರಿಸಿದನು. ದಮಯಂತಿಯು ಕಂಬನಿಗರೆಯುತ್ತಾ, ಬಿಕ್ಕಿ ಬಿಕ್ಕಿ ಅಳುತ್ತಾ "ನಿನ್ನನ್ನು ಅಗಲಿ ನಾನಿರಲಾರೆ; ನೀನು ಬಳಲಿದಾಗ ನಿನಗೆ ಸೇವೆಯನ್ನು ಮಾಡಿ ಸಂಕಟವನ್ನು ಪರಿಹರಿಸುವೆನು; ಎಂತಹ ಕಷ್ಟಕಾಲವೇ ಆಗಲಿ, ಪತಿಪರಾಯಣೆಯಾದ ಪತ್ನಿಯಂತಹ ಮದ್ದು ಮತ್ತಾವುದೂ ಇಲ್ಲ" ಎಂದು ಹೇಳುತ್ತಾ ಜತೆಯಲ್ಲಿಯೇ ಇದ್ದಳು. ಸ್ವಲ್ಪಕಾಲದಲ್ಲಿಯೇ ಅವಳು ಬಳಲಿಕೆಯಿಂದ ಬರಿಯ ನೆಲದಮೇಲೆ ಮಲಗಿ ನಿದ್ರೆಗೈದಳು. ಇವಳನ್ನು ಬಿಟ್ಟು ನಾನೊರ್ವನೇ ತೆರಳುವುದುತ್ತಮ; ನನ್ನ ಜತೆಯಲ್ಲಿ ಈ ಕೋಮಲಾಂಗಿಯನ್ನು ಅನ್ನ ನೀರುಗಳಿಲ್ಲದೆ ಅಲೆಯಿಸುವುದಕ್ಕಿಂತ, ಇವಳು ತನ್ನ ಬಂಧುವರ್ಗದ ಜನರನ್ನು ಸೇರುವುದೇ ಲೇಸು ಎಂದು

ಕೊಂಡು, ನಳನು ಅವಳುಟ್ಟಿದ್ದ ಸೀರೆಯಲ್ಲಿ ಅರ್ಧವನ್ನು ಮಗ್ಗುಲಲ್ಲಿದ್ದ ಕತ್ತಿಯಿಂದ ಕೊಯ್ದು, ಮತ್ತರ್ಧ ಸೀರೆಯನ್ನು ಅವಳ ಮೈಯ ಮೇಲೆಯೇ ಬಿಟ್ಟು, ಕೊಯ್ದು ತೆಗೆದ ಭಾಗವನ್ನು ತನ್ನ ಮೈಸುತ್ತಲೂ ಸುತ್ತಿಕೊಂಡು, ವ್ಯಸನೋದ್ರೇಕದಿಂದ ಹುಚ್ಚು ಹಿಡಿದವನಾಗಿ, ಅವಳ ಪಕ್ಕವನ್ನು ಬಿಟ್ಟೋಡಿದನು. ಅನಾಥಳಾದ ದಮಯಂತಿಯು ನಿದ್ರೆಯಿಂದೆದ್ದು ನೋಡಲು, ತಾನೊಬ್ಬಳೇ ಇರುವುದು ಕಾಣಬಂತು. ತನಗೆ ಗತಿಯಿಲ್ಲದಂತೆ ಆಯಿತೆಂದು ಶೋಕಿಸುವುದಕ್ಕಿಂತಲೂ ಹೆಚ್ಚಾಗಿ ತನ್ನ ಪತಿಗೆ ಯಾರೂ ಗತಿಯಿಲ್ಲದಂತೆ ಆಯಿತೆಂದು ಶೋಕಿಸಿ ಬಹಳವಾಗಿ ಸಂಕಟಪಟ್ಟಳು. ಆತುರದಿಂದ ತನ್ನ ಪತಿಯನ್ನು ತಡಕಿದಳು ; ಆದರೂ ಅವನು ಸಿಕ್ಕಲಿಲ್ಲ. ಅವನಿಗೆ ಬದಲಾಗಿ ಮಹಾಸರ್ಪವೊಂದು ಸಿಕ್ಕಿತು, ಅದು ಅವಳ ಮೈಗೆ ಸುತ್ತಿಕೊಂಡಿತು. ಆ ಸರ್ಪದಿಂದ ಅವಳು ಹೇಗೆ ಬಿಡುಗಡೆಯನ್ನು ಹೊಂದಿದಳೋ, ಹೊಸ ಹೊಸ ಗಂಡಾಂತರಗಳೇನೇನು ಸಂಭವಿಸಿದುವೋ, ಚೇದಿರಾಜನ ಮಗಳಿಗೆ ಸಖಿಯಾಗುವಂತೆ ಕೊನೆಗೆ ಅವಳಿಗೆ ಆಶ್ರಯವು ಹೇಗೆ ದೊರೆಯಿತೋ—ಇವೆಲ್ಲವೂ ನಳೋಪಾಖ್ಯಾನದಲ್ಲಿ ಸವಿಸ್ತರವಾಗಿ ವರ್ಣಿತಗಳಾಗಿವೆ. ಇತ್ತಲ್ ನಳನು ಕಾಳ್ಗಿಚ್ಚಿನಲ್ಲಿ ಸಿಕ್ಕಿದ್ದ ಸರ್ಪವೊಂದನ್ನು ಬಿಡಿಸಿ ರಕ್ಷಿಸಲು, ಆ ಹಾವಿನ ವಿಷದ ಪ್ರಭಾವದಿಂದ ಅವನ ಸ್ವರೂಪವು ಬದಲಾಗಿ ಅವನ ಗುರುತೇ ಸಿಕ್ಕದಂತಾಯಿತು. ಅವನು ಅಲೆದಲೆದು ಕೊನೆಗೆ ಋತುಪರ್ಣರಾಜನ ಪಟ್ಟಣವನ್ನು ಸೇರಿ, ಅಲ್ಲಿ ಅವನ ಸಾರಥಿಯಾದನು. ಎಷ್ಟೋಚೆನ್ನಾಗಿಯೂ ಪ್ರೇಮದಿಂದಲೂ ಬಾಳುತ್ತಿದ್ದ ದಂಪತಿಗಳು ಈ ರೀತಿಯಲ್ಲಿ ಬಬ್ಬರನ್ನೊಬ್ಬರು ಅಗಲಿರುವಂತಾಯಿತು. ಇಷ್ಟರಲ್ಲಿ ಭೀಮ ಮಹಾರಾಜನು ತನ್ನ ಮಗಳನ್ನೂ ನಳನನ್ನೂ ಹುಡುಕುವುದಕ್ಕಾಗಿ ಬ್ರಾಹ್ಮಣರನ್ನು ನಾನಾ ದಿಕ್ಕುಗಳಿಗೂ ಕಳುಹಿದ್ದನು. ಅವರಲ್ಲೊಬ್ಬಾತನು, ಸುದೇವನೆಂಬುವನು, ಚೇದಿರಾಜನ ಅರಮನೆಯಲ್ಲಿ ವ್ಯಸನಭರಿತಳಾದ ದಮಯಂತಿಯು ಕುಳಿತು, ಮಹಾರಾಣಿ ಮಾತುಶ್ರೀಯವರಿಗೆ ತನ್ನ ಗೋಳಿನ ಕಥೆಯನ್ನು ಹೇಳಿಕೊಳ್ಳುವಾಗ ಅವಳ ಗುರುತನ್ನು ಹಿಡಿದನು. ಈ ಮಹಾರಾಣಿಯು ಅವಳ ತಾಯಿಯ ಸಹೋದರಿಯೆಂದು ಹಾವೆಯು ತಿಳಿಯಬಂತು. ಆಮೇಲೆ ದಮಯಂತಿಯು, ಎಷ್ಟೆಷ್ಟು ಹೇಳಿದರೂ

ಅಲ್ಲಿ ನಿಲ್ಲದೆ, ತನ್ನ ತಂದೆಯ ಅರಮನೆಗೆ ಹೊರಟುಹೋದಳು. ಭೀಮ ರಾಜನು ನಳನನ್ನು ಹುಡುಕುವುದಕ್ಕೆ ಚಾರರನ್ನು ಮರಳಿ ಕಳುಹಿಸಿದನು. ನಳನಿಗೆಮಾತ್ರ ಅರ್ಥವಾಗುವಂತೆ ರಚಿಸಿದ್ದ ಭಾವಗರ್ಭಿತಗಳಾದ ಕೆಲವು ನುಡಿಗಳನ್ನು ಆ ಚಾರರು ಜನರು ಸೇರಿರುವ ಎಡೆಗಳಲ್ಲೆಲ್ಲಾ ಗಟ್ಟಿಯಾಗಿ ಅಡಿಕೊಂಡು ದೇಶದೇಶಕ್ಕೂ ಹೋಗಿ ನೋಡುವಂತೆ ಆಜ್ಞಾಪಿಸಲ್ಪಟ್ಟಿದ್ದರು. ಎಷ್ಟೋಕಾಲ ಅವರು ಹುಡುಕಿದರು. ಅಯೋಧ್ಯೆಯಲ್ಲಿ ಅರಸಾಗಿದ್ದ ಋತುಪರ್ಣನ ಸಾರಥಿಯಾದ ಬಾಹುಕನೆಂಬ ಹೆಸರುಳ್ಳ ಓರ್ವ ಮನುಜನು ಮಾತ್ರ ಆ ಚಾರರು ಹೊಯ್ದ ಡಂಗುರದ ಮಾತುಗಳನ್ನು ಲಾಲಿಸಿಕೇಳಿ, ಪತಿಯರಿಂದ ತೊರೆಯಲ್ಪಟ್ಟ ಪತ್ನಿಯರ ವ್ಯಸನವು ದುಸ್ಸಹವಾದುದೆಂಬದಾಗಿ ವ್ಯಸನದಿಂದ ನುಡಿದನು. ದಮಯಂತಿಯು ಬಳಿಗೆ ದೇಶಸಂಚಾರದಿಂದ ಹಿಂದಿರುಗಿ ಬಂದು, ಪರ್ಣಾದನೆಂಬ ಚಾರನು ನಡೆದ ಸಂಗತಿಯನ್ನು ತಿಳಿಸಲು, ದಮಯಂತಿಯು ಆ ಮಾತಿನ ಹೊಳಹನ್ನು ತಿಳಿದವಳಾಗಿ, ಸ್ತ್ರೀ ಸಾಮಾನ್ಯವಾದ ತನ್ನ ಚಾತುರ್ಯದಿಂದ ನಳನನ್ನು ತನ್ನೆಡೆಗೆ ತರಿಸುವುದಕ್ಕೆ ಚತುರವಾದೊಂದುಪಾಯವನ್ನು ಯೋಚಿಸಿದಳು. ಋತುಪರ್ಣನೆಡೆಗೆ ಹೋಗಿ, "ದಮಯಂತಿಯು ನಾಳೆಯದಿವಸ ಮತ್ತೊಮ್ಮೆ ಸ್ವಯಂವರ ಮಹೋತ್ಸವವನ್ನು ನಡೆಯಿಸುವಳು" ಎಂದು ಹೇಳುವವನಾಗು ಎಂದು ಚಾರನಿಗೆ ಹೇಳಿದಳು. ನಳನಲ್ಲದೆ ಮತ್ತಾವನೂ ಅಯೋಧ್ಯೆಯಿಂದ ತನ್ನ ತಂದೆಯ ಅರಮನೆಗೆ ಅಷ್ಟು ಕೊಂಚ ಕಾಲದಲ್ಲಿ ರಥವನ್ನು ನಡೆಯಿಸಲಾರನೆಂಬುದನ್ನು ದಮಯಂತಿಯು ಚೆನ್ನಾಗಿ ತಿಳಿದಿದ್ದಳು. ಅವಳ ಉಪಾಯವು ಫಲಿಸಿತು. ಋತುಪರ್ಣನು ಬಾಹುಕನಿಗೆ ವಿದರ್ಭದೇಶದ ರಾಜಧಾನಿಗೆ ಬೇಗನೆ ರಥವನ್ನು ನಡೆಯಿಸೆಂದು ಹೇಳಿದನು. ಬಾಹುಕನು ಹೃದಯದಲ್ಲಿ ಶೋಕಿಸುತ್ತಾ, ವೇಗಾಶ್ವಗಳನ್ನು ಹುಡುಕಿ ತಂದು, ತನ್ನೊಬ್ಬನಿಂದಲೇ ಸಾಧ್ಯವಾದದೊಂದು ತೆರದಲ್ಲಿ ರಥವನ್ನು ವೇಗವಾಗಿ ನಡೆಯಿಸಿ, ಆ ದಿನದ ಸಾಯಂಕಾಲದ ಹೊತ್ತಿಗೇ ವಿದರ್ಭರಾಜಧಾನಿಯನ್ನು ಸೇರಿಸಿದನು. ಅಲ್ಲಿ ದಮಯಂತಿಯು ಪ್ರೀತಿಪುರಸ್ಸರಗಳಾದ ತರಿತ್ರಗಳ ಪ್ರಭಾವದಿಂದ, ಅವಳು ಅನುಮಾನಿಸಿದ್ದಂತೆಯೇ ಅವನು ನಳನೇ ಆಗಿರಬೇಕೆನ್ನುವುದಕ್ಕೆ ತಕ್ಕ ಚಿಹ್ನೆಗಳು ತೋರಬಂದುವು ; ಏಕೆಂದರೆ ತನ್ನ ಮಕ್ಕಳನ್ನು ಕಂಡಾಗ

ಆನಂದ ಬಾಷ್ಪಗಳನ್ನು ಸುರಿಯಿಸಿದನು, ಮತ್ತು ನಳನೊಬ್ಬನಿಗೇ ಸಾಧ್ಯವಾದದೊಂದು ತೆರದಲ್ಲಿ ಅವನು ಅಡಿಗೆಯನ್ನು ಮಾಡಿದನು. ಬಾಹುಕನನ್ನು ತನ್ನೆಡೆಗೆ ಕರೆದುತರುವಂತೆ ದಮಯಂತಿಯು ಆಜ್ಞೆಯನ್ನಿತ್ತಳು. ಜಾಯಾಪತಿಗಳಿಬ್ಬರೂ ಪರಸ್ಪರವಾಗಿ ಗುರುತನ್ನು ಹಿಡಿಯುವರಾದರು, ಅವರ ರಾಜ್ಯವೂ ಅವರ ಕೈಸೇರಿತು; ಮಕ್ಕಳನ್ನೊಡಗೂಡಿ ಅವರು ಅಲ್ಲಿಂದಾಚೆಗೆ ಬಹುಕಾಲದವರೆಗೂ ದಾಂಪತ್ಯದ ಸುಖಗಳನ್ನು ಅನುಭವಿಸುವರಾದರು. (ಮಹಾಭಾರತ, ವನಪರ್ವ. ಅ. ೫೩-೭೯).

ದೀರ್ಘತಪಗಳಿಂದಲೂ ದೇಹಶೋಷಕಗಳಾದ ವ್ರತಾಚರಣೆಗಳಿಂದಲೂ ಆಗುವುದಕ್ಕಿಂತ ಅಧಿಕವಾಗಿ ಮಾನಿನಿಯರಿಗೆ ಪತಿಭಕ್ತಿಯಿಂದಲೂ ಪತಿಸೇವೆಯಿಂದಲೂ ಅಂತರಂಗ ಶುದ್ಧಿಯೂ ಜ್ಞಾನವೂ ವೃದ್ಧಿಯಾಗುವುವು. ಕೌಶಿಕನೆಂಬ ಬ್ರಾಹ್ಮಣಶ್ರೇಷ್ಠನಿಗೆ ಕೋಪಬರುವಂತೆ ಮಾಡಿದ ಬ್ರಾಹ್ಮಣಪತ್ನಿಯ ಕಥೆಯಲ್ಲಿ ಈ ವಿಷಯವು ಸ್ಪಷ್ಟವಾಗುತ್ತದೆ. ಬ್ರಾಹ್ಮಣಶ್ರೇಷ್ಠನಾದ ಕೌಶಿಕನು ಒಂದಾನೊಂದು ಕಾಲದಲ್ಲಿ ಮಹಾತಪಸ್ಸನ್ನು ಮಾಡಿದನು. ಒಂದು ದಿನ ಒಂದು ಮರದ ಬುಡದಲ್ಲಿ ಕುಳಿತು ಧ್ಯಾನಪರನಾಗಿರುವ ವೇಳೆಯಲ್ಲಿ ಆ ಮರದ ಕೊಂಬೆಯೊಂದರ ಮೇಲೆ ಕುಳಿತಿದ್ದ ಸಾರಸಪಕ್ಷಿಯೊಂದು ಅತನ ದಿವ್ಯಶರೀರದ ಮೇಲೆ ಪುರೀಷವನ್ನು ದುರಿಸಿತು. ಕಣ್ಣನ್ನು ತೆರೆದು ಕ್ರೂರದೃಷ್ಟಿಯಿಂದ ಆ ಸಾರಸಪಕ್ಷಿಯನ್ನು ದುರ್ರು ದುರ್ರನೆ ನೋಡಿದನು. ತಪಃಪ್ರಭಾವದಿಂದ ಆ ದೃಷ್ಟಿಯು ಅದೊಂದು ಬಗೆಯ ಚಿಚ್ಛಕ್ತಿಯಿಂದ (psychic power) ಕೂಡಿದ್ದುದರಿಂದ, ಆ ಪಕ್ಷಿಯು ಸಿಡಿಲಿಂದ ಬಡಿಯಲ್ಪಟ್ಟಂತೆ ಆ ಕ್ರೂರದೃಷ್ಟಿಯಿಂದ ಸುಟ್ಟು ಹೋಯಿತು. ಸಾರಸಪಕ್ಷಿಯು ಸುಟ್ಟುಹೋದುದಕ್ಕಾಗಿ ಕೌಶಿಕನು ದುಃಖಪಟ್ಟುದಲ್ಲದೆ, ತನ್ನ ತಪೋಬಲಕ್ಕೆ ನಿದರ್ಶನ ಬಂದುದರಿಂದ ಗರ್ವವನ್ನೂ ಪಟ್ಟನು. ಎಂದಿನಂತೆ, ತನ್ನ ಅನ್ನವನ್ನು ಬೇಡುವುದಕ್ಕೆ ಪಕ್ಕದೂರಿನೊಳಕ್ಕೆ ಹೋದವನಾಗಿ, ಮೊದಲು ಸಿಕ್ಕಿದ ಗೃಹಿಣಿಯನ್ನು "ಭವತೀ ಭಿಕ್ಷಾಂ ದೇಹಿ" ಎಂದು ಕೇಳಿದನು. ಭಿಕ್ಷವನ್ನು ತರುವುದಕ್ಕಾಗಿ ಆ ಗೃಹಿಣಿಯು ಹೋಗುವಷ್ಟರಲ್ಲಿಯೇ, ಆಕೆಯ ಗಂಡನು ದೈನಂದಿನದ ಕೆಲಸದಿಂದ ಪ್ರಯಾಸಪಟ್ಟು, ಧೂಳಿಯಿಂದ ಮುಚ್ಚಿದ ದೇಹದೊಡಗೂಡಿದ

ವನಾಗಿ ಮನೆಗೆ ಬಂದನು. ಸ್ವಲ್ಪ ಕಾದಿರಿಯೆಂದು ಕೌಶಿಕರಿಗೆ ಹೇಳಿ, ಆಕೆಯು ಪತಿಶುಶ್ರೂಷೆಗೆ ತೆರಳಿದಳು. ಕೆಲವುಕಾಲವು ಕಳೆದುಹೋಯಿತು ; ಕೌಶಿಕನ ಸಿಟ್ಟು ಹೆಚ್ಚಿತು. ಅವನಿಗೆ ಬೇಕಾದ ಅನ್ನವನ್ನು ತಗೆದುಕೊಂಡು ಆಕೆಯು ಮರಳಿ ಬಂದಾಗ, ಅವನು ತಾನು ಸಾರಸಪಕ್ಷಿಯನ್ನು ದೃಷ್ಟಿಸಿದ ಕ್ರೂರದೃಷ್ಟಿಗಿಂತಲೂ ಕ್ರೂರವಾದ ದೃಷ್ಟಿಯಿಂದ ಆಕೆಯನ್ನು ದುರುದುರನೆ ನೋಡುತ್ತಾ, ಬ್ರಾಹ್ಮಣನಾದ ತನ್ನನ್ನು ಅಷ್ಟು ಹೊತ್ತು ನಿರಾಕರಿಸಿದುದಕ್ಕೆ ಕಾರಣವೇನೆಂದು ಕೇಳಿದನು. ಆಕೆಯು ವಿನಯಪೂರ್ವಕವಾದ ಮಧುರವಚನದಿಂದ--"ನಿಮ್ಮ ಸೇವೆಗಿಂತ ಪತಿಸೇವೆಯು ನನಗೆ ಗುರುತರ ಕರ್ತವ್ಯ. ನಿಮ್ಮಾಗ್ರಹವನ್ನು ನಿಗ್ರಹಿಸಿರಿ, ಕ್ಷಮಾಗುಣವನ್ನು ಕಲಿಯುವರಾಗಿರಿ, ಬ್ರಾಹ್ಮಣರೇ ! ನಿಮ್ಮನ್ನೇ ನೋಯಿಸುವ ಆಗ್ರಹದ ದೃಷ್ಟಿಯಿಂದ ನನ್ನನ್ನು ನೋಡಬೇಡಿರಿ. ನಾನು ಸಾರಸಪಕ್ಷಿಯಲ್ಲ" ಎಂದು ಹೇಳಿದಳು. ಕೌಶಿಕನು ಬೆರಗಾಗಿ, ಇಂತಹ ದಿವ್ಯದೃಷ್ಟಿಯು ನಿನಗೆ ಹೇಗೆ ಲಭಿಸಿತು ಎಂದು ಪ್ರಶ್ನೆಗೈಯಲು, ಆಕೆಯು—"ಈಶಕ್ತಿಯ ಆರ್ಜನೆಗಾಗಿ ನಾನು ಯಾವ ತಪಸ್ಸನ್ನೂ ಮಾಡಲಿಲ್ಲ ; ನನ ಪತಿಯ ಸೇವೆಯನ್ನು ಮಾತ್ರ ಒಮ್ಮನದಿಂದ ನಾನು ಮಾಡುತ್ತಿರುವೆನು. ಗೃಹಕೃತ್ಯದ ಸುಲಭ ಕರ್ಮಗಳ ಪ್ರಭಾವವನ್ನು ನೀವಿನ್ನೂ ತಿಳಿಯಬೇಕಾದರೆ, ನೀವು ದೂರದಲ್ಲಿರುವ ಮಿಥಿಲಾಪಟ್ಟಣದ ಧರ್ಮವ್ಯಾಧನ ಬಳಿಗೆ ದಯಮಾಡಿರಿ" ಎಂದುಸುರಿದಳು. ಭಗ್ನವಾದ ಗರ್ವದೊಡನೆ ಕೌಶಿಕನು ಮಿಥಿಲಾಪಟ್ಟಣಕ್ಕೆ ಹೋಗಿ, ವ್ಯಾಧನ ಅಂಗಡಿಯ ಸುತ್ತಲೂ ನಿಂತಿದ್ದ ಜನರ ಗುಂಪಿನ ಅಂಚಿನಲ್ಲಿ ನಿಂತುಕೊಂಡನು. ವ್ಯಾಧನು ಕೌಶಿಕನನ್ನು ಕಾಣುತ್ತಲೆ, ಅವರಬಳಿಗೆ ತೆರಳಿ, ನಮಸ್ಕಾರ ಮಾಡಿ, ಪತಿ ಸೇವಾನಿರತಳಾದ ಆ ಗೃಹಿಣಿಯು ನಿಮ್ಮನ್ನು ನನ್ನ ಬಳಿಗೆ ಕಳುಹಿಸಿದ ಕಾರಣವನ್ನು ನಾನು ತಿಳಿದಿರುತ್ತೇನೆ ; ನಿಮ್ಮ ಸಂದೇಹಗಳನ್ನು ಹೋಗಲಾಡಿಸಿ, ನನಗೀಶಕ್ತಿಯು ಏಕಿರುವುದೆಂಬುದನ್ನು ತೋರಿಸಿಕೊಡುವೆನು" ಎಂದನು. ಆಮೇಲೆ ವ್ಯಾಧನು ಕೌಶಿಕನನ್ನು ಕರೆದೊಯ್ದು, ಅವನಿಗೆ ತನ್ನ ವೃದ್ಧ ಮಾತಾಪಿತೃಗಳನ್ನು, ನಾವಾಗಲೇ ತಿಳಿಸಿರುವ ತೆರದಲ್ಲಿ, ತೋರಿಸುವನಾದನು. (ಮಹಾಭಾರತ, ವನಪರ್ವ. ಅ. ೭೩೩).

ಸಹೋದರರು ಭ್ರಾತೃವಿಶ್ವಾಸವನ್ನು ಪರಸ್ಪರವಾಗಿ ಹೇಗೆ ತೋರಿಸಬೇಕೋ ಅದನ್ನು ರಾಮಾಯಣದ ಕಥೆಯಲ್ಲೆಲ್ಲಾ ತಿಳಿಯುತ್ತೇವೆ. ರಾಮಲಕ್ಷ್ಮಣರಿಗೆ ಪರಸ್ಪರ ಪ್ರೀತಿಯು ಅತಿಶಯವಾಗಿತ್ತೆಂತಲೂ, ಒಬ್ಬರನ್ನು ಬಿಟ್ಟು ಒಬ್ಬರು ಮಲಗುತ್ತಿರಲಿಲ್ಲವೆಂತಲೂ, ವಿಹಾರದಲ್ಲಿಯೂ ಕೂಡ ಒಬ್ಬರನ್ನೊಬ್ಬರು ಅಗಲುತ್ತಿರಲಿಲ್ಲವೆಂತಲೂ, ಲಕ್ಷ್ಮಣನು ರಾಮನಿಗೆ ಪ್ರಾಣಪ್ರಾಯನಾಗಿದ್ದನೆಂತಲೂ ಹೇಳಿದೆ. ರಾಮಚಂದ್ರನು ವನಕ್ಕೆ ಹೊರಟಾಗ ಅವನೂ ಜತೆಯಲ್ಲಿಯೇ ಹೋಗಿ, ರಾಮಚಂದ್ರನು ಮಲಗಿ ನಿದ್ರೆ ಮಾಡುತ್ತಿದ್ದಾಗ ಅವನು ನಿಂತು ಕಾವಲಿರುತ್ತಿದ್ದುದೂ ನಮಗೆ ತಿಳಿದಿದೆ; ಸೀತೆಗಾಗಿ ಹುಡುಕುತ್ತಿದ್ದಾಗ ರಾಮಚಂದ್ರನಿಗೆ ಸಹಾಯಮಾಡುತ್ತಾ, ವಿವೇಕದ ನುಡಿಗಳನ್ನು ನುಡಿಯುತ್ತಾ, ರಾಮನ ಶೋಕಕ್ಕೆ ಭಾಗಿಯಾಗುತ್ತಾ ಇದ್ದುದನ್ನು ತಿಳಿದಿದೇವೆ. ಲಂಕೆಯಮುಂಗೆ ಲಕ್ಷ್ಮಣನು ಯುದ್ಧದಲ್ಲಿ ಗಾಯವಡೆದು ಮೂರ್ಛಾಕ್ರಾಂತನಾಗಿ ಬಿದ್ದವೇಳೆಯಲ್ಲಿ ರಾಮನು ಆರ್ತಸ್ವರದಿಂದ ನುಡಿದ ನುಡಿಗಳನ್ನು ಕೇಳಿರಿ. "ಲಕ್ಷ್ಮಣನು ಯುದ್ಧರಂಗದಲ್ಲಿ ಗಾಯವಡೆದು ಮೂರ್ಛಿತನಾಗಿರುವಲ್ಲಿ, ಈ ಯುದ್ಧವೂ ಈ ಪ್ರಾಣವೂ ನನಗೇಕೆ? ನಿನ್ನನ್ನು ತೊರೆದು ಲೋಕಾಂತರಗಳಲ್ಲಿ ಏಕಲೆಯುವೆ? ನೀನಿಲ್ಲದಿರಲ್ಕೆ ಈ ಜೀವವೂ, ಜಯವೂ, ಕೊನೆಗೆ ಸೀತೆಯೂ ಕೂಡ, ಅನುಪಯುಕ್ತಗಳಾಗುವುವು" ಎಂದು ಶೋಕಪಟ್ಟನು.

ಭ್ರಾತೃಭಾವವೂ ಐಕಮತ್ಯವೂ ಸಂಪತ್ತಿಗೂ ಕೀರ್ತಿಗೂ ದಾರಿಯೆಂಬುದನ್ನು ಮಹಾಭಾರತದ ಕಥೆಯೆಲ್ಲಾ ತೋರಿಸುತ್ತದೆ. ಪಾಂಡವರು ಪರಸ್ಪರ ವಿರೋಧ ಭಾವಗಳನ್ನು ಇಟ್ಟುಕೊಂಡಿರಲಿಲ್ಲ, ಬೇರೆ ಬೇರೆಯಾಗಿ ವಾಸಮಾಡಲೂ ಇಲ್ಲ. ಯುಧಿಷ್ಠಿರನು ಕುಟುಂಬಕ್ಕೆಲ್ಲಾ ಪ್ರತಿನಿಧಿಯಾಗಿರುವನು. ತಮ್ಮಂದಿರೆಲ್ಲರೂ ಆತನ ಏಳಿಗೆಯನ್ನೇ ಬಯಸುತ್ತಿರುವರು. ಅವನಿಗಾಗಿಯೇ ಯುದ್ಧಮಾಡುತ್ತಾರೆ; ಅವರು ಸಂಪಾದಿಸುವ ಧನವೆಲ್ಲಾ ಅವನಿಗಾಗಿ ಸಂಪಾದಿಸಲ್ಪಟ್ಟ ಧನವಾಗುವುದು. ಅರ್ಜುನನು ಅಲೆದಲೆದು, ತೊಳಲಿ ಬಳಲಿ, ಉಗ್ರತಪಮಂಗೆಯ್ದು, ಭಯಂಕರವಾಗಿ ಕಾದಿ, ದಿವ್ಯಾಸ್ತ್ರಗಳನ್ನು ತರುವನು. ಇವರುಗಳ ವಿಶ್ವಾಸಕ್ಕೆ ತಕ್ಕಂತೆ ಯುಧಿಷ್ಠಿರನೂ ಇರುವನು. ಅವರ ಸುಖದುಃಖಗಳೆಲ್ಲಾ ಅವನದೇ ಆಗಿರುವುವು.

ಯುಧಿಷ್ಠಿರನು ಸ್ವರ್ಗಲೋಕಕ್ಕೇರಿ ಹೋಗಿ, ಅಲ್ಲಿ ತನ್ನ ಸಹೋದರರನ್ನೂ ಪತ್ನಿಯನ್ನೂ ಕಾಣಲು ಎಲ್ಲಾ ಕಡೆಗಳಲ್ಲಿಯೂ ತಿರುಗಿ ತಿರುಗಿ ನೋಡುವನು. "ನನ್ನ ಸಹೋದರರು ಹೋಗಿರುವ ಕಡೆಗೆ ನಾನೂ ಹೋಗಬೇಕು," ಎಂದು ಪದೇ ಪದೇ ಹೇಳಿಕೊಳ್ಳುತ್ತಾನೆ; ತೇಜಸ್ವಿಗಳಾದ ದೇವತೆಗಳೆಡೆಯಲ್ಲಿಯೇ ಆಗಲಿ, ವಿಜಯಿಗಳಾಗಿ ಮೆರೆವ ರಾಜರೆಡೆಗಳಲ್ಲಿಯೇ ಆಗಲಿ, ತನ್ನ ಪರಮ ವಿಶ್ವಾಸಕ್ಕೆ ಪಾತ್ರರಾದವರ ಮುಖಗಳನ್ನು ಕಾಣುವುದೇ ಇಲ್ಲ. "ಮಹಾ ತೇಜಸ್ವಿಗಳಿರಾ, ಅವರನ್ನಗಲಿರುವ ನನಗೆ ನಿಮ್ಮ ಸ್ವರ್ಗದಿಂದೇನು ತಾನೇ ಆದೀತು? ನನ್ನ ಸಹೋದರರಿರುವ ಸ್ಥಾನವೇ ನನಗೆ ಸ್ವರ್ಗ! ಇದು ನನಗೆ ಸ್ವರ್ಗವೇ ಅಲ್ಲ," ಎಂದು ಮೊರೆಯಿಡುವನಾಗುತ್ತಾನೆ. ಆಗ ದೇವತೆಗಳು ದೇವಲೋಕದ ಚಾರನೊಬ್ಬನನ್ನು ಕರೆದು, ಈ ಮಹಾರಾಜರ ಪರಮ ವಿಶ್ವಾಸಕ್ಕೆ ಪಾತ್ರರಾದವರು ಈಗಿರುವ ತಾಣಕ್ಕೆ ಈ ಮಹಾರಾಜರನ್ನು ಕರೆದುಕೊಂಡು ಹೋಗು ಎಂದು ಹೇಳುತ್ತಾರೆ. ಸ್ವರ್ಗದ ಕಡೆಗೆ ಬೆನ್ನನ್ನು ತಿರುಗಿಸಿದವರಾಗಿ, ಅಂಧಕಾರವು ಹೆಚ್ಚುತ್ತಲಿದ್ದ ಅದೊಂದು ಮಾರ್ಗದಲ್ಲಿ ಅವರಿಬ್ಬರೂ ತೆರಳುವರಾಗುತ್ತಾರೆ. ವಾಯುಮಂಡಲವು ಕತ್ತಲೆ ಕತ್ತಲೆಯಾಗುತ್ತಾ ಹೋಯಿತು, ಮುಬ್ಬಾಗಿದ್ದ ದಾರಿಯು ಅಂಧಕಾರಮಯವಾಗುತ್ತಾ ಹೋಯಿತು. ಶತವಿಕಾರದ ರೂಪಗಳೂ ದುರ್ವಾಸನೆಯ ವಸ್ತುಗಳೂ, ಅವರು ಹೋಗುತ್ತಿದ್ದ ಹಾಗೆಲ್ಲಾ, ಸುತ್ತಲೂ ಗೊಂದಣಿಸುತ್ತಾ ಬಂದುವು; ಹೆಜ್ಜೆಯ ಕೆಳಗಣ ನೆಲವೆಲ್ಲಾ ರಕ್ತದಿಂದ ಜಾರು ನೆಲವಾಗಿ, ಹತರಾದವರ ಹೆಣದ ತುಂಡು ತುಂಡುಗಳಿಂದ ತುಂಬಿಹೋಗಿತ್ತು. ಮನೂಚಾಗಿರುವ ಮುಳ್ಳುಗಳೂ ಚುಚ್ಚುವೆಲೆಗಳೂ ಪಥವನ್ನಾಟಂಕಿಸಿದ್ದುವು. ಸುಡು ಸುಡುವ ಮರಳೂ ಬೆಳ್ಳಗೆ ಪ್ರಜ್ವಲಿಸುತ್ತಿರುವ ಕಬ್ಬಿಣದ ಕಲ್ಲುಗಳೂ ತುಂಬಿದ್ದುವು. ಮಹಾರಾಜನು ಸ್ತಬ್ಧನಾಗಿ ನಿಂತು, ತನ್ನ ದೇವಲೋಕದ ಮಾರ್ಗದರ್ಶಿಯನ್ನು ಇದೆಲ್ಲಾ ಏನೆಂದು ಬೆಸಗೊಂಡನು. "ನಿಮ್ಮನ್ನು ಇಲ್ಲಿಗೆ ಕರೆದುಕೊಂಡು ಹೋಗುವಂತೆ ನನಗೆ ಅಪ್ಪಣೆಯಾಯಿತು; ತಮಗೆ ಆಯಾಸವಾಗುವ ಪಕ್ಷಕ್ಕೆ ಹಿಂದಿರುಗಬಹುದು," ಎಂದು ಉತ್ತರವನ್ನಿತ್ತನು. ಮೆಲ್ಲಮೆಲ್ಲನೆ, ಸಂದೇಹಯುಕ್ತನಾಗಿ, ಯುಧಿಷ್ಠಿರನು, ಪಾಪಮಯವಾದೀ ಕಶ್ಮಲಪ್ರದೇಶದಲ್ಲಿ

ತನ್ನ ತಮ್ಮಂದಿರು ಇರಲೇ ಆರರೆಂದು ನಿಶ್ಚಯಿಸಿಕೊಳುತ್ತಾ ಹಿಂದಿರುಗಲೆತ್ನಿಸಿದನು. ಎಲ್ಲಾ ಕಡೆಗಳಿಂದಲೂ, "ತಾವು ನಿಲ್ಲಬೇಕು ; ಕಿಂಚಿತ್ಕಾಲವಾದರೂ ನಿಲ್ಲಬೇಕು" ಎಂಬ ಕೂಗುಗಳೂ ಆರ್ತಸ್ವರದ ಪ್ರಾರ್ಥನೆಗಳೂ ಕೇಳಬಂದುವು. "ನೀವು ಯಾರು ?" ಎಂದು ವಿಸ್ಮಯಭರಿತನಾದ ಮಹಾರಾಜನು ಕೇಳಲು, ಬಿಕ್ಕಿ ಬಿಕ್ಕಿಯಳುತ್ತಾ ಕೊಟ್ಟ ಉತ್ತರಗಳು ಎಲ್ಲಾ ಕಡೆಗಳಿಂದಲೂ ಬಂದುವು; "ನಾನು ಕರ್ಣ," "ನಾನು ಭೀಮ ;" "ನಾನು ಅರ್ಜುನ ;" "ನಾನು ನಕುಲ ;" "ನಾನು ಸಹದೇವ ;" "ನಾನು ದ್ರೌಪದಿ ;" ಎಂಬ ಗೋಳುಗಳು ಕಿವಿಯನ್ನು ಹೊಕ್ಕುವು. ಮರ್ತ್ಯಲೋಕದಲ್ಲಿ ಪ್ರೇಮಕ್ಕೆ ಪಾತ್ರರಾಗಿದ್ದ ಇತರರ ಪಾಡೂ ಹೀಗೆಯೇ ಇತ್ತು. ತನ್ನ ಸಹೋದರರಿಗೆ ಇದ್ದ ವ್ಯಥೆಗಳನ್ನು ನೋಡಿ, ಕುಪಿತನಾಗಿ, ಯುಧಿಷ್ಠಿರನು ಮಾರ್ಗದರ್ಶಿಯನ್ನು ಕುರಿತು—"ಹಿಂದಿರುಗಿ ಹೋಗು, ನಿನ್ನ ಸ್ವರ್ಗಕ್ಕೇ ನೀನು ಹೋಗು. ಮಾರ್ಗದರ್ಶಿಯೆಂದು ನಿನ್ನನ್ನು ಕಳುಹಿಸಿದವರೆಡೆಗೇ ನೀನು ಹೋಗು. ನನ್ನ ನಿವಾಸಸ್ಥಾನವಿರುವುದು ಅವರೆಡೆಯಲ್ಲಲ್ಲ ; ಇಲ್ಲಿ, ಇಲ್ಲಿ, ನನ್ನ ಪ್ರೀತಿಗೆ ಪಾತ್ರರಾದವರಿರುವೆಡೆಯಲ್ಲಿ ! ಸ್ವರ್ಗದ ಬಂಜೆ ಸೊಗಗಳಿಗೆ ನೀನೇ ಹೋಗು ; ಬಂಟಯಾಗಿ ಅಲ್ಲಿ ಸುಖಪಡುವುದಕ್ಕಿಂತ ನನ್ನವರೆಡೆಯಲ್ಲಿ ಕ್ಲೇಶಪಡುವುದೇ ಲೇಸು" ಎಂದೊದರಿದನು. ಹೀಗೆ ಮಾತನಾಡುವಷ್ಟರಲ್ಲಿಯೇ ಸ್ವರ್ಗದ ಪರಿಮಳವು ಸುತ್ತಲೂ ಆವರಿಸಿತು ; ವ್ಯಥಾಕರ ವಸ್ತುಗಳೆಲ್ಲಾ ಮಾಯವಾದುವು ; ಹಿತಕರ ಮಂದಮಾರುತವು ಬೀಸಿತು ; ಜ್ಯೋತಿಗಳು ಬೆಳಗಿದುವು ; ದೇವತೆಗಳು ಗುಂಪುಗೂಡಿದರು ; ಏಕೆಂದರೆ, ಪ್ರೀತಿಯ ಶಕ್ತಿ ನರಕಕ್ಕಿಲ್ಲವಾಯಿತು, ಮತ್ತು ಶ್ರದ್ಧೆಯ ಪ್ರಭಾವವು ಯಾತನೆಗೆ ಇಲ್ಲದೆ ಹೋಯಿತು.

ಕುಟುಂಬಕ್ಕೆ ಹೊರಪಟ್ಟವರಿಗೆ ತೋರಿಸಬೇಕಾದ ಸದ್ಗುಣಗಳಲ್ಲಿ ಅತಿಥಿ ಸೇವೆಯು ಅಗ್ರಸ್ಥಾನವನ್ನು ಹೊಂದಿರುತ್ತದೆ. ಅರ್ಧ ಶರೀರವನ್ನು ಸುವರ್ಣಮಯವಾಗಿ ಮಾಡಿಕೊಂಡಿದ್ದ ಮುಂಗಸಿಯ ಕಥೆಯಿಂದ ಅತಿಥಿ ಸೇವೆಯ ಮಹಾಪ್ರಭಾವವು ತಿಳಿಯಬರುವುದು. ಈ ಮುಂಗಸಿಯು ಯುಧಿಷ್ಠಿರ ಮಹಾರಾಜನ ಅಶ್ವಮೇಧಯಾಗಕ್ಕೆ ಬಂದಿತು. ಯಾಗಶಾಲೆಯಲ್ಲಿ ಎಲ್ಲಾ ವಿತಾನಗಳೂ (arches) ಸ್ತಂಭಗಳೂ ಪಾತ್ರೆಗಳೂ ಚಿನ್ನ

ದಿಂದ ಮಾಡಲ್ಪಟ್ಟದ್ದುವು, ಮತ್ತು ರತ್ನಗಳನ್ನೂ ಧನವನ್ನೂ ಜನರೆಲ್ಲರೂ ಬೇಕು ಬೇಕಾದಹಾಗೆ ಹೊತ್ತುಕೊಂಡು ಹೋಗುತ್ತಿದ್ದರು ; ಬೇಡವೆನ್ನುವರೇ ಇರಲಿಲ್ಲ. ಇಂತಿದ್ದರೂ ಆ ಮುಂಗಸಿಯು ಅಲ್ಲಿ ಕೊಟ್ಟ ದಾನಗಳನ್ನು ನಿಕೃಷ್ಟಮಾಡಿತು. ಒಬ್ಬ ಬಡ ಬ್ರಾಹ್ಮಣನು ತನ್ನ ಅತಿಥಿಗೆ ಕೊಟ್ಟ ಯವಧಾನ್ಯದ ಹಿಟ್ಟಿನ ಅದೊಂದು ಅಲ್ಪಭಾಗದಷ್ಟೂ ಕೂಡ ಇಲ್ಲಿಯ ದಾನಗಳ ಬಿಟ್ಟು ಬೆಲೆಯು ಬರುವುದಿಲ್ಲ ಎಂದು, ತನ್ನ ಕಥೆಯನ್ನು ಈ ರೀತಿಯಲ್ಲಿ ಹೇಳಿತು. ಉಂಛಶಿಲವೃತ್ತಿಗಳನ್ನಾಚರಿಸುತ್ತಿದ್ದ ಒಬ್ಬ ಬ್ರಾಹ್ಮಣನಿದ್ದನು ; ಪ್ರತಿದಿನದಲ್ಲಿಯೂ ಅವನು ಆರಿಸಿ ತಂದ ಕಾಳುಗಳಿಂದ ಅವನಿಗೂ ಆವನ ಹೆಂಡತಿಗೂ, ಅವನ ಮಗನಿಗೂ, ಸೊಸೆಗೂ ಒಂದು ಹೊತ್ತಿನ ಕದನ್ನ ಭೋಜನವಾಗುತ್ತಿತ್ತು. ಹೀಗಿರುವಲ್ಲಿ ಘೋರಕ್ಷಾಮವದೊಂದು ಬಂದು ದೇಶವನ್ನೆಲ್ಲಾ ಕ್ಷೀಣದೆಶೆಗೆ ತಂದಿತು. ಕಣಗಳಲ್ಲಿ ಸಿಕ್ಕುವ ಕಾಳುಗಳು ಕಡಮೆಯಾದುವು. ಅವನೂ ಅವನ ಕುಟುಂಬದವರೂ ತಿಂಡಿಸಾಲದೆ ಕೃಶವಾಗುತ್ತಾ ಹೋಗಿ, ಕೊನೆಗೆ ಅವರಿಗೆ ಅಸ್ತಿ ಚರ್ಮಗಳು ಮಾತ್ರ ಉಳಿದುವು. ಬಂದಾನೊಂದು ದಿವಸ ಅವನು ಯವಧಾನ್ಯದಕಾಳನ್ನು ಸ್ವಲ್ಪವಾಗಿ ತಂದಿದ್ದನು. ಗೃಹಿಣಿಯು ಅದನ್ನು ಹಿಟ್ಟುಮಾಡಿ, ನಾಲ್ಕುಮಂದಿಗೂ ಬರುವಂತೆ ಭಾಗಮಾಡಿಟ್ಟಳು. ಎಲ್ಲರೂ ಸಂತೋಷದಿಂದ ಭೋಜನಕ್ಕೆ ಕುಳಿತರು; ಆದರೆ ಹಿಟ್ಟಿನುಂಡೆಗಳಿಗೆ ಕೈ ಹಾಕುವುದಕ್ಕೆ ಮೊದಲೇ ಒಬ್ಬ ಅತಿಥಿಯು ಬಾಗಿಲಲ್ಲಿ ಬಂದು ನಿಂತನು. ಬ್ರಾಹ್ಮಣನು ತಟ್ಟನೆದ್ದು, ಆ ಅತಿಥಿಯನ್ನು ಒಳಕ್ಕೆ ಕರೆದು, ನೀರನ್ನು ಕೊಟ್ಟು ಪೀಠದಲ್ಲಿ ಕುಳ್ಳಿರಿಸಿ, ತನ್ನ ಭಾಗಕ್ಕೆ ಬಂದಿದ್ದ ಹಿಟ್ಟನ್ನು ಆತನ ಮುಂದಿಟ್ಟನು. ಅದನ್ನು ಭೋಜನ ಮಾಡಿದರೂ ಅತಿಥಿಯ ಹಸಿವು ಅಡಗಲಿಲ್ಲ. ಆಗ ಗೃಹಿಣಿಯು ತನ್ನ ಭಾಗದ ಹಿಟ್ಟನ್ನು ತಂದು ತನ್ನ ಪತಿಯ ಕೈಯಲ್ಲಿಟ್ಟು, ಅತಿಥಿಯನ್ನು ಸತ್ಕರಿಸೆಂದು ಬೇಡಿದಳು. "ಎನ್ನ ಮಗನ ತಾಯಿಯೇ, ನೀನು ತ್ರಾಣವಿಲ್ಲದೆ ತಲ್ಲಣಿಸುತ್ತಿರುವೆ. ಈ ಅನ್ನವನ್ನಿಟ್ಟುಕೊಂಡು ನೀನೇ ತಿನ್ನು; ನನ್ನ ಮನೆಯ ದೀವಿಗೆಯೇ ಹೋದರೆ, ನಾನೇನುತಾನೇ ಮಾಡಲಾಧೀತು" ಎಂದು ಬ್ರಾಹ್ಮಣನು ತನ್ನ ಪತ್ನಿಗೆ ಹೇಳುವನಾದನು. ಆದರೂ ಆಕೆಯೊಡಂಬಡದೆ, ಅತಿಥಿ ಸತ್ಕಾರವೆಂಬ ಪರಮ ಧರ್ಮವನ್ನುಲ್ಲಂಘಿಸಲೇ ಬಾರದು

ಎಂದು ಹೇಳಲು, ಆ ಬ್ರಾಹ್ಮಣನು ನಿಟ್ಟುಸುರನ್ನು ಬಿಟ್ಟು, ಅದನ್ನು ತೆಗೆದುಕೊಂಡು ಅತಿಥಿಗೆ ಸಮರ್ಪಿಸಿದನು. ಇಷ್ಟಾದರೂ ಅತಿಥಿಯ ಹಸಿವು ಅಡಗಲೇ ಇಲ್ಲ. ಆಗ ಮಗನು ತನ್ನ ಭಾಗವನ್ನು ತಂದುಕೊಟ್ಟನು. ತನುಜನ ಹಸಿವಿಗೂ ಅವನ ದೇಹಕಾರ್ಶ್ಯಕ್ಕೂ ತಂದೆಯು ಸಂಕಟಪಡುತ್ತಾ, ಆ ಭಾಗವನ್ನೂ ಅತಿಥಿಯ ಮುಂದಿಟ್ಟನು. ಅಯ್ಯೋ! ಆ ಅತಿಥಿಯ ಹಸಿವು ಆಗಲೂ ಅಡಗದಿತ್ತು; ಏಕೆಂದರೆ ಒಂದೊಂದೂ ಭಾಗವು ಅತ್ಯಲ್ಪವಾಗಿದ್ದುದರಿಂದ, ಅತಿಥಿಯ ಹಸಿವಿಗೆ ಅವು ಲವಲೇಶಗಳಾಗಿದ್ದುವು. ಸೊಸೆಗಿದ್ದ ಭಾಗವೂ ಉದುರುತ್ತಿದ್ದ ಯಜಮಾನನ ಕೈಗೆ ಆಗ ನೀಡಲ್ಪಟ್ಟಿತು; ಆದರೆ ಅವನು ಹೃದಯದಲ್ಲಿ ಕ್ಲೇಶವುಳ್ಳವನಾಗಿ, ತನ್ನ ಕೈಯನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಾ, "ನಿನ್ನದು ಬೇಡ; ಎಲೈ ತರಳೆಯೇ, ನಿನ್ನದು ಬೇಡ, ನಿನ್ನದು ಬೇಡ" ಎಂದನು. ಆ ಸೊಸೆಯು ಆಗ ಭಯ ಭಕ್ತಿ ಪೂರ್ವಕವಾಗಿ ಮಧುರಸ್ವರದಿಂದ-"ಎನ್ನ ಮಗನ ತಂದೆಯ ತಂದೆಯೇ, ನಿನ್ನ ಸತ್ಕಾರ್ಯಗಳಿಂದ ನನ್ನನ್ನು ಬಹಿಷ್ಕರಿಸಬೇಡ. ದೇವನಂತೆಯೇ ಅತಿಥಿ ಇರುವನು. ನಿನ್ನ ಶಾರೀರ ಮಾಂಸಪ್ರಾಯವಾದೀ ನನ್ನ ಭಾಗದ ಅನ್ನದಿಂದ ಅತಿಥಿಯನ್ನು ತೃಪ್ತಿಗೊಳಿಸು" ಎಂದು ಬೇಡಿದಳು. ಕಂಬನಿಗರೆಯುತ್ತಾ ಅದನ್ನು ತೆಗೆದುಕೊಂಡು, ಮಂದಸ್ಮಿತವದನನಾಗಿ ಅದನ್ನೂ ಅತಿಥಿಯ ಮುಂದಿಟ್ಟನು. ಅತಿಥಿಯು ಅದನ್ನು ತಿಂದು ತೃಪ್ತನಾದನು. ಆ ಅತಿಥಿಯು ಏಳುತ್ತಲೇ, ಅದೊಂದು ದಿವ್ಯತೇಜಸ್ಸು ತಲೆದೋರಿತು; ಅದರ ಮಧ್ಯದಲ್ಲಿ ಆತನು ದಿವ್ಯಪುರುಷನಾಗಿ ಮೆರೆದನು; ಏಕೆಂದರೆ, ಆ ಅತಿಥಿಯು ಬಲಶಾಲಿಯಾದ ಮತ್ತು ಪರಿಶುದ್ಧಾತ್ಮನಾದ ಧರ್ಮರಾಜನೇ ಆಗಿದ್ದನು. ಅವನು ತಿನ್ನದೆ ಬಿಟ್ಟಿದ್ದ ಕೆಲವು ಭಾಗದ ಧಾನ್ಯದ ಪುಡಿಯಲ್ಲಿ ಮುಂಗಸಿಯು ಹೊರಳಿದುದರಿಂದ, ಆ ಯಜ್ಞದ ಪ್ರಭಾವದಿಂದ ಅದರ ಶರೀರಾರ್ಧವು ಸುವರ್ಣಮಯವಾಯಿತು. ಅತಿಥಿಸತ್ಕಾರವು ಅಮೂಲ್ಯವಾದುದು; ಅದರ ಪ್ರಭಾವವೂ ನಿರತಿಶಯವಾದುದು. (ಮಹಾಭಾರತ. ಅಶ್ವಮೇಧಪರ್ವ. ಅ. ೯೦).

ದುಷ್ಟನಾದ ಬೇಡನೊಬ್ಬನಿದ್ದನು. ನಿರಪರಾಧಿಗಳಾದ ಪಕ್ಷಿಮೃಗಗಳನ್ನು ಪ್ರತಿ ದಿನದಲ್ಲಿಯೂ ಕೊಲ್ಲುತ್ತಿದ್ದ ಆ ದುಷ್ಟನ ಪಾಪಕೃತ್ಯಗಳ ಬಣ್ಣದಂತೆಯೇ ಆತನ ಮೈಬಣ್ಣವೂ ಕಪ್ಪಾಗಿತ್ತು; ಅವನು ಕೊಲ್ಲುತ್ತಿದ್ದ

ಪ್ರಾಣಿಗಳ ವಿಷಯದಲ್ಲಿ ಅವನಿಗಿದ್ದ ದ್ವೇಷಜ್ವಾಲೆಯ ಬಣ್ಣದಂತೆಯೆ ಅವನ ಕಣ್ಣಿನ ಬಣ್ಣವೂ ಕೆಂಪಗಿತ್ತು. ಇಂತಹ ಪರಮ ನೀಚನು ಒಂದಾನೊಂದು ದಿವಸ ಕಾಡಿನ ಮಧ್ಯಪ್ರದೇಶದಲ್ಲಿ ಮಹಾಭಯಂಕರವಾದ ಗುಡುಗು ಮಿಂಚಿನ ಮಳೆಗೆ ಸಿಕ್ಕಬಿದ್ದನು. ಒಂದು ನಿಮಿಷಮಾತ್ರದಲ್ಲಿ ಆ ಕಾಡಿನ ಬೈಲು ನೆಲಗಳು ಕೆರೆಗಳಾದುವು; ಕಾಲುಹಾದಿಗಳೆಲ್ಲಾ ನೀರಿನ ಕಾಲುವೆಗಳಾದುವು. ತಿಟ್ಟಗೆ ಹೋಗಬೇಕೆಂದು ದಾರಿಯನ್ನು ನೋಡಿದನು ; ಆದರೆ ಆ ಅರಣ್ಯವಾಸಿಗಳಾದ ಕರಡಿ ಸಿಂಹ ಮುಂತಾದ ದುಷ್ಟಮೃಗಗಳು ಅಲ್ಲಿ ಸೇರಿದ್ದುವು. ಚಳಿಯಿಂದ ನಡುಗುತ್ತಿದ್ದರೂ, ಭಯದಿಂದ ಕಂಪಿಸುತ್ತಿದ್ದರೂ, ಕ್ರೂರಕೃತ್ಯಗಳನ್ನು ಅವನು ಬಿಡಲಿಲ್ಲ. ಭೋರ್ಗರೆವ ಮಳೆಯ ಹೊಡೆತಕ್ಕೆ ಸಿಕ್ಕಬಿದ್ದು, ಚಳಿಯಿಂದ ಬೆರತು, ಏಳಲಾರದೆ ನೆಲದಮೇಲೆ ಮಲಗಿದ್ದ ಹೆಣ್ಣು ಪಾರಿವಾಳದ ಪಕ್ಷಿಯೊಂದನ್ನು ಕಂಡು, ನಿರ್ಘೃಣನಾಗಿ, ಅದನ್ನು ತೆಗೆದು, ತನ್ನ ಪಂಜರದೊಳಕ್ಕೆ ಹಾಕಿಕೊಂಡನು. ಮುಂದುಮುಂದಕ್ಕೆ ಹೋಗುತ್ತಿರಲು, ಕೊಂಚಹೊತ್ತಿನಲ್ಲಿಯೇ ಅವನು ಆ ಅರಣ್ಯಮಧ್ಯದಲ್ಲಿ ಲಕ್ಷೋಪಲಕ್ಷ ಪಕ್ಷಿಗಳಿಗೆ ನೆರಳನ್ನೂ ಆಶ್ರಯವನ್ನೂ ಕೊಡುತ್ತಿದ್ದ ಅನೊಂದು ಮಹಾವೃಕ್ಷದ ಸಮೀಪಕ್ಕೆ ಬರುವನಾದನು. ಲೋಕಹಿತಾರ್ಥಕ್ಕಾಗಿಯಿರುವ ಸಜ್ಜನದಂತೆ ಆ ವೃಕ್ಷವು ಸರ್ವಪ್ರಾಣಿ ಹಿತಾರ್ಥವಾಗಿ ಜಗದೀಶ್ವರನಿಂದ ಪ್ರತಿಷ್ಠಿತವಾಗಿದ್ದಂತೆ ಕಾಣುತ್ತಿತ್ತು. ವಿಶಾಲವಾಗಿ ಹರಡಿಕೊಂಡಿದ್ದ ಆ ಮರದಕೊಂಬೆಗಳ ಕೆಳಗೆ ಬೇಡನು ಬಂದು ನಿಂತನು. ಕೊಂಚಹೊತ್ತಿನಮೇಲೆ ಮೋಡಗಳು ಹರಿದು ಹೊದುವು, ಮತ್ತು ನಕ್ಷತ್ರಗಳು ಕಾಣಿಸಿಕೊಂಡುವು. ಆದರೂ ಬೇಡನು ತನ್ನ ಮನೆಯು ಬಹು ದೂರವಾಗಿದ್ದುದರಿಂದ ರಾತ್ರಿಯನ್ನು ಆ ಮರದ ಕೆಳಗೇ ಕಳೆಯಬೇಕೆಂದು ನಿಶ್ಚಯಿಸಿದನು. ಮರದ ಕೆಳಗೆ ಮಲಗಿರುವಾಗ ಅವನಿಗೆ ಗಂಡುಪಾರಿವಾಳದ ಗೋಳು ಕೇಳಬಂತು. “ಅಯ್ಯೋ! ಪ್ರಿಯಪತ್ನಿಯೇ, ನೀನಿನ್ನೂ ಬರಲಿಲ್ಲವಲ್ಲಾ! ನಿನಗೇನಾಗಿರಬಹುದೋ? ಕೆಂದಾವರೆಯಂತೆ ಕಣ್ಣುಗಳನ್ನೂ, ಮಧುರತರ ಧ್ವನಿಯನ್ನೂ, ಮೃದುತನುಗಳಾದ ಗರಿಗಳನ್ನೂ ಉಳ್ಳ ನನ್ನಾಪ್ರಿಯಪತ್ನಿಯು ನನ್ನ ಗೂಡಿಗೆ ಬಾರದ ಪಕ್ಷಕ್ಕೆ, ನನ್ನ ಪ್ರಾಣವನ್ನು ಈ ಶರೀರದಲ್ಲಿಟ್ಟುಕೊಂಡಿರುವುದು ವ್ಯರ್ಥ!” ಗೃಹಿಣಿಯಿ

ಲ್ಲದಗೃಹ ಗೃಹವೇ ಅಲ್ಲ ; ಗೃಹಿಣಿಯೇ ಗೃಹ. ನಾನುಂಡಾಗ ಅವಳೂ ಉಣ್ಣುವಳು, ನಾನು ಮಿಂದಾಗ ಅವಳೂ ಮಿಾಯುವಳು ; ನಾನು ಸುಖಪಟ್ಟಾಗ ಅವಳೂ ಸುಖಪಡುವಳು ; ನಾನು ದುಃಖಿಸಿದಾಗ ಅವಳೂ ದುಃಖಿಸುವಳು. ಇಂತಿದ್ದರೂ ನಾನು ಕೋಪಿಸಿಕೊಂಡಾಗ, ಅವಳು ಸವಿಮಾತುಗಳನ್ನೇ ಆಡುವಳು. ಇಂತಹ ಹೆಂಡತಿಯಿಲ್ಲದಿದ್ದಲ್ಲಿ ಬಾಳೆಂಬುದು ಬಟ್ಟಬಯಲೇ ಆಗುತ್ತದೆ. ಇಂತಹಳಿಲ್ಲದಿದ್ದಲ್ಲಿ ಭವನವೂ ಬರಿಯ ವನವೇ ಆಗುವುದು. ಧರ್ಮಾರ್ಥಕಾಮಕ್ರಿಯೆಗಳಲ್ಲೆಲ್ಲಾ ಇಂತಹ ಕಾಮಿನಿಯು ಪ್ರಿಯಮಿತ್ರಯಾಗಿಯೂ ಆಪ್ತಸಖಿಯಾಗಿಯೂ ಇರುವಳು. ಪತಿಗೆ ಪತ್ನಿಯೇ ಪರಮಸಂಪತ್ತು. ಸಂಸಾರದ ತಾಪತ್ರಯಗಳಲ್ಲೆಲ್ಲಾ ಅವನನ್ನು ಎಡೆಬಿಡದೆ ಸೇವಿಸುವವಳು ಅವಳೊಬ್ಬಳೇ. ಮನೋರೋಗಕ್ಕೆಲ್ಲಾ ಪತ್ನಿಯೇ ಸಿದ್ಧೌಷಧಿ. ಪತ್ನಿಯಂತಹ ಸ್ನೇಹಿತನೇ ಇಲ್ಲ, ಪತ್ನಿಗೆ ಮೇಲೆನಿಸುವ ಆಶ್ರಯವೇ ಇಲ್ಲ" ಎಂದು ಪೇಚಾಡುತ್ತಿತ್ತು.

ದುಷ್ಟಕಿರಾತನು ಪಂಜರದೊಳಗೆ ಸೆರೆ ಹಾಕಿಟ್ಟಿದ್ದ ಹೆಣ್ಣು ಪಾರಿವಾಳವು ತನ್ನ ಪತಿಯ ವಿಲಾಪವಚನಗಳನ್ನು ಕೇಳಿ, ತನಗೆ ತಾನೇ—"ನನ್ನ ಪ್ರೇಮಕಾಂತನು ನನ್ನನ್ನು ಈ ಬಗೆಯ ಪ್ರೇಮದಿಂದ ಭಾವಿಸಿರುವುದನ್ನು ನಾನು ಕೇಳಿದುದರಿಂದ, ಪ್ರಾಣಸಂಕಟದಲ್ಲಿ ನಾನಿದ್ದರೂ, ನನ್ನ ಆನಂದವು ಅಪಾರವಾಯಿತು ! ತನ್ನ ಪತಿಯಲ್ಲಿಯೇ ತೃಪ್ತಳಾಗಿಲ್ಲದವಳು ಪತ್ನಿಯೇ ಅಲ್ಲ. ಅದೆಂತೂ ಸರಿ. ಕ್ರೂರವಾದ ಮಳೆಗುಡುಗುಗಳಿಗೆ ಸಿಕ್ಕಿ, ಮನದನ್ನೆಯಿರುವ ಮನೆಗೆ ದೂರವಾಗಿ, ಇಲ್ಲಿ ಬಿದ್ದಿರುವ ಈ ಬಡಬೇಡನ ದುರವಸ್ಥೆಯನ್ನೂ ನಾವು ವಿಚಾರಮಾಡಲೇಬೇಕು. ನಮ್ಮ ನಿವಾಸವೃಕ್ಷದಡಿಯಲ್ಲಿ ಇವನಿರುವುದರಿಂದ ಈಗ ಇವನು ನಮ್ಮ ಅತಿಥಿಯಾಗಿಯೇ ಇರುವನು," ಎಂದು ಹೇಳಿಕೊಂಡಿತು. ತನ್ನ ಗಂಡನನ್ನು ಕೂಗಿ ಅವನಿಗೆ ಬೇಡನ ದುರವಸ್ಥೆಯನ್ನು ತಿಳಿಸಿತು. ಗಂಡುಪಾರಿವಾಳವು ಕೂಡಲೆ ತನ್ನ ದುಃಖಗಳನ್ನೆಲ್ಲಾ ಮರೆತು, ಬೇಡನನ್ನು ಕುರಿತು—"ಪೂಜ್ಯನಾದ ಅತಿಥಿಯಾಗಿ ನನ್ನ ಮನೆಯನ್ನಲಂಕರಿಸಿರುತ್ತೀಯೆ ; ನನ್ನಿಂದಾಗುವ ಕೆಲಸವೇನಿದ್ದರೂ ನನಗೆ ತಿಳಿಸುವವನಾಗು" ಎಂದು ಬೇಡಿಕೊಂಡಿತು. "ಚಳಿಯಿಂದ ಮೈಯೆಲ್ಲಾ ಜೆರತಿದೆ; ಸಾಧ್ಯವಾದರೆ ನನ್ನ ಮೈಯನ್ನು ಬೆಚ್ಚಗೆ ಮಾಡು" ಎಂದು

ಬೇಡನು ಕೇಳಿದನು. ಉದುರಿಯೊಣಗಿಹೋಗಿದ್ದ ಎಲೆಗಳನ್ನು ಕೂಡ ಹಾಕಿ, ಕೊಕ್ಕಿನಲ್ಲಿ ಒಂದೆಲೆಯನ್ನು ಕಚ್ಚಿಕೊಂಡು ಹಾರಿಹೋಗಿ, ಪಕ್ಕದಲ್ಲಿದ್ದ ಒಂದು ಹಳ್ಳಿಯಿಂದ ಪುಟ್ಟಕಿಡಿಯೊಂದನ್ನು ಅದರಲ್ಲಿಟ್ಟುಕೊಂಡು ತಂದು ಕೊಟ್ಟಿತು. ಒಂದೇ ನಿಮಿಷದಲ್ಲಿ ಬೇಡನು ಬೆಂಕಿಯಿಂದ ಮೈಯನ್ನು ಬೆಚ್ಚಗೆ ಮಾಡಿಕೊಂಡನು. ಆಗ ಪಾರಿವಾಳವು ತನ್ನಿಂದಾಗುವ ಕೆಲಸವು ಮತ್ತಾವುದಿರುವುದೆಂದು ಬೆಸಗೊಂಡಿತು. ಅನ್ನವನ್ನು ನೀಡು ಎಂದು ಬೇಡನು ಕೇಳಿದನು. "ಇವನಿಗೆ ನೀಡುವುದಕ್ಕೆ ನನ್ನಲ್ಲಿ ಕಾಳುಗಳೇನೂ ಇಲ್ಲ; ಆದರೂ ಹಸಿದಿರುವ ಅತಿಥಿಗೆ ಅನ್ನವನ್ನೀಯದೆ ಯಿರಕೂಡದು" ಎಂದು ಯೋಚಿಸುತ್ತಿತ್ತು. ಹೀಗೆ ಪರ್ಯಾಲೋಚಿಸುತ್ತಿರುವಲ್ಲಿ, ಅದರ ಬುದ್ಧಿಯಲ್ಲಿ ನವೀನಕಲೆಯೊಂದು ಹೊಳೆಯಿತು. ಸಂತೋಷದಿಂದದು ಅತಿಥಿಗೆ—"ನಿನ್ನ ಮನಸ್ಸನ್ನು ಸಂತೋಷ ಪಡಿಸುವೆನು. ಅತಿಥಿಸತ್ಕಾರದಿಂದ ಮಹಾಪುಣ್ಯವು ಲಭಿಸುವುದೆಂದು ಮಹಾತ್ಮರಾದ ಋಷಿಗಳೂ ದೇವತೆಗಳೂ ಪಿತೃಗಳೂ ಪೂರ್ವದಲ್ಲಿ ಹೇಳಿದುದನ್ನು ನಾನು ಕೇಳಿದೇನೆ. ಎಲೈ ನನ್ನ ಮಿತ್ರನೇ, ಕರುಣಾಳುವಾಗಿ ನನ್ನ ಅಲ್ಪಸೇವೆಯನ್ನು ಸ್ವೀಕರಿಸುವನಾಗು" ಎಂದು ಹೇಳುತ್ತಾ, ಆ ಅಗ್ನಿಯನ್ನು ಮೂರುಸಾರಿ ಪ್ರದಕ್ಷಿಣೆಮಾಡಿ ತನ್ನ ಶರೀರವನ್ನು ಅತಿಥಿಗೆ ಆಹಾರಕ್ಕಾಗಿ ಅರ್ಪಿಸುವೆನೆಂದು ಉರಿಯನ್ನು ಪ್ರವೇಶಿಸಿತು.

ಅತಿಥಿಸತ್ಕಾರದ ಈ ಪರಮೋತ್ಕೃಷ್ಟಸೇವೆಯನ್ನು ಕಂಡಕೂಡಲೆ, ಬೇಡನ ಮನಸ್ಸು ಉಲ್ಲೋಲಕಲ್ಲೋಲವಾಯಿತು. ಪಾಪಮಯವಾದ ತನ್ನ ಹಿಂದಿನ ಹೊಡಬಾಳನ್ನು ಸ್ಮರಿಸುತ್ತಲೆ, ಅಂದಿನವರೆಗೂ ತೋರದಿದ್ದ ಅದೊಂದು ಪರಿತಾಪವು ಹುಟ್ಟಿ, ಅವನ ದುಷ್ಟಸ್ವಭಾವದ ತಾಯಿಬೇರನ್ನೂ ಕಿತ್ತು, ಅವನ ಮೈಯನ್ನೆಲ್ಲಾ ಒದರಿಬಿಟ್ಟಿತು. "ಎಲೈ ಮಹಾತ್ಮನಾದ ಪಕ್ಷಿಶ್ರೇಷ್ಠನೇ, ನೀನೇ ನನಗೆ ಪರಮ ಗುರು. ನನ್ನ ಧರ್ಮವನ್ನು ನನಗೆ ನೀನು ತೋರಿಸಿಕೊಟ್ಟೆ! ಕಶ್ಮಲಜಲದ ಪಲ್ವಲವನ್ನು ಗ್ರೀಷ್ಮರ್ತುವಿನ ತೀಕ್ಷ್ಣಗಳಾದ ಸೂರ್ಯಕಿರಣಗಳು ಒಣಗಿಸಿಬಿಡುವಂತೆ ಈ ಪಾಪಿ ಪುಷ್ಟ ಶರೀರಕ್ಕೆ ಸುಖಗಳನ್ನೆಲ್ಲಾ ಹೋಗಲಾಡಿಸಿ, ಪಾಪಮಯವಾದಿದನ್ನು ನಿರಾಹಾರದಿಂದಲೂ ತಪಸ್ಸಿನಿಂದಲೂ ನಿತ್ಯವೂ ಶೋಷಿಸುತ್ತಾ ಹೋಗಿ, ನನ್ನ ಪಾಪ

ಗಳಿಗೆ ಇಂದಿನಿಂದ ಪ್ರಾಯಶ್ಚಿತ್ತಗಳನ್ನು ಮಾಡುವವನಾಗುವೆನು. ಈ ನಿನ್ನ ಸೋದಾಹರಣದ ಉಪದೇಶದಿಂದ ಸುಶಿಕ್ಷಿತನಾಗಿ ಇನ್ನುಮೇಲೆ ಸದ್ಧರ್ಮನಿರತನಾಗಿಯೇ ಇರುವೆನು" ಎಂದುಕೊಂಡು, ಬೇಡನು ತನ್ನ ದೊಣ್ಣೆ, ತನ್ನ ಬಲೆ, ಬೋನು, ಪಂಜರ ಮುಂತಾದುವನ್ನು ಬಿಸುಟು, ಪತಿವಿಹೀನಳಾದ ಹೆಣ್ಣುಪಾರಿವಾಳವನ್ನು ಪಂಜರದಿಂದ ಹೊರಕ್ಕೆ ಬಿಟ್ಟುಬಿಟ್ಟನು. ಆ ಪಾರಿವಾಳವು ಉರಿಯುತ್ತಿದ್ದ ತನ್ನ ಗಂಡನ ಚಿತಿಯನ್ನು ಪ್ರದಕ್ಷಿಣೆ ಮಾಡಿ, ಕಂಬನಿಗರೆಯುತ್ತಾ,—"ಹೆಂಗಸು ತನ್ನ ತಂದೆಯಿಂದಲೇ ಆಗಲಿ ತಾಯಿಯಿಂದಲೇ ಆಗಲಿ ಮಗನಿಂದಲೇ ಆಗಲಿ ಪಡೆಯುವ ಪಾರಿತೋಷಕಗಳು ಪರಿಮಿತಗಳಾಗಿರುವುವು ; ಪತಿಯಿಂದ ಪಡೆಯುವ ಪಾರಿತೋಷಕಗಳಾದರೋ ಅಪರಿಮಿತಗಳಾಗಿವೆ! ಪತಿಯು ಪತ್ನಿಗೆ ತನ್ನದನ್ನೆಲ್ಲಾ ಕೊಡುವುದಲ್ಲದೆ ತನ್ನನ್ನೆಲ್ಲವನ್ನೂ ಕೊಡುವವನಾಗುತ್ತಾನೆ! ನಿನ್ನನೊಡಗೂಡಿ ಈ ವರ್ಷಗಳಲ್ಲೆಲ್ಲಾ ಸುಖಿಸಿದ ನಾನು ನಿನ್ನನಗಲಿ ಓರ್ವಗಳಾಗಿರಲೇ ಆರೆ!" ಎಂದು ಹೇಳಿ ತಾನೂ ಅಗ್ನಿಪ್ರವೇಶ ಮಾಡಿತು.

ದಿವ್ಯ ದೃಷ್ಟಿಯುದೊಂದು ಬೇಡನಿಗೆ ಆಗ ಹುಟ್ಟಲು, ಪಕ್ಷಿಗಳೆರಡೂ ದಿವ್ಯಶರೀರಗಳಲ್ಲಿ ಸ್ವರ್ಗಕ್ಕೇರಿ ಹೋದುದನ್ನು ಕಾಣುವನಾದನು. ಮನೋನಿರ್ಣಯವು ಇದರಿಂದಿನ್ನೂ ನಿರ್ಣೀತವಾಗಲು, ಅರಣ್ಯದಲ್ಲಿಯೇ ವಾಸಮಾಡುತ್ತ, ಪರಮಸಾಧುವಾಗಿದ್ದನು. ಕೊನೆಗೆ, ಗ್ರೀಷ್ಮರ್ತುವಿನ ಪ್ರಚಂಡ ಮಾರುತವದೊಂದರಲ್ಲಿ ಬಣಗಿದ ಕೊಂಬೆಗಳು ಒಂದನ್ನೊಂದು ಉಜ್ಜುವುದರಿಂದ ಹುಟ್ಟಿದ ಕಾಳ್ಗಿಚ್ಚುಗಳು, ಆತನಾಚರಿಸಿದ ವ್ರತಗಳು ಆತನ ಪಾಪಗಳನ್ನು ಸುಟ್ಟುಬಿಟ್ಟಿದ್ದ ತೆರದಲ್ಲಿ ಆತನ ಪಾರ್ಥಿವ ಶರೀರವನ್ನು ಸುಟ್ಟುಬಿಟ್ಟುವು. (ಮಹಾಭಾರತ. ಶಾಂತಿಪರ್ವ. ಅ. ೧೪೩-೧೪೯).

ಅಪರಾಧಗಳನ್ನು ಕ್ಷಮಿಸಲು ಸಿದ್ಧವಾಗಿರುವುದು ಗಂಭೀರಸ್ವಭಾವಕ್ಕೆ ಲಕ್ಷಣ. ಶತಾಪರಾಧಗಳೂಕೂಡ ರಾಮಚಂದ್ರಸ್ವಾಮಿಯ ಮನಸ್ಸಿನಲ್ಲಿ ಗುರುತನ್ನೇ ಇಡುತ್ತಿರಲಿಲ್ಲವೆಂತಲೂ, ಒಂದೇ ಒಂದು ಉಪಕಾರವಾದರೂ ಅದು ಅವನ ಮನಸ್ಸಿನಲ್ಲಿ ಕೆತ್ತಿಟ್ಟಂತೆ ಶಾಶ್ವತವಾಗಿ ನಿಲ್ಲುತ್ತಿತ್ತೆಂತಲೂ ಹೇಳಿದೆ. ವಿದುರನೂ ಕೂಡ ಕಠಿನೋಕ್ತಿಗಳನ್ನೆಲ್ಲಾ ಮರೆತವನಾಗಿ, ಹೇಗೆ ಕ್ಷಮಾಗುಣವನ್ನು ಬೀರಿದನೋ ಕೇಳುವರಾಗಿರಿ ದುರ್ಯೋ

ಧನದ ದುರ್ನಡತೆಯನ್ನು ಹೋಗಲಾಡಿಸುವುದಕ್ಕೆ ಏನುಮಾಡಲಿಯೆಂದು ಧೃತರಾಷ್ಟ್ರನು ವಿದುರನನ್ನು ಕೇಳಲು, ಆತನು ವಿವೇಕದ ನುಡಿಗಳನ್ನು ನುಡಿದು, ದಾಯಾದಿಗಳಾದ ಪಾಂಡವರೊಡನೆ ಕಲಹಕ್ಕೆ ಹೋಗದಿರುವಂತೆ ದುರ್ಯೋಧನನಿಗೆ ಶಾಸಿಸುವವನಾಗಬೇಕೆಂತಲೂ, ದುರ್ಯೋಧನನ ಪಕ್ಷದವರು ಮಾಡಿದ ಸರ್ವಾಪರಾಧಗಳಿಗೂ ದೇಶಭ್ರಷ್ಟರಾಗಿದ್ದ ಆ ರಾಜಕುಮಾರರಿಂದ ಕ್ಷಮೆಯನ್ನು ಬೇಡಬೇಕೆಂತಲೂ ವಾದಿಸುವನಾದನು. ಧೃತರಾಷ್ಟ್ರನಿಗೆ ಮಹಾ ಕೋಪವು ಬಂತು. ಸದ್ಧರ್ಮನಿರತನಾದ ತನ್ನ ತಮ್ಮನನ್ನು ಅವನು ದೂಷಿಸಿ,—"ನೀನು ಪಾಂಡವ ಪಕ್ಷಪಾತಿ, ರಾಜದ್ರೋಹಿ. ಉಂಡಮನೆಗೆಡರನ್ನು ಬಗೆವ ಪರಮನೀಚ, ಮನೆಗೆ ಮಾರಿ ನೆರೆಗುಪಕಾರಿ," ಎಂದು ವಾಚಾನುಗೋಚರವಾಗಿ ಬಯ್ದು, ಸಹವಾಸಯೋಗ್ಯನಲ್ಲವೆಂದು ತನ್ನ ತಮ್ಮನನ್ನು ತೊರೆದು ಹೊರಟುಹೋದನು. ಆಗ ವಿದುರನು ವ್ಯಸನಾಕ್ರಾಂತನಾಗಿ ಪಾಂಡವರನ್ನು ಸೇರಿ, ತನಗಾಡಿದ ಕೋಪದ ಮಾತುಗಳನ್ನು ತಿಳಿಸಿ,—"ನೀವಾದರೂ ವಿನಯವಂತರಾಗಿಯೂ ಮೃದುಭಾಷಿಗಳಾಗಿಯೂ ವಿವೇಕಶಾಲಿಗಳಾಗಿಯೂ ಬಾಳಿರಿ" ಎಂದು ಬುದ್ಧಿವಾದವನ್ನು ಹೇಳುತ್ತಾ, ಅವರಲ್ಲಿಯೇ ನಿಂತನು. ವಿದುರನು ಹೊರಟುಹೋದಮೇಲೆ ಧೃತರಾಷ್ಟ್ರನು ತಾನಾಡಿದ ಕಠಿನೋಕ್ತಿಗಳಿಗೂ ತನ್ನನೃತವರ್ತನಕ್ಕೂ ಪಶ್ಚಾತ್ತಾಪ ಪಟ್ಟವನಾಗಿ, ವಿದುರನನ್ನು ಮರಳಿ ಕರೆಯಿಸಬೇಕೆಂದು,—"ಎಲೈ ಸಂಜಯನೇ, ಹೋಗು ; ಕೋಪದಿಂದ ಹುಚ್ಚನಾಗಿ ನಾನೇ ಓಡಿಸಿದ ನನ್ನ ತಮ್ಮನು ಬದುಕಿರುವನೋ ಇಲ್ಲವೋ ನೋಡು. ನನಗಾದರೋ ಅವನು ಒಂದಪರಾಧವನ್ನೂ ಮಾಡಿಲ್ಲ, ಅವನಿಗಾದರೋ ನಾನು ಮಹಾಪರಾಧವನ್ನು ಮಾಡಿರುತ್ತೇನೆ. ಅವನನ್ನು ಹುಡುಕಿ ಕರೆದು ತರುವನಾಗು ; ನೀನು ವಿವೇಕಿ" ಎಂದು ಕಳುಹಿಸಿದನು. ಸ್ಥಿರಚಿತ್ತನಾಗಿಯೂ ಶಾಂತನಾಗಿಯೂ ಇರುವ ವಿದುರನು ಸ್ಥಿರಚಿತ್ತನಲ್ಲದ ತನ್ನ ಭ್ರಾತೃವಿನ ಅಪರಾಧಗಳನ್ನು ಕ್ಷಮಿಸಿ, ಆತನ ಪ್ರಭುತ್ವಕ್ಕೆ ಸ್ತಂಭಪ್ರಾಯವಾಗಿ ಮರಳಿ ನಿಲ್ಲುವನೋ ಇಲ್ಲವೋ ಎಂದು ಚಿಂತಿಸುತ್ತಾ ಸಂಜಯನು ಹೊರಟನು. ಅರಣ್ಯವನ್ನು ಪ್ರವೇಶಿಸಿ, ಅಲ್ಲಿ ವಿದುರನು ರಾಜವರ್ಗದಿಂದಲೂ ಇತರರಿಂದಲೂ ಸನ್ಮಾನಿತನಾಗಿರುವುದನ್ನು ತಿಳಿದು, ಅವನ ಸನ್ನಿಧಿಗೆ ಹೋಗಿ, ತಾವು

ಮರಳಿ ದಯಮಾಡಿಸಬೇಕೆಂದು ಬೇಡಿದನು. ವಿದುರನು ಒಂದು ನಿಮಿಷವೂ ಅನುಮಾನಿಸದೆ, ಪಾಂಡವರಿಗೆ ಹೋಗಿಬರುವೆನು ಎಂದು ಹೇಳಿ, ತನ್ನ ಜ್ಯೇಷ್ಠಭ್ರಾತೃವಿನ ಸನ್ನಿಧಿಗೆ ಬೇಗನೆ ಹೋದನು. ಆ ಜ್ಯೇಷ್ಠಭ್ರಾತೃವು ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಲು, ವಿದುರನು ಮೃದು ಮಧುರ ವಚನದಿಂದ—"ಎಲೈ ರಾಜನೆ, ಕ್ಷಮಿಸಿರುವೆನು. ನೀನು ನನಗೆ ಅಣ್ಣ, ನನ್ನ ಹಿರಿಯ, ಪರಮಗೌರವಕ್ಕೆ ಅರ್ಹ; ನಿನ್ನ ಮುಖವನ್ನು ನೋಡಲು ಆತುರದಿಂದ ಬಂದಿದೇನೆ. ಪಾಂಡವ ಪಕ್ಷಪಾತಿಯಾಗಿ ನಾನು ಕಾಣಬಹುದು ; ಏಕೆಂದರೆ, ಕಷ್ಟಕ್ಕೆ ಗುರಿಯಾದವರನ್ನು ಕಂಡಾಗ ಮಾನವನ ಹೃದಯವು ಮರುಗುವುದು ; ನ್ಯಾಯವಿಮರ್ಶೆಯಿಂದ ಮರುಗುವುದಕ್ಕಿಂತಲೂ ಹೇರಳವಾಗಿ ಕರುಳಸಂಬಂಧದಿಂದ ಮರುಗುತ್ತದೆ. ಎಲೈ ದೊರೆಯೆ, ಅವರಂತೆಯೇ ನಿನ್ನ ಮಕ್ಕಳೂ ನನಗೆ ಪ್ರೇಮಪಾತ್ರರಾಗಿದಾರೆ; ಆದರೆ ಅವರು ಪಡುವ ಕಷ್ಟವು ನನ್ನ ಮನಸ್ಸನ್ನು ಕರಗಿಸಿತು," ಎಂದು ನುಡಿದನು. ತನಗಾಡಿದ ಕಠಿನೋಕ್ತಿಗಳನ್ನೆಲ್ಲಾ ಸಾಮಾನ್ಯವಚನಗಳಂತೆ ಭಾವಿಸಿದವನಾಗಿ, ಅವುಗಳನ್ನು ಮರೆತು, ಕಿರಿಯ ತಮ್ಮನಾದ ವಿದುರನು ಮಹಾ ಗಂಭೀರಸ್ವಭಾವದಿಂದೊಡಗೂಡಿದವನಾಗಿ ಈ ರೀತಿಯಲ್ಲಿ ಮೃದು ಮಧುರವಚನಗಳನ್ನೇ ಆಡುವನಾದನು. (ಮಹಾಭಾರತ. ವನಪರ್ವ. ಅ. ೯೨).

ಸರಸತೆಯು ಪೂರ್ವಕಾಲದ ಆರ್ಯರ ಬಾಳಿನಲ್ಲಿ ಮಹಾಸದ್ಗುಣವೆನಿಸಿಕೊಂಡಿತ್ತು. ಮಾತಿನಲ್ಲಿಯೂ ಕಾರ್ಯದಲ್ಲಿಯೂ ಅತಿಶಯಗಳಾದ ಮಾನಮರ್ಯಾದೆಗಳನ್ನು ಕಾಣುವರಾಗುತ್ತೇವೆ. ರಾಮಾಯಣದಲ್ಲಿಯೂ ಮಹಾಭಾರತದಲ್ಲಿಯೂ ದುಷ್ಟ ಸಿಷ್ಟ ವೀರರುಗಳೆಲ್ಲಾ ಅತಿಥಿಗಳನ್ನೂ ಮಿತ್ರರುಗಳನ್ನೂ ಶತ್ರುಗಳನ್ನೂ ಕೂಡ ಸರಸವಚನಗಳಿಂದುಪಚರಿಸುವುದನ್ನು ನಾವು ಓದುತ್ತೇವೆ. ರಾಮಚಂದ್ರಸ್ವಾಮಿಯು ಮಾತಿನಲ್ಲಿ ಮಧುರನು, ಮಂದಸ್ಮಿತವದನನಾಗಿಯೇ ತಾನಾಡುವುದನ್ನಾಡುವನು. (ರಾಮಾಯಣ. ಅಯೋಧ್ಯಾಕಾಂಡ. ಅ. ೧). ಸಂಪತ್ತಿಗೆಲ್ಲಾ ಒಡತಿಯಾದ ಲಕ್ಷ್ಮೀದೇವಿಯು, ಮಧುರವಾಕ್ಕಿನಿಂದಲೂ ಮಿತ್ರಭಾವದಿಂದಲೂ ಕ್ಷಮಾಗುಣದಿಂದಲೂ ಪರಿಶೋಭಿಸುತ್ತಿದ್ದ ದಾನವರ ಮಾತನ್ನಾಡಿದಾಗ, ತಾನು ಅವರ ಸದ್ಗುಣಗಳಿಗಾ

ಗಿಯೇ ಅವರಲ್ಲಿ ನೆಲೆಗೊಂಡಿದ್ದಂತೆ ಕಂಠೋಕ್ತವಾಗಿ ಹೇಳುತ್ತಾಳೆ. ಕೋಪಕ್ಕೂ ಕಾಠಿನ್ಯಕ್ಕೂ ಅಸದ್ವರ್ತನೆಗೂ ಅವರು ಆಸ್ಪದವನ್ನು ಕೊಟ್ಟಕೂಡಲೆ, ತನ್ನ ಸಹಚಾರಿಣಿಗಳಾದ ಆಶೆ (hope), ಶ್ರದ್ಧೆ (faith), ಧೃತಿ (intelligence), ಶ್ಯಾಂತಿ (contentment), ವಿಜಿತಿ (victory), ಸನ್ನತಿ (advancement), ಕ್ಷಮೆ (forgiveness) ಎಂಬ ಪರಿವಾರದೇವಿಯರನ್ನು ಜತೆಯಲ್ಲಿಯೇ ಕರೆದುಕೊಂಡು ಲಕ್ಷ್ಮೀದೇವಿಯು ಅವರನ್ನು ಬಿಟ್ಟು ಬರುವಳಾದಳು. (ಮಹಾಭಾರತ. ಶಾಂತಿಪರ್ವ. ಅ. ೨೨೮. ಶ್ಲೋ. ೮೧, ೮೨). ನಾರದ ಮಹರ್ಷಿಗಳು ಮಧುರ ಭಾಷಿಗಳಾಗಿಯೂ ವಿಶಾಲಹೃದಯರಾಗಿಯೂ ಋಜು ಭಾವವುಳ್ಳವರಾಗಿಯೂ ಕ್ರೋಧಲೋಭರಹಿತರಾಗಿಯೂ ಇರುವುದರಿಂದಲೇ ಎಲ್ಲೆಡೆಗಳಲ್ಲಿಯೂ ಭಕ್ತಿಗೌರವಗಳಿಂದ ಸನ್ಮಾನಿಸಲ್ಪಡುವರು. (ಮಹಾಭಾರತ. ಶಾಂತಿಪರ್ವ. ಅ. ೨೩೦). ದುರಾಲೋಚನೆಯಿಂದಲೇ ಆಗಲಿ ಮಾತಿನಿಂದಲೇ ಆಗಲಿ ನೋಟದಿಂದಲೇ ಆಗಲಿ ಇತರರನ್ನು ಧಿಕ್ಕರಿಸಲೂ ಕೂಡದು, ದೂಷಿಸಲೂ ಕೂಡದು ; ಇತರರಿಗೆ ಹಿಂಸೆಯನ್ನುಂಟುಮಾಡಬಾರದು, ಶತ್ರುಭಾವವನ್ನೂ ತೋರಿಸಕೂಡದು; ಅನಮರ್ಯಾದೆಯ ಮಾತುಗಳನ್ನು ಕೇಳಿದಾಗಲೂ ಅವುಗಳನ್ನು ನಾವು ಮನಸ್ಸಿಗೆ ತಂದುಕೊಳ್ಳದಿರಬೇಕು ; ನಮಗೆ ಕೋಪವನ್ನು ಹುಟ್ಟಿಸಬೇಕೆಂದು ಒಬ್ಬನು ಪ್ರಯತ್ನಪಟ್ಟಾಗಲೂ ಕೂಡ ನಾವು ಹಿತ ವಚನಗಳನ್ನೇ ಆಡಬೇಕು ; ನಿಂದಿಸಲ್ಪಟ್ಟಾಗ ಪ್ರತಿಯಾಗಿ ನಾವು ನಿಂದಿಸಬಾರದು ಎಂದು ಭೀಷ್ಮಾಚಾರ್ಯರು ಹೇಳುವರು. (ಮಹಾಭಾರತ. ಶಾಂತಿಪರ್ವ, ಅ. ೨೩೮). ಕರ್ಮ, ಜ್ಞಾನ, ಭಕ್ತಿ ಎಂಬ ಮೂರೂ ಮಾರ್ಗಗಳನ್ನು ಅನುಸರಿಸಿದ್ದ ಪದ್ಮನೆಂಬ ಓರ್ವನಾಗನನ್ನು ನಾರದರು ವರ್ಣಿಸುವರಾಗುತ್ತಾರೆ, ಅವನು ಅತಿಥಿ ಸತ್ಕಾರಪರನಾಗಿಯೂ ಕ್ಷಮಾಗುಣವುಳ್ಳವನಾಗಿಯೂ ಹಿಂಸೆಯನ್ನೆಸಗದವನಾಗಿಯೂ ಇದ್ದನೆಂದು ಹೇಳುತ್ತಾರೆ. ಅವನು ಸತ್ಯಸಂಧನಾಗಿಯೂ ಅಸೂಯೆಯಿಲ್ಲದವನಾಗಿಯೂ ಹಿತವಾದಿಯಾಗಿಯೂ ಸರ್ವ ಭೂತ ಹಿತ ರತನಾಗಿಯೂ ಇದ್ದನು. ಬ್ರಾಹ್ಮಣನೊಬ್ಬನು ಆತನನ್ನು ಕಂಡು ಜ್ಞಾನಸಂಪಾದನೆಯನ್ನು ಮಾಡಬೇಕೆಂದು ಅವನ ಮನೆಗೆ ಹೋದನು, ಆದರೆ ಆ ಕಾಲದಲ್ಲಿ ಆತನು ಮನೆಯಲ್ಲಿರಲಿಲ್ಲ. ಆತನ ಪತ್ನಿಯು

ಆ ಬ್ರಾಹ್ಮಣನನ್ನು ಆದರದಿಂದ ಕಂಡಳು. ಯೋಗಕ್ಷೇಮದ ಮಾತುಗಳನ್ನು ಆಕೆಯು ಸಂಗಡ ಆಡಿದವನಾಗಿ, ಆ ಬ್ರಾಹ್ಮಣನು ನದೀತೀರಕ್ಕೆ ಹೋಗಿ, ಆಕೆಯ ಪತಿಯು ಬರವನ್ನು ನಿರೀಕ್ಷಿಸುತ್ತಿದ್ದನು. ಅಲ್ಲಿ ನಿರೀಕ್ಷಿಸುತ್ತಿರುವಾಗ ಊಟಮಾಡಲಿಲ್ಲ. ಪದ್ಮನ ನಂಟರು ಖಿನ್ನಮನಸ್ಕರಾಗಿ ಆ ಬ್ರಾಹ್ಮಣನೆಡೆಗೆ ಬಂದು—"ಅತಿಥಿ ಸೇವೆಯು ನಮ್ಮ ಕರ್ತವ್ಯ; ಊರಿನಲ್ಲಿರುವ ಆಬಾಲವೃದ್ಧರೂ ಖಿನ್ನರಾಗಿದ್ದಾರೆ ; ಏಕೆಂದರೆ, ನಿನ್ನ ನಿರಾಹಾರವು ಅತಿಥಿಸತ್ಕಾರವನ್ನು ನಾವು ಮರೆತಿರುವೆವೆಂದು ಅರ್ಥ ಕೊಡಬಹುದಾಗಿದೆ," ಎಂದು ವಾದಿಸಿದರು. ನಿಮ್ಮ ಉಪಚಾರೋಕ್ತಿಗಳಿಂದಲೇ ನಾನು ಭೋಜನವನ್ನು ಮಾಡಿದಂತಾಗಿದೆ, ಆದರೆ ನಾಗಶ್ರೇಷ್ಠನು ಹಿಂದುರುಗಿ ಬರುವವರೆಗೂ ನಾನು ಭೋಜನವನ್ನು ಮಾಡಕೂಡದಾಗಿದೆ ; ನೀವು ಕ್ಲೇಶಪಡದೆಯಿರಬೇಕು ಎಂದು ಉಪಚಾರವನ್ನರಿತು ಮಾತನಾಡಿದನು. ಕೂಡಲೇ ನಾಗಶ್ರೇಷ್ಠನೂ ಬಂದನು. ಪತ್ನಿಗೂ ಅವನಿಗೂ ನಡೆದ ಸಂಭಾಷಣೆಯಲ್ಲಿ ಗೃಹಸ್ಥಾಶ್ರಮಿಯ ಕರ್ತವ್ಯಗಳು ಹೊರಪಡುವುವು ; ಸರ್ವರಿಗೂ ಕ್ಷೇಮವನ್ನುಂಟುಮಾಡುವುದೇ ಅವನ ಧರ್ಮ ; ಅಭ್ಯಾಗತರನ್ನು ಅವನು ಸತ್ಕರಿಸಲೇಬೇಕು ; ಗೃಹಸ್ಥಾಶ್ರಮಿಯು ಮೃದುಸ್ವಭಾವವುಳ್ಳವನಾಗಿಯೇ ಇರಬೇಕು ; ಕೋಪವೇ ಆಗಲಿ ಔದ್ಧತ್ಯವೇ ಆಗಲಿ ಅವನಿಗಿರಕೂಡದು ; ಉದಾರಿಯಾಗಿಯೂ ಸತ್ಯವಂತನಾಗಿಯೂ ಇರಬೇಕು. (ಮಹಾಭಾರತ. ಶಾಂತಿಪರ್ವ. ಅ. ೩೫೬-೩೬೧). ಪೂರ್ವದಲ್ಲಿ ಈ ಬಗೆಯಲ್ಲಿ ಪ್ರಜೆಗಳಿಗೆ ಅವರವರ ಕರ್ತವ್ಯಗಳನ್ನು ಕಲಿಸಿಕೊಡುತ್ತಿದ್ದರು.

## ಸ್ಮೃತ್ಯಾದಿ ವಚನಗಳು.

ಪಿತೃಭಿರ್ಭ್ರಾತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ ।
ಪೂಜ್ಯಾಭೂಷಯಿತವ್ಯಾಶ್ಚ ಬಹು ಕಲ್ಯಾಣಮೀಪ್ಸುಭಿಃ ॥
ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।
ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥
ಶೋಚಂತಿ ಜಾಮಯೋ ಯತ್ರ ವಿನಶ್ಯತ್ಯಾಶು ತತ್ಕುಲಮ್ ।
ನ ಶೋಚಂತಿ ತು ಯತ್ರೈತಾಃ ವರ್ಧತೇ ತದ್ಧಿ ಸರ್ವದಾ ॥

ಜಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿಪೂಜಿತಾಃ |
ತಾನಿ ಕೃತ್ಯಾಹತಾನೀವ ವಿನಶ್ಯಂತಿ ಸಮಂತತಃ ||
(ಮನುಸ್ಮೃತಿ. ಅ. ೩. ಶ್ಲೋ. ೫೫-೫೮).

"ತಂದೆಗಳೂ ಭ್ರಾತೃಗಳೂ ಪತಿಗಳೂ ಭಾವಮೈದಂದಿರುಗಳೂ ಬಹುಕಲ್ಯಾಣವನ್ನು ಬಯಸುವವರಾದರೆ, ಹೆಂಗಸರನ್ನು ಪೂಜಿಸಲೂ ಬೇಕು, ಭೂಷಿಸಲೂ ಬೇಕು.

"ಎಲ್ಲಿ ಸ್ತ್ರೀಯರಿಗೆ ಪೂಜೆಯಿರುವುದೋ ಅಲ್ಲಿ ದೇವತೆಗಳು ರಮಿಸುತ್ತಾರೆ; ಎಲ್ಲಿ ಅವರಿಗೆ ಪೂಜೆಯಿಲ್ಲವೋ ಅಲ್ಲಿ ಸರ್ವಕ್ರಿಯೆಗಳೂ ನಿಷ್ಫಲಗಳಾಗುವುವು.

"ಸ್ತ್ರೀ ಬಂಧುಗಳೆಲ್ಲಿ ಶೋಕಿಸುತ್ತಿರುವರೋ ಆ ಕುಲವೇ ನಾಶವಾಗಿ ಹೋಗುವುದು; ಸ್ತ್ರೀ ಬಂಧುಗಳೆಲ್ಲಿ ಶೋಕಿಸುವುದಿಲ್ಲವೋ ಆ ಕುಲವು ಸರ್ವದಾ ವರ್ಧಿಸುತ್ತಲೇ ಇರುವುದು.

"ಎಲ್ಲಿ ಸ್ತ್ರೀಬಂಧುಗಳು ಪೂಜೆಯನ್ನು ಹೊಂದದೆ ಶಪಿಸುವರೋ ಆ ಕುಲವು ಕೃತ್ಯಾದೇವತೆಯಿಂದ ಹತವಾದಂತೆ, ಸಂಪೂರ್ಣವಾಗಿ ಹಾಳಾಗುವುದು."

ಏತಾವಾನೇವ ಪುರುಷೋ ಯಜ್ಜಾಯಾತ್ಮಾ ಪ್ರಜೇತಿ ಹ |
ವಿಪ್ರಾಃ ಪ್ರಾಹುಸ್ತಥಾ ಚೈತದ್ಯೋ ಭರ್ತಾ ಸಾ ಸ್ಮೃತಾಂಗನಾ ||
(ಮನುಸ್ಮೃತಿ. ಅ. ೯. ಶ್ಲೋ. ೪೫).

"ತಾನೂ ತನ್ನ ಹೆಂಡಿತಿ ತನ್ನ ಸಂತಾನ—ಈ ವ್ಯೂಹಕ್ಕೆ ಪುರುಷ ಎಂಬ ಪದವು ಅನ್ವಯಿಸುವುದು. ಗಂಡಹೆಂಡಿರಿಬ್ಬರೂ ಒಬ್ಬರೇಯೆಂತಲೂ ಬ್ರಾಹ್ಮಣರುಸುರುವರು."

ಪ್ರಜನಾರ್ಥಂ ಸ್ತ್ರಿಯಸ್ಸೃಷ್ಟಾಃ ಸಂತಾನಾರ್ಥಂಚ ಮಾನವಾಃ |
ತಸ್ಮಾತ್ಸಾಧಾರಣೋ ಧರ್ಮಃ ಶ್ರುತೌ ಪತ್ನ್ಯಾ ಸಹೋದಿತಃ ||
ಅನ್ಯೋನ್ಯಸ್ಯಾ ವ್ಯಭೀಚಾರೋ ಭವೇದಾಮರಣಾಂತಿಕಃ |
ಏಷ ಧರ್ಮಸ್ಸಮಾಸೇನ ಜ್ಞೇಯಃ ಸ್ತ್ರೀಪುಂಸಯೋಃ ಪರಃ ||
ತಥಾ ನಿತ್ಯಂ ಯತೇಯಾತಾಂ ಸ್ತ್ರೀಪುಂಸೌ ತು ಕೃತಕ್ರಿಯೌ |
ಯಥಾ ನಾತಿ ಚರೇತಾಂ ತೌ ವಿಯುಕ್ತಾವಿತರೇತರಮ್ ||
(ಮನುಸ್ಮೃತಿ. ಅ. ೯. ಶ್ಲೋ. ೯೬, ೧೦೧, ೧೦೨).

"ತಾಯಿಯರಾಗಲೆಂದು ಹೆಂಗಸರು, ತಂದೆಗಳಾಗಲೆಂದು ಗಂಡಸರು ಸೃಷ್ಟಿಸಲ್ಪಟ್ಟರು. ಅದುಕಾರಣದಿಂದಲೇ ಧರ್ಮಕ್ರಿಯೆಗಳನ್ನು ಪತಿಪತ್ನಿಯರು ಸೇರಿ ಮಾಡಬೇಕೆಂದು ವಿಧಾಯಕವಾಗಿದೆ.

"ಬದುಕಿರುವವರೆಗೂ ಪತಿಪತ್ನಿಯರಿಬ್ಬರೂ ಅವ್ಯಭಿಚಾರಿಗಳಾಗಿಯೇ ಇರಬೇಕು. ಸ್ತ್ರೀಪುರುಷರಿಗಿದೇ ಪರಮಧರ್ಮವೆಂದು ಹೇಳಬಹುದಾಗಿದೆ.

"ವಿವಾಹದಿಂದೊಡಗೂಡಿದ ಸ್ತ್ರೀಪುರುಷರಿಬ್ಬರೂ ಒಬ್ಬರನ್ನೊಬ್ಬರು ಅಗಲದೆಯೂ ವ್ಯಭಿಚಾರಿಗಳಾಗದೆಯೂ ಇರುವುದಕ್ಕೆ ಸರ್ವದಾ ಪ್ರಯತ್ನಿಸಬೇಕು."

ತೃಣಾನಿ ಭೂಮಿರುದಕಂ ವಾಕ್ಚತುರ್ಥೀ ಚ ಸೂನೃತಾ |
ಏತಾನ್ಯಪಿ ಸತಾಂ ಗೇಹೇ ನೋಚ್ಛಿದ್ಯಂತೇ ಕದಾಚನ ||
ಅಪ್ರಣೋದ್ಯೋತಿಥಿಃ ಸಾಯಂಸೂರ್ಯೋಢೋ ಗೃಹಮೇಧಿನಾ |
ಕಾಲೇ ಪ್ರಾಪ್ತಸ್ತ್ವಕಾಲೇವಾ ನಾಸ್ಯಾನಶ್ನನ್ ಗೃಹೇ ವಸೇತ್ ||
ನ ವೈ ಸ್ವಯಂ ತದಶ್ನೀಯಾದತಿಥಿಂ ಯನ್ನ ಭೋಜಯೇತ್ |
ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಚಾತಿಥಿಭೋಜನಮ್ ||

(ಮನುಸ್ಮೃತಿ. ಅ. ೩. ಶ್ಲೋ. ೧೦೧, ೧೦೫, ೧೦೬).

"ಹುಲ್ಲು, ನೆಲ, ನೀರು, ಮತ್ತು ನಾಲ್ಕನೆಯದಾದ ಸೂನೃತವಚನ—ಸಜ್ಜನರ ಗೃಹಗಳಲ್ಲಿ ಇವು ಇಲ್ಲದೆಯಿರುವುದಿಲ್ಲ.

"ಸಾಯಂಕಾಲದಲ್ಲಿ ಸೂರ್ಯನಿಂದ ಕಳುಹಿಸಲ್ಪಟ್ಟವನಾಗಿ ಬಂದ ಅತಿಥಿಯನ್ನು ಗೃಹಸ್ಥನೆನಿಸಿಕೊಂಡವನು ಹೊರಕ್ಕೆ ಹೊರಡಿಸಬಾರದು. ಸಕಾಲದಲ್ಲಿಯೇ ಬರಲಿ ಅಕಾಲದಲ್ಲಿಯೇ ಬರಲಿ ಅವನು ಮನೆಯಲ್ಲಿ ಊಟವಿಲ್ಲದೆ ಇರಕೂಡದು.

"ಅತಿಥಿಗೆ ನೀಡದೆಯಿದ್ದ ಅನ್ನವನ್ನು ಗೃಹಸ್ಥನು ತಿನ್ನದಿರಲಿ; ಅತಿಥಿಸತ್ಕಾರವು ಧನವನ್ನೂ ಯಶಸ್ಸನ್ನೂ ಆಯುಷ್ಯವನ್ನೂ ಸರ್ವಸುಖವನ್ನೂ ಹೊಂದಿಸಿ ಕೊಡುವುದು."

ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನಬ್ರೂಯಾತ್ಸತ್ಯಮಪ್ರಿಯಮ್ |
ಪ್ರಿಯಂ ಚ ನಾನೃತಂ ಬ್ರೂಯಾದೇಷಧರ್ಮಸ್ಸನಾತನಃ ||

(ಮನುಸ್ಮೃತಿ. ಅ. ೪. ಶ್ಲೋ. ೧೩೮).

"ಸತ್ಯವನ್ನು ನುಡಿಯುವನಾಗಲಿ, ಪ್ರಿಯವನ್ನು ನುಡಿಯುವನಾಗಲಿ, ಅಪ್ರಿಯವಾದ ಸತ್ಯವನ್ನು ನುಡಿಯದಿರುವನಾಗಲಿ, ಪ್ರಿಯವಾದ ಅನೃತವನ್ನು ನುಡಿಯದಿರುವನಾಗಲಿ; ಇದು ಸನಾತನಧರ್ಮ."

ಯಸ್ಯ ವಾಙ್ಮನಸೀ ಶುದ್ಧೇ ಸಮ್ಯಗ್ಗುಪ್ತೇ ಚ ಸರ್ವದಾ |
ಸವೈ ಸರ್ವಮವಾಪ್ನೋತಿ ವೇದಾಂತೋಪಗತಂ ಫಲಮ್ ||
ನಾರುಂತುದಃಸ್ಯಾದಾರ್ತೋಽಪಿ ನ ಪರದ್ರೋಹಕರ್ಮಧೀಃ |
ಯಯಾಸ್ಯೋದ್ವಿಜತೇ ವಾಚಾ ನಾಲೋಕ್ಯಾಂ ತಾಮುದೀರಯೇತ್ ||

(ಮನುಸ್ಮೃತಿ, ಅ. ೨. ಶ್ಲೋ. ೧೬೦,೧೬೧)

"ಯಾವನ ಮಾತೂ ಮನಸ್ಸೂ ಶುದ್ಧವಾಗಿಯೂ ಸರ್ವದಾ ಗುಪ್ತವಾಗಿಯೂ ಇರುವುವೋ, ಅಂತವನು ವೇದಾಂತೋಪಗತಫಲವನ್ನೆಲ್ಲಾ ಪಡೆಯುವನಾಗುತ್ತಾನೆ.

"ಆರ್ತನಾಗಿದ್ದಾಗಲೂ ಇತರರ ಮನಸ್ಸನ್ನು ಕೊಯ್ಯದಿರಲಿ, ಪರದ್ರೋಹಕರ್ಮಗಳನ್ನು ಚಿಂತಿಸದಿರಲಿ; ಮನಸ್ಸನ್ನು ಕದಡುವ ಕ್ರೂರವಚನವನ್ನಾಡದಿರಲಿ."

ನಾಸ್ತಿಕ್ಯಂ ವೇದನಿಂದಾಂ ಚ ದೇವತಾನಾಂ ಚ ಕುತ್ಸನಮ್ |
ದ್ವೇಷಂ ಸ್ತಂಭಂಚ ಮಾನಂಚ ಕ್ರೋಧಂತೈಕ್ಷ್ಣ್ಯಂಚ ವರ್ಜಯೇತ್ ||

(ಮನುಸ್ಮೃತಿ. ಅ. ೨. ಶ್ಲೋ. ೧೬೩).

"ನಾಸ್ತಿಕ್ಯವನ್ನೂ, ವೇದನಿಂದೆಯನ್ನೂ, ದೇವತಾಕುತ್ಸನವನ್ನೂ, ದ್ವೇಷವನ್ನೂ, ಸ್ತಂಭವನ್ನೂ (obstinacy), ದುರಭಿಮಾನವನ್ನೂ, ಕ್ರೋಧವನ್ನೂ, ತೈಕ್ಷ್ಣ್ಯವನ್ನೂ ವರ್ಜಿಸಲಿ."

ನಾರುಂತುದಸ್ಸ್ಯಾನ್ನ ನೃಶಂಸವಾದೀ
ನ ಹೀನತಃ ಪರಮಭ್ಯಾದದೀತ |
ಯಯಾಸ್ಯ ವಾಚಾ ಪರಉದ್ವಿಜೇತ
ನ ತಾಂ ವದೇದುಷತೀಂ ಪಾಪಲೋಕ್ಯಾಮ್ ||
ಅರುಂತುದಂ ಪರುಷಂ ತೀಕ್ಷ್ಣವಾಚಂ
ವಾಕ್ಕಂಟಕೈರ್ವಿತುದಂತಂ ಮನುಷ್ಯಾನ್ |
ವಿದ್ಯಾದಲಕ್ಷ್ಮೀಕತಮಂ ಜನಾನಾಂ

ಮುಖೇ ನಿಬದ್ಧಾಂ ನಿಙ್ಕೃತಿಂ ವಹಂತಮ್ ||
ವಾಕ್ಸಾಯಕಾವದನಾನ್ನಿಷ್ಪತಂತಿ
ಯೈರಾಹತಶ್ಯೋಚತಿ ರಾತ್ರ್ಯಹಾನಿ |
ಪರಸ್ಯ ನಾಮರ್ಮಸು ತೇ ಪತಂತಿ
ತಾನ್ಪಂಡಿತೋ ನಾವಸೃಜೇತ್ಪರೇಷು ||
ನಹೀದೃಶಂ ಸಂವನನಂ ತ್ರಿಷುಲೋಕೇಷು ವಿದ್ಯತೇ |
ದಯಾ ಮೈತ್ರೀಚ ಭೂತೇಷು ದಾನಂಚ ಮಧುರಾ ಚ ವಾಕ್ ||
ತಸ್ಮಾತ್ಸಾಂತ್ವಂ ಸದಾ ವಾಚ್ಯಂ ನವಾಚ್ಯಂ ಪರುಷಂ ಕ್ವಚಿತ್ |
ಪೂಜ್ಯಾನ್ ಸಂಪೂಜಯೇದ್ದದ್ಯಾತ್ ನಚಯಾಚೇತ್ಕದಾಚನ ||
(ಮಹಾಭಾರತ. ಆದಿಪರ್ವ. ಅ. ೮೭. ಶ್ಲೋ. ೮,೯, ೧೧,೧೦,೧೩).

"ಕ್ರೂರವಾಕ್ಕನ್ನು ಯಾವನೂ ನುಡಿಯದಿರಲಿ, ಅವುಗಳಿಂದ ಇತರರ ಅಂತರಂಗವನ್ನು ಗಾಯುಮಾಡದಿರಲಿ; ಶತ್ರುವನ್ನು ಅನ್ಯಾಯಮಾರ್ಗದಲ್ಲಿ ಗೆಲ್ಲುವುದಕ್ಕೆ ಹೋಗದಿರಲಿ; ಇತರರ ಮನಸ್ಸನ್ನು ಕದಡುವ ಮತ್ತು ಪಾಪಲೋಕಕ್ಕೆ ಸಂಬಂಧಪಡುವ ಅಶುಭವಾರ್ತೆಯನ್ನು ಯಾವನೂ ನುಡಿಯದಿರಲಿ.

"ಇತರರ ಅಂತರಂಗವನ್ನು ನೋಯಿಸುವವನಾಗಿಯೂ ಪರುಷನಾಗಿಯೂ, ತೀಕ್ಷ್ಣಗಳಾದ ವಚನಗಳನ್ನುಳ್ಳವನಾಗಿಯೂ, ವಾಕ್ಕಂಟಕಗಳಿಂದ ಜನರನ್ನು ಸರ್ವದಾ ಚುಚ್ಚುವನಾಗಿಯೂ ಇರುವಾತನು ಜನರಿಗೆ ಅಶ್ರೇಯಸ್ಸನ್ನುಂಟುಮಾಡುವವನಾಗುತ್ತಾನೆ. ತನ್ನ ಬಾಯಿಗೆ ಕಟ್ಟಿರುವದೊಂದು ದುಷ್ಟಪಿಶಾಚಿಯನ್ನೂ ಹೊತ್ತಿರುವವನಾಗುತ್ತಾನೆ.

"ವದನದಿಂದ ಹೊರಡುವ ಈ ಕೆಟ್ಟಮಾತುಗಳು ನಿಜವಾಗಿಯೂ ಸಾಯಕಗಳಾಗಿವೆ; ಇವುಗಳಿಂದ ಗಾಯುವನ್ನು ಪಡೆದವನು ಹಗಲೂ ಇರುಳೂ ವ್ಯಥೆಪಡುವನಾಗುತ್ತಾನೆ; ಏಕೆಂದರೆ ಇವು ಅವನ ಮರ್ಮವನ್ನು ಭೇದಿಸುತ್ತವೆ! ಪಂಡಿತನಾದವನು ಇಂತಹ ಬಾಣಗಳನ್ನು ಇತರರಮೇಲೆ ಬಿಡದಿರುವನು.

"ದಯೆ, ಭೂತಮೈತ್ರಿ, ದಾನ, ಮಧುರವಚನ—ಇವುಗಳಂತಹ ವಶಕ್ರಿಯೆಗಳು ಮೂರುಲೋಕದಲ್ಲಿಯೂ ಇಲ್ಲ.

" ಆದುದರಿಂದ ಸರ್ವದಾ ಮೃದುವಾಗಿಯೇ ಮಾತನಾಡು, ಪರುಷ ವಾಗಿ ಮಾತನಾಡಲೇ ಬೇಡ ; ಪೂಜ್ಯರನ್ನು ಚೆನ್ನಾಗಿ ಪೂಜಿಸು. ಕೊಡು, ತೆಗೆದುಕೊಳ್ಳಬೇಡ. "

ಕ್ರುದ್ಧಃ ಪಾಪಂ ನರಃ ಕುರ್ಯಾತ್ ಕ್ರುದ್ಧೋ ಹನ್ಯಾದ್ಗುರೂನಪಿ |
ಕ್ರುದ್ಧಃ ಪರುಷಯಾ ವಾಚಾ ಶ್ರೇಯಸೋಽಪ್ಯವಮನ್ಯತೇ ||
ಆತ್ಮಾನಮಪಿ ಚ ಕ್ರುದ್ಧಃ ಪ್ರೇಷಯೇದ್ಯಮಸಾದನಂ |
ಏತಾನ್ ದೋಷಾನ್ ಪ್ರಪಶ್ಯದ್ಭಿರ್ಜಿತಃ ಕ್ರೋಧೋ ಮನೀಷಿಭಿಃ||

(ಮಹಾಭಾರತ. ವನಪರ್ವ. ಅ. ೨೯. ಶ್ಲೋ. ೪,೬).

" ಕ್ರೋಧಕ್ಕೆ ದಾರಿಯನ್ನು ಕೊಟ್ಟಿರುವ ಮಾನವನು ಯಾವ ಪಾಪಕೃತ್ಯವನ್ನಾದರೂ ಮಾಡಬಹುದು; ತನ್ನ ಹಿರಿಯರನ್ನೂ ಕೊಲ್ಲಬ ಹುದು, ಪೂಜಾರ್ಹರಾದವರನ್ನು ಕಠಿನ ವಾಕ್ಕಿನಿಂದ ಅವಮರ್ಯಾದೆ ಮಾಡ ಲೂಬಹುದು.

" ಯಮಸದನಕ್ಕೆ ಕಳುಹಿಸಿಕೊಳ್ಳುವನೂ ಆಗಬಹುದು. ಕ್ರೋ ಧದಲ್ಲಿ ಈ ಮಹಾದೋಷಗಳನ್ನೆಲ್ಲಾ ಕಂಡವರಾಗಿ, ಮಹನೀಯರು ಅದ ನ್ನು ಜಯಿಸಿರುತ್ತಾರೆ. "

ಕಿಂಸ್ವಿದೇಕಪದಂ ಬ್ರಹ್ಮನ್ ಪುರುಷಸ್ಸಮ್ಯಗಾಚರನ್ |
ಪ್ರಮಾಣಂ ಸರ್ವಭೂತಾನಾಂ ಯಶಶ್ಚೈವಾಪ್ನುಯಾನ್ಮಹತ್ ||
ಸಾಂತ್ವಮೇಕಪದಂ ಶಕ್ರ ಪುರುಷಸ್ಸಮ್ಯಗಾಚರನ್ |
ಪ್ರಮಾಣಂ ಸರ್ವಭೂತಾನಾಂ ಯಶಶ್ಚೈವಾಪ್ನುಯಾನ್ಮಹತ್ ||
ಏತದೇಕಪದಂ ಶಕ್ರ ಸರ್ವಲೋಕಸುಖಾವಹಮ್ |
ಆಚರನ್ ಸರ್ವಭೂತೇಷು ಪ್ರಿಯೋಭವತಿಸರ್ವದಾ ||

(ಮಹಾಭಾರತ, ಶಾಂತಿಪರ್ವ. ಅ. ೮೪. ಶ್ಲೋ. ೨,೩,೪),

" ಎಲೈ ಬ್ರಾಹ್ಮಣನೇ, ಮನುಷ್ಯನು ಯಾವ ಒಂದು ವಸ್ತುವನ್ನು ಸದಾಚರಣೆಗೆ ತರುವುದರಿಂದ ಸರ್ವಭೂತ ಪ್ರಮಾಣನಾಗಿಯೂ ಮಹಾ ಯಶಸ್ವಿಯಾಗಿಯೂ ಆಗುವನು ?

" ಸಾಂತ್ವ ಎಂಬುದೇ ಆವೊಂದು ವಸ್ತು. ಅದನ್ನು ಮಾನವನು ಸದಾಚರಣೆಗೆ ತರುವುದರಿಂದ ಸರ್ವಭೂತಪ್ರಮಾಣನಾಗಿಯೂ ಮಹಾಯ ಶಸ್ವಿಯಾಗಿಯೂ ಆಗುವನೈಯ್ಯಾ, ಶಕ್ರ.

"ಈ ಒಂದು ವಸ್ತುವು ಸಕಲ ಲೋಕಗಳಿಗೂ ಸುಖವನ್ನು ತರುವುದು; ಸಕಲ ಭೂತಗಳಲ್ಲಿಯೂ ಯಾವನು ಇದನ್ನು ಆಚರಣೆಗೆ ತರುವನೋ, ಆತನು ಸದಾ ಎಲ್ಲರಿಗೂ ಪ್ರಿಯನಾಗಿಯೇ ಇರುತ್ತಾನೆ."

ಯಸ್ತು ಕ್ರೋಧಂ ಸಮುತ್ಪನ್ನಂ ಪ್ರಜ್ಞಯಾ ಪ್ರತಿಬಾಧತೇ |
ತೇಜಸ್ವಿನಂ ತಂ ವಿದ್ವಾಂಸೋ ಮನ್ಯಂತೇ ತತ್ವದರ್ಶಿನಃ ||

(ಮಹಾಭಾರತ. ವನಪರ್ವ. ಅ. ೨೯. ಶ್ಲೋ. ೧೭).

"ತನ್ನಲ್ಲಿ ಸಮುತ್ಪನ್ನವಾದ ಕ್ರೋಧವನ್ನು ಯಾವನು ಪ್ರಜ್ಞೆಯಿಂದ ಪ್ರತಿಬಾಧಿಸುವನೋ, ಅವನನ್ನು ತತ್ವದರ್ಶಿಗಳು ನಿಜತೇಜಸ್ವಿಯೆಂದು ಕರೆದಿರುವರು."



ಇದು ಸನಾತನ ಧರ್ಮದೀಪಿಕೆಯಲ್ಲಿ ನೀತಿಪ್ರಕಾಶಿಕೆಯೆಂಬ ತೃತೀಯಭಾಗದಲ್ಲಿ ಸಮಾನಸಂಗ ಧರ್ಮವಿವರಣೆಯೆಂಬ ನವಮಾಧ್ಯಾಯ.



# ತೃತೀಯ ಭಾಗ.

## ದಶಮಾಧ್ಯಾಯ.

### ಲಘುಸಂಗ ಧರ್ಮವಿವರಣೆ.



ಲೌಕಿಕ ವ್ಯವಹಾರಗಳಿಗೆ ನಾವು ಹೋದಹಾಗೆಲ್ಲಾ, ಬಗೆಬಗೆಯ ಜನರ ಸಂಗವು ನಮಗಾಗುವುದು. ಕೆಲವರು ನಮಗೆ ಕಿರಿಯರಾಗಿರುತ್ತಾರೆ. ಮಕ್ಕಳ ಅಂತಸ್ತಿನಲ್ಲಿ ಕೆಲವರಿರಬಹುದು ; ಮೊಮ್ಮಕ್ಕಳ ಅಂತಸ್ತಿನಲ್ಲಿಯೂ ಕೆಲವರಿರಬಹುದು ; ವಿದ್ಯದಲ್ಲಿ ನಮಗೆ ಕಿರಿಯರಾಗಿರಬಹುದು ; ಸಂಪತ್ತಿನಲ್ಲಿ ಕಿರಿಯರಾಗಿರಬಹುದು; ಲೌಕಿಕಪದವಿಯಲ್ಲಿ ನಮಗೆ ಕಿರಿಯರಾಗಿರಬಹುದು. ಸಾಮಾನ್ಯವಾಗಿಯೋ, ಕೆಲವಂಶಗಳಲ್ಲಿ ಮಾತ್ರವೋ ನಮಗೆ ಕಿರಿಯರಾಗಿರುವವರ ಸಂಗಡ ನಾವು ಸಂಗವನ್ನು ಬಳೆಯಿಸಬೇಕಾಗುವುದು. ಆದುದರಿಂದ ಇವರುಗಳ ಸಂಗವು ಸಮಂಜಸವಾಗಿರುವುದಕ್ಕೆ ನಾವು ಯಾವಯಾವ ಧರ್ಮಗಳನ್ನು ಕೃಷಿಮಾಡಿಕೊಳ್ಳಬೇಕೋ, ಯಾವಯಾವ ಅಧರ್ಮಗಳನ್ನು ಬಿಡಬೇಕೋ, ಇವುಗಳನ್ನೆಲ್ಲಾ ತಿಳಿದುಕೊಳ್ಳುವುದು ಅವಶ್ಯಕವಾಗಿರುತ್ತದೆ.

ಈ ಸಂಗಗಳಲ್ಲಿ ಮೊದಲನೆಯದಾಗಿರುವುದು ಕಿರಿಯರಸಂಗ. ತಾಯಿತಂದೆಗಳಿಗೂ ಮಕ್ಕಳಿಗೂ-ಇರುವ ಸಂಗದಲ್ಲಿ ಹೊರಪಡುವ ಧರ್ಮಗಳು ಉದಾಹರಣೆಗಳಾಗಿರುವುವು. ಕರುಣೆ, ದಯೆ, ಸಾಂತ್ವ, ಕೃಪೆ (tenderness, compassion, gentleness, kindness,)——ಈ ಗುಣಗಳು ಪುತ್ರವತ್ಸಲರಾದ ತಾಯಿತಂದೆಗಳಲ್ಲಿ ಹೇಗೆ ಕಂಗೊಳಿಸುವುವು ! ಕುಟುಂಬದ ಸುಖವನ್ನು ಎಷ್ಟು ಹೆಚ್ಚಿಸುವುವು ! ತಾಯಿತಂದೆಗಳು ತಮ್ಮ ಮಕ್ಕಳನ್ನು ವಿಶ್ವಾಸಿಸುವರು, ಅವರ ದುಃಖಗಳನ್ನು ತಾವೂ ಅನುಭವಿಸುವರು.

ಅವರ ಸಂತೋಷಗಳಲ್ಲಿ ತಾವೂ ಸಂತೋಷಪಡುವರು—ಎಲ್ಲದರಲ್ಲಿಯೂ ಅವರೊಡನೆ ಸಮಭಾಗಿಗಳಾಗಿರುತ್ತಾರೆ.

ಸುರಭಿಯು ತನ್ನ ಮಕ್ಕಳಿಗಾಗಿ ಪಟ್ಟ ಪರಿತಾಪದ ಪೂರ್ವಕಥೆಯಲ್ಲಿ ಈ ಸಂಗತಿಯು ಬಹುಚೆನ್ನಾಗಿ ತೋರಬರುತ್ತದೆ. ಪೂರ್ವಕಾಲವೊಂದರಲ್ಲಿ ಗೋವುಗಳ ಮಾತೆಯಾದ ಮತ್ತು ದೇವಲೋಕವಾಸಿನಿಯಾದ ಸುರಭಿಯು ಒಂದಾನೊಂದು ಕಾಲದಲ್ಲಿ ದೇವೇಂದ್ರನ ಸನ್ನಿಧಿಯಲ್ಲಿ ಕಣ್ಣೀರನ್ನು ಸುರಿಸುತ್ತಾ, ನಿಂತುಕೊಂಡಳು. ಆತುರದಿಂದ ದೇವೇಂದ್ರನು—"ಮಂಗಳಮೂರ್ತಿಯಾದ ಗೋಮಾತೆಯೇ, ಏಕೆ ಕಂಬನಿಗರೆಯುತ್ತೀಯೆ? ಅಮಂಗಳವಾದುದೇನಾದರೂ ಆಯಿತೇನು ?" ಎಂದು ಕೇಳಲು, ಸುರಭಿಯು—"ಈ ನನ್ನ ಶರೀರಕ್ಕೇನೂ ಆಗಿಲ್ಲ ; ನನ್ನ ಮಕ್ಕಳ ದುರವಸ್ಥೆಗಾಗಿ ಪರಿತಪಿಸುತ್ತಿದ್ದೇನೆ. ತ್ರಿಲೋಕಾಧಿಪತಿಯೇ ನೋಡು, ನೇಗಿಲನ್ನು ಪ್ರಯಾಸಪಟ್ಟೆಳೆಯುತ್ತಾ ದೌರ್ಬಲ್ಯದಿಂದ ಬಿದ್ದು ಬಿದ್ದೇಳುವ ನನ್ನ ಮಗನನ್ನು ಆ ಬೇಸಾಯಗಾರನು ದಡಿಯಿಂದ ಬಡಿಯುತ್ತಿರುವನು. ಅಜತೆಯಲ್ಲಿ ಬಲಶಾಲಿಯಾದ ಹೋರಿಯು ತನ್ನ ಹೊರೆಯನ್ನು ಸುಲಭವಾಗಿ ಹೊರುತ್ತಿದೆ ; ಬಲಹೀನವಾದುದಾದರೋ ಬಹು ಕಷ್ಟಪಡುತ್ತಿದೆ. ಅದರ ದುರ್ದಶೆಗಾಗಿ ದುಗುಡದಿಂದ ಕಂಬನಿಗರೆಯುತ್ತಾ ಪರಿತಪಿಸುತ್ತಿದ್ದೇನೆ" ಎಂದು ಹೇಳಿತು. ಇಂದ್ರನು ವಿಸ್ಮಯಯುಕ್ತನಾಗಿ—"ಸರಿ, ನಿನ್ನ ತನುಜರಲ್ಲಿ ಸಾಸಿರಾರುಮಂದಿ ಈ ರೀತಿಯಲ್ಲಿ ಪ್ರತಿದಿನದಲ್ಲಿಯೂ ಪೆಟ್ಟು ತಿನ್ನುತ್ತಿದ್ದಾರಲ್ಲವೆ ?" ಎನ್ನಲು, ಸುರಭಿಯು—"ನಿಜ ; ಈ ರೀತಿಯಲ್ಲಿ ದುಃಖಿಸುವ ಸಾಸಿರಾರು ಮಂದಿ ಮಕ್ಕಳಲ್ಲಿ ಪಡಿಯೊರ್ವನಿಗೂ, ಓ ಇಂದ್ರನೇ, ನಾನು ಗೋಳಾಡುತ್ತಲೇ ಇದ್ದೇನೆಯಾದರೂ ಬಲವಿಲ್ಲದ ಕಂದಗಳಿಗಾಗಿ ಹೆಚ್ಚಾಗಿ ಶೋಕಿಸುತ್ತಿರುವೆನು" ಎಂದಳು. ನರಳುವ ಮಕ್ಕಳಿಗಾಗಿ ತಾಯಿಯು ಪಡುವ ಪರಿತಾಪವನ್ನು ಇಂದ್ರನು ಆಗ ತಿಳಿದವನಾಗಿ, ಭೂಲೋಕದ ಬೈಲುನೆಲಗಳಿಗೆ ಮಳೆಯನ್ನು ಸುರಿಸಿ, ತಿರ್ಯಗ್ಜಂತುಗಳಿಗೂ ಮನುಷ್ಯನಿಗೂ ಸಮನಾಗಿ ಹಿತವನ್ನುಂಟುಮಾಡುವನಾದನು.

ದಶರಥಮಹಾರಾಜನು ರಾಮಚಂದ್ರನಲ್ಲಿ, ದೋಷರಹಿತನಾದ ತನ್ನ ಪುತ್ರನಲ್ಲಿ, ತನಗಿದ್ದ ಪ್ರೇಮವನ್ನು, ಅವನಲ್ಲಿದ್ದ ದಿವ್ಯಗುಣಗಳಿಗಾಗಿ ತಾನು

ಸಂತೋಷಪಡುವಕಾಲದಲ್ಲಿಯೂ, ಅವನು ರಾಜ್ಯಭ್ರಷ್ಟನಾಗಿ ಹೊರಟು ಹೋದಾಗ ತಾನು ದುಃಖಪಡುವಕಾಲದಲ್ಲಿಯೂ, ಬಹು ಮೃದುವಾದ ರೀತಿಯಲ್ಲಿ ತೋರಿಸುವವನಾಗುತ್ತಾನೆ. ತನ್ನ ಮಗನಿಗೆ ಪಟ್ಟಾಭಿಷೇಕವನ್ನು ಮಾಡಬೇಕೆಂದು, ತನ್ನ ಮಗನನ್ನು ಸಿಂಹಾಸನದಮೇಲೆ ಕುಳ್ಳಿರಿಸಬೇಕೆಂದು ತನ್ನ ಸಾಮಂತರಾಜರಿಗೂ ಅಧಿಕಾರಿಗಳಿಗೂ ತಿಳಿಸುವಾಗ ಆತನು ನುಡಿದ ನುಡಿಗಳನ್ನು ಲಾಲಿಸಿರಿ. ಪ್ರತಿವಾಕ್ಯದಲ್ಲಿಯೂ ರಾಮನಲ್ಲಿ ಅವನಿಗಿದ್ದ ಪ್ರೇಮವೂ ಗೌರವವೂ ತುಂಬಿ ತುಳುಕುವುದು. ಕೈಕೆಯಿ ತನ್ನ ವರಗಳನ್ನು ಬೇಡಿ, ರಾಮಚಂದ್ರನು ಅರಣ್ಯವಾಸಕ್ಕೆ ತೆರಳಬೇಕೆಂದು ಹೇಳಿದಾಗ,—“ ಲೋಕವಾದರೂ ಸೂರ್ಯನಿಲ್ಲದೆ ಬದುಕೀತು, ರಾಮಚಂದ್ರನಿಲ್ಲದೆ ನಾನು ಬದುಕಲಾರೆನು ” ಎಂದು ಹೇಳುತ್ತಾ ದಶರಥನು ಅವಳ ಕಾಲಮೇಲೆ ಬಿದ್ದುದನ್ನು ನೋಡಿರಿ! “ ನಿನ್ನ ಪಾದದಲ್ಲಿ ನನ್ನ ಶಿರಸ್ಸನ್ನು ಇಡುತ್ತೇನೆ ; ಕರುಣಿಸು ; ವೃದ್ಧನಾಗಿ ಮರಣದ ಬಳಿಯಲ್ಲಿ ನಿಂತಿರುವ ನನ್ನ ಮೇಲೆ ಕೃಪೆಮಾಡು ” ಎಂದು ಬೇಡಿದನು. ಇದೆಲ್ಲವೂ ನಿಜವೇ ಆಯಿತು. ಶ್ರೀರಾಮನು ತನ್ನ ತಂದೆಯಿಂದ ಬಿಡಿಸಿಕೊಂಡು ಹೊರಟು ಹೋದಾಗ, ಆ ತಂದೆಯು ಎದೆಯೊಡೆದವನಾಗಿ ಮನೆಗೆ ಹೋಗಿ, ದೇಶಭ್ರಷ್ಟನಾಗಿ ತೆರಳಿದ ತನ್ನ ಮಗನ ವ್ಯಸನದಲ್ಲಿಯೇ ಸತ್ತನು. ರಾಮಚಂದ್ರನು ತನ್ನ ತಾಯಿಯಾದ ಕೌಸಲ್ಯಾದೇವಿಗೆ ತನ್ನ ಅರಣ್ಯವಾಸದ ಸುದ್ದಿಯನ್ನು ಹೊತ್ತುಕೊಂಡುಹೋಗಿ ತಿಳಿಸಿದಾಗ, ಅವನಿಗೂ ಅವಳಿಗೂ ನಡೆದ ಸಂವಾದವನ್ನು ನೆನೆಪಿಗೆ ತಂದುಕೊಳ್ಳಿರಿ! ಅವನು ಹೊಗಲೇ ಆಗದು ಎಂದು ತನ್ನ ವ್ಯಥೆಯಲ್ಲಿ ಕೂಗಿಕೊಳ್ಳುವಳು. ನೀನಿಲ್ಲದಿದ್ದರೆ ನವೆದು ನವೆದು ಸಾಯುವೆನೆನ್ನುವಳು. “ ತಂದೆಯ ಆಣತಿಯನ್ನು ವಿಧೇಯತೆಯಿಂದ ನಡೆಸುವುದೇ ನಿಶ್ಚಯವೆಂದು ಮನಸ್ಸಿನಲ್ಲಿ ನಿರ್ಧಾರಮಾಡಿಕೊಂಡಿರುವ ಪಕ್ಷಕ್ಕೆ, ಅರಣ್ಯದ ಹಾದಿಯನ್ನು ನಾನೂ ಮೆಟ್ಟುವೆನು. ಕರುವಿನ ಬಳಿವಿಡಿದು ತೆರಳುವ ಗೋವಿನಂತೆ, ಓ ಎನ್ನ ಮುದ್ದಿನ ಕಂದನೇ, ನಿನ್ನ ಬಳಿವಿಡಿದು ನಾನೂ ತೆರಳುವೆನು ” ಎಂದು ವಾದಿಸುತ್ತಾಳೆ.

ಸರ್ವವನ್ನೂ ಕಳೆದುಕೊಳ್ಳುವಂತೆ ಮಾಡಿದ ಆ ಪರಮ ನೀಚವಾದ ಪಗಡೆಯ ಆಟವು ಮುಗಿದಮೇಲೆ, ಮಹಾಗುಣವಂತರಾದ ತನ್ನ ಐದುಮಂದಿ

ಮಕ್ಕಳುಗಳು, ಪಾಂಡವರು, ಅರಣ್ಯಕ್ಕೆ ಹೊರಡಿಸಲ್ಪಟ್ಟಾಗ ಕುಂತೀದೇವಿಯು ಗೋಳಾಡಿದುದನ್ನು ನೋಡಿರಿ. ಮಾತೆಯುರಲ್ಲಿಯೂ ಮಡದಿಯುರಲ್ಲಿಯೂ ಮಹಾ ಧೈರ್ಯಶಾಲಿನಿಯಾದ ಕುಂತಿ—ಕ್ಷತ್ರಿಯ ವೀರಾಂಗನೆ ಯಾವ ಕಾಲಕ್ಕೆಂದು ಮಗನನ್ನು ಹೆರುವಳೋ ಅಂತಹ ಕಾಲವು ಸನ್ನಿಹಿತವಾಗಿರುವುದು, ಮಾನಕ್ಕಾಗಿ ಪ್ರಾಣವನ್ನೂ ತೆರುವ ಕಾಲವು ಸನ್ನಿಹಿತವಾಗಿರುವುದು ಎಂದು ತನ್ನ ಮಕ್ಕಳಿಗೆ ತಿಳಿಸುವಂತೆ ಶ್ರೀ ಕೃಷ್ಣನಿಗೆ ಸಮರ ಸಮಯವು ಸನ್ನಿಹಿತವಾದಾಗ ಯಾವಳು ಹೇಳುವಳಾದಳೋ ಅಂತಹ ಕುಂತಿ—ಎದೆಯೊಡೆದವಳಾಗಿ ಅತ್ತುಬಿಟ್ಟಳು ; ತನ್ನ ಮಕ್ಕಳನ್ನು ಬಿಟ್ಟು ತೆರಳುವುದೇ ಅವಳಿಗೆ ಕಷ್ಟವಾಯಿತು ; ಅವರು ಮುಂದಕ್ಕೆ ತೆರಳಿದಾಗ ಅವರ ಬೆನ್ನಿಡಿದು ತೆರಳದಿರುವುದೇ ಅವಳಿಗೆ ದುಸ್ತರವಾಯಿತು !

ವೀರಾಗ್ರೇಸರನಾಗಿದ್ದ ತನ್ನ ಮಗನಾದ ಅಭಿಮನ್ಯುವು ಹತನಾದಾಗ ಅರ್ಜುನನು ಪಟ್ಟ ವ್ಯಥೆಯನ್ನು ನೋಡಿರಿ. ಯುದ್ಧರಂಗದಿಂದ ಸಿಬಿರಕ್ಕೆ ಹಿಂದಿರುಗಿ ಬಂದಾಗ, ವಿಜಾತೀಯವಾದ ಮಬ್ಬೊಂದು ಅವನನ್ನು ಆವರಿಸಿಕೊಳ್ಳುತ್ತದೆ ; ಶ್ರೀ ಕೃಷ್ಣನ ಕಡೆಗೆ ಸಹಾಯಕ್ಕೆ, ತಿಳಿವಳಿಕೆಗೆ, ತಿರುಗುತ್ತಾನೆ. ಆತುರದಿಂದ ತನ್ನ ಸಹೋದರರನ್ನು ಪ್ರಶ್ನಿಗೈಯುತ್ತಾನೆ ; ಉತ್ತರವನ್ನೀಯಲು ಅವರು ಹೆದರುವರು. ಮರ್ಮಭೇದಕವಾಗಿದ್ದ ತನ್ನ ಮಗನ ಮರಣಕಾಲದ ಸಂಕಟವನ್ನು ಶೋಕಪೂರಿತವಾದ ಅವನ ಹೃದಯವು ತಿಳಿದಿರುತ್ತದೆ ; ತನ್ನ ಶತ್ರುಗಳು ತನ್ನನ್ನು ಮುತ್ತುತ್ತ ಸಮೀಪಿಸಿದಾಗ ಆ ವೀರಬಾಲನು—“ನನ್ನ ತಂದೆಯು ಘೋರವಾದೀ ಸಂಕಷ್ಟದಿಂದ ನನ್ನನ್ನು ಬಿಡಿಸದಿರನು” ಎಂದುಕೊಳ್ಳುತ್ತಿದ್ದನಲ್ಲವೆ? ತಂದೆಯು ಸಹಾಯಕ್ಕೆ ಬಾರದಿರಲು, ನೂರಾರು ಸಾಯಕಗಳಿಂದ ಭೇದಿಸಲ್ಪಟ್ಟವನಾಗಿ ನೆಲಕ್ಕೊರಗಿದನು. ತನ್ನ ಕಂದನನ್ನು ಕಾಪಾಡಲು ತಾನಿಲ್ಲದೆ ಹೋದುದು—ಆ ಯೋಚನೆಯೇ ಅರ್ಜುನನನ್ನು ಚುಚ್ಚಿ ಚುಚ್ಚಿ ರೇಗಿಸುವುದು; ವೀರನೆನಿಸಿಕೊಂಡವನ ಮನವು ಬಲಗುಂದಿದವರನ್ನು ರಕ್ಷಿಸಲು ಬಯಸುತ್ತಲೇ ಇಳುವುದಲ್ಲವೆ? ಹೀಗಿರುವಲ್ಲಿ, ತಂದೆಯಾದವನು ವೀರಾಗ್ರಗಣ್ಯನಾಗಿ, ಬಲಗುಂದಿದವನು ಪ್ರಿಯತಮ ಪುತ್ರನಾಗಿ ಇರುವಲ್ಲಿ, ಈ ವ್ಯಥೆಯು ಇನ್ನೆಷ್ಟು ಹೇಳಲಾಗಿರಬೇಕು ! (ಮಹಾಭಾರತ.ದ್ರೋಣಪರ್ವ.೩.೭೨).

ಅನಾಥ ರಕ್ಷಣವೆಂಬ ಧರ್ಮವು ಧರ್ಮನಿರತನಾದ ಪ್ರಭುವಿನಲ್ಲಿ ಮೂರ್ತಿವತ್ತಾಗುತ್ತದೆ, ಮತ್ತು ಈ ಧರ್ಮಾಚರಣೆಯು ಪ್ರಜೆಗಳಲ್ಲಿರುವ ಸ್ವಾಮಿಭಕ್ತಿಯನ್ನು ಏಳಿಸುವುದು. "ಪ್ರಜಾಪರಿಪಾಲನವೇ ರಾಜಧರ್ಮದ ಕನೆ" ಎಂದು ಭೀಷ್ಮಾಚಾರ್ಯರು ಹೇಳುತ್ತಾರೆ. (ಮಹಾಭಾರತ. ಶಾಂತಿಪರ್ವ. ಅ. ೫೮). "ತನ್ನ ಗರ್ಭದಿಂದ ಹುಟ್ಟಿದ ಮಗುವಿನ ವಿಷಯದಲ್ಲಿ ತಾಯಿಯು ಹೇಗೆ ನಡೆದುಕೊಳ್ಳುವಳೋ, ತಾನು ಪ್ರೀತಿಸುವ ವಸ್ತುಗಳನ್ನೆಲ್ಲಾ ತ್ಯಜಿಸಿ ತನ್ನ ಕಂದನ ಯೋಗಕ್ಷೇಮ ಪ್ರೊಂದನ್ನೇ ಹೇಗೆ ತಾಯಿಯು ಬಯಸುವಳೋ, ಹಾಗೆಯೇ ಸಂದೇಹವಾವುದೂ ಇಲ್ಲದೆ, ರಾಜರುಗಳೂ ತಮ್ಮ ತಮ್ಮ ಪ್ರಜೆಗಳ ವಿಷಯದಲ್ಲಿ ನಡೆದುಕೊಳ್ಳಲೇಬೇಕು" ಎಂದು ಹೇಳುವರಾಗುತ್ತಾರೆ. (ಮಹಾಭಾರತ. ಶಾಂತಿಪರ್ವ. ಅ. ೫೬). ಪ್ರಜಾರಕ್ಷಣವು ಬಲವತ್ತರವಾದ ಧರ್ಮ. ಸಗರ ಚಕ್ರವರ್ತಿಯು ತನ್ನ ಜ್ಯೇಷ್ಠಪುತ್ರನಾದ ಅಸಮಂಜನೆಂಬುವನನ್ನು ತನ್ನ ಪ್ರಜೆಗಳ ಮಕ್ಕಳನ್ನು ನದಿಯಲ್ಲಿ ಪರ್ಯಾಲೋಚನಾ ಶೂನ್ಯನಾಗಿ ಕ್ರೌರ್ಯದಿಂದ ಮುಳುಗಿಸಿದನೆಂದು ದೇಶೋಚ್ಚಾಟನೆ ಗೈದನಲ್ಲವೆ? (ಮಹಾಭಾರತ ಶಾಂತಿಪರ್ವ. ಅ. ೫೭).

ರಕ್ಷಿತರಾಗುವೆವೆಂದು ನಂಬಿದ್ದ ಬಲಹೀನರನ್ನು ರಾಜರುಗಳು ರಕ್ಷಿಸಿದ ಬಗೆಗಳನ್ನು ಕುರಿತ ಕಥೆಗಳು ಅನೇಕವಿವೆ, ಮತ್ತು ರಕ್ಷಣಭಾವದೊಳಗೆ ಮಾನವನಲ್ಲದೆ ತಿರ್ಯಗ್ಜಂತುಗಳೂ ಸೇರಿದ್ದುವು. ಧರ್ಮರಾಜನಾದ ಯುಧಿಷ್ಠಿರ ಮಹಾರಾಜನನ್ನು ನಾಯಿಯೊಂದು ಹಸ್ತಿನಾಪುರವನ್ನು ಮೊದಲ್ಗೊಂಡು ಆ ಕೊನೆಯ ಮಹಾಪ್ರಸ್ಥಾನದ ಅಲೆದಾಟ ಬಳಲಾಟಗಳೊಳಗೆಲ್ಲಾ ಅನುಸರಿಸಿಕೊಂಡು ಹೋಗಿ, ಅತನೊಡನೆ ಆ ಮಹಾ ಮರುಭೂಮಿಯನ್ನೂ ದಾಟಿ ಹೋಯಿತು. ಈ ಮಹಾ ಪ್ರಯಾಣದೊಳಗೆಲ್ಲಾ ಸಾಯದೆ ಬದುಕಿ ರಾಜನ ಜತೆಯಲ್ಲಿಯೇ ಇದ್ದ ಪ್ರಾಣಿಯು ಇದೊಂದೇ ಆಗಿತ್ತು. ಸ್ವರ್ಗಲೋಕಕ್ಕೆ ಮಹಾರಾಜನನ್ನು ಕರೆದುಕೊಂಡು ಹೋಗುವುದಕ್ಕಾಗಿ ಇಂದ್ರನೇ ಬಂದಿರುವನು ; ವಿಮಾನವನ್ನೇರಿ ಊರ್ಧ್ವ ಲೋಕಗಳ ಸಂಚಾರಕ್ಕೆ ನನ್ನೊಡನೆ ತೆರಳುವವನಾಗು ಎಂದು ಮಹಾರಾಜನಿಗೆ ಹೇಳುವನು. ಆಗ ಯುಧಿಷ್ಠಿರನು ಬಗ್ಗಿ, ತನ್ನನ್ನು ನಂಬಿದ್ದ ನಾಯಿಜಾತಿಯ ಭೃತ್ಯನ

ತಲೆಯನ್ನು ಪ್ರೀತಿಯಿಂದ ಸವರುತ್ತಾ,--"ಹಿಂದಿದ್ದವರಿಗೂ ಈಗಿರುವವರಿಗೂ ಒಡೆಯನಾಗಿರುವ ದೇವೇಂದ್ರನೆ, ಈ ನಾಯಿ ನನ್ನನ್ನು ಅತಿಶಯವಾದ ಭಕ್ತಿಯಿಂದ ನಂಬಿರುತ್ತದೆ; ಅದೂ ನನ್ನ ಜತೆಯಲ್ಲಿಯೇ ಬರಬೇಕು. ಮರ್ತ್ಯಲೋಕದ ಈ ಬಡಪ್ರಾಣಿಯ ವಿಷಯದಲ್ಲಿ ನನ್ನ ಹೃದಯವು ದಯಾಭರಿತವಾಗಿರುವುದು" ಎಂದನು. ಇಂದ್ರನು—"ಸ್ವರ್ಗದ ಬೈಲನ್ನು ನಾಯಿಯೊಂದೂ ಮೆಟ್ಟಕೂಡದು. ಎಲೈ ಮಹಾರಾಜನೆ, ಅಮರತ್ವ, ನನ್ನ ಪದವಿಯಂತಹ ಪದವಿ, ವಿಶಾಲಸಂಪತ್ತು, ಉನ್ನತಜಯ, ಸ್ವರ್ಗಭೋಗ—ಇಷ್ಟನ್ನೂ ಈ ದಿನ ನೀನು ಗೆದ್ದಿರುವೆ. ನಿನ್ನ ಆರೋಹಣಕ್ಕೆ ಪ್ರತಿಬಂಧಕವಾಗಿರುವ ಈ ನಾಯಿಯನ್ನು ತಳ್ಳಿಬಿಡು; ಈ ಕಾರ್ಯದಲ್ಲಿ ಕ್ರೌರ್ಯವೇನೂ ಇಲ್ಲ; ಮರ್ತ್ಯಲೋಕದ ಪ್ರಾಣಿ ಮರ್ತ್ಯಲೋಕದಲ್ಲಿಯೇ ನಿಲ್ಲುವುದು" ಎಂದು ನುಡಿದನು. "ಎಲೈ ಸಹಸ್ರಾಕ್ಷನೇ, ಸದ್ಧರ್ಮನಿರತನೇ, ಆರ್ಯನು ಅನಾರ್ಯ ಕಾರ್ಯಗಳನ್ನು ಆಚರಿಸಲೇ ಕೂಡದಲ್ಲವೇ ನಂಬಿದವರನ್ನು ತೊರೆಯುವುದರಿಂದ ಬರುವ ಸುಖವು ನನಗೆ ಬೇಡವೆ? ಬೇಡ" ಎಂದು ಯುಧಿಷ್ಠಿರನು ಹೇಳಲು, ಇಂದ್ರನು—"ನಾಯಿಯನ್ನು ಕಟ್ಟಿಕೊಂಡು ಬರುವವರಿಗೆ ಸ್ವರ್ಗದಲ್ಲಿ ಸ್ಥಳವೇ ಇಲ್ಲ" ಎಂದು ನಿಷ್ಠುರವಾಗಿ ಹೇಳಿ, "ನಾಯಿಯನ್ನು ಬಿಟ್ಟು ತೆರಳು, ಹೊತ್ತು ಹೋಗುತ್ತಿದೆ" ಎಂದನು. ಯುಧಿಷ್ಠಿರನು—"ನಂಬಿದವರನ್ನು ತೊರೆಯುವುದು ಪಾಪಕೃತ್ಯ; ಮಹಾಪಾತಕವೆಂದು ಧರ್ಮಜ್ಞರು ಹೇಳಿರುವರು. ಬ್ರಹ್ಮಹತ್ಯದಷ್ಟು ಕಠಿಗೆ ಮೊರೆಹೊಕ್ಕವರನ್ನು ತೊರೆಯುವ ಪಾತಕವೂ ಇರುವುದು. ಮಹಾಪರಾಕ್ರಮಿಯಾದ ಇಂದ್ರನೆ, ಸುಖವನ್ನು ಪಡೆಯುವುದಕ್ಕಾಗಿ ಈ ನಾಯಿಯನ್ನು ನಾನು ತೊರೆಯುವುದಿಲ್ಲ" ಎಂದು ಉತ್ತರವನ್ನು ಕೊಟ್ಟನು. ಇಂದ್ರನ ಆಜ್ಞೆಯೂ ವ್ಯರ್ಥವಾಯಿತು, ಜಿಜ್ಞಾಸವೂ ವ್ಯರ್ಥವಾಯಿತು. ವಿತರ್ಕವಾದವು (sophistry) ಅವನ ಜ್ಞಾನವನ್ನು ಕೆಡಿಸಲಾರದೆ ಹೋಯಿತು. "ಭ್ರಾತೃಗಳನ್ನೂ ಧರ್ಮಪತ್ನಿಯನ್ನೂ ತೊರೆದವನಾಗಿದ್ದೀಯೆ, ಈ ನಾಯಿಯನ್ನು ಏಕೆ ತೊರೆಯಕೂಡದು?" ಎಂದು ಇಂದ್ರನು ಕೇಳುತ್ತಾನೆ. "ಸತ್ತವರೊಡನೆ ಸ್ನೇಹವೂ ಇಲ್ಲ, ಕಲಹವೂ ಇಲ್ಲ ಎಂಬುದು ಸಕಲ ಲೋಕಗಳಲ್ಲಿಯೂ ತಿಳಿದಿದೆ. ನನ್ನ ತಮ್ಮಂದಿರೂ

ಕೃಷ್ಣೆಯೂ ಬಿದ್ದು ಸತ್ತಾಗ, ಅವರನ್ನು ಬದುಕಿಸುವ ಶಕ್ತಿ ನನ್ನದಾಗಿರಲಿಲ್ಲವಾದುದರಿಂದ ನಾನು ಅವರನ್ನು ಬಿಟ್ಟು ಬಂದೆನು. ಅವರು ಬದುಕಿರುವವರೆಗೂ ನಾನು ಅವರನ್ನು ತೊರೆಯಲಿಲ್ಲ, ಈ ನಾಯಿಯಾದರೊ ಬದುಕಿರುತ್ತದೆ. ರಕ್ಷಿಸೆಂದು ಬಂದವನನ್ನು ಹೆದರಿಸುವುದು, ಸ್ತ್ರೀಯನ್ನು ಕೊಲ್ಲುವುದು, ಬ್ರಾಹ್ಮಣ ಸ್ವತ್ತನ್ನು ಅಪಹರಿಸುವುದು, ಮಿತ್ರನನ್ನು ನೋಯಿಸುವುದು, ಇವುಗಳಲ್ಲಿ ಪಡಿಯೊಂದಕ್ಕೂ ನಂಬಿದವರನ್ನು ತೊರೆಯುವ ಪಾಪವು ಸಮವಾಗಿರುತ್ತದೆ" ಎಂದು ಯುಧಿಷ್ಠಿರನು ಪ್ರವಚಿಸಿದನು. ಆಗ ನಾಯಿಯು ಮಾಯವಾಗಿ ಹೋಯಿತು. ನಾಯಿಯು ಮೈಯನ್ನು ಕುಗ್ಗಿಸಿ ನಿಂತಿದ್ದ ತಾಣದಲ್ಲಿ ಧರ್ಮದೇವನು ದಿವ್ಯತೇಜೋಮಯನಾಗಿ ನಿಂತನು. ಅವನೊಡನೆಯೂ ಇಂದ್ರನೊಡನೆಯೂ ಕೂಡಿದವನಾಗಿ, ದೇವತೆಗಳ ಗಾನವನ್ನು ಕೇಳುತ್ತಾ, ಪ್ರಾಜ್ಞರಿಂದ ಸ್ತುತಿಸಲ್ಪಡುತ್ತಾ, ಸದ್ಧರ್ಮನಿರತನಾದ ಮಹಾರಾಜನು ಸ್ವರ್ಗಲೋಕಕ್ಕೆ ಒಯ್ಯಲ್ಪಟ್ಟನು. (ಮಹಾಭಾರತ. ಮಹಾಪ್ರಸ್ಥಾನಪರ್ವ. ಅ. ೩).

ಪೂರ್ವಕಾಲದ ಮತ್ತೊಂದು ಕಥೆಯನ್ನು ಕೇಳಿರಿ. ಉಸೀನರನ ಮಗನಾದ ಸಿಬಿಚಕ್ರವರ್ತಿಯು ಒಡ್ಡೋಲಗಂ ಕೊಡುತ್ತಾ ತನ್ನ ಆಸ್ಥಾನ ಮಂಟಪದಲ್ಲಿ ಕುಳಿತಿದ್ದನು. ತಟ್ಟನೆ ಕಪೋತಪಕ್ಷಿಯೊಂದು ಒಳಕ್ಕೆ ನುಗ್ಗಿ, ಹಾರಿಬಂದು, ಬಾಯಿಬಾಯಿ ಬಿಡುತ್ತಾ, ಉಸುರನ್ನು ಬಿಡಲಾರದೆ ಆಯಾಸದಿಂದಲೂ ಭಯದಿಂದಲೂ ಕಣ್ಣು ಕಣ್ಣು ಬಿಡುತ್ತಾ ಮಹಾರಾಜನ ವಿಶಾಲವಾದ ಮಡಿಲೊಳಕ್ಕೆ ಬಂದು ಬಿತ್ತು. ಮಹಾರಾಜನು ಅದರ ಮೈಯನ್ನು ಮೆಲ್ಲನೆ ಸವರುತ್ತಾ, ವಿಸ್ಮಯದಿಂದೊಡಗೂಡಿದ ಕರುಣದೊಡನೆ ಕೆದರಿದ್ದದರಗರಿಗಳನ್ನು ಸರಿಮಾಡುತ್ತಾ, ತನ್ನ ಲಾಲನೆಯಿಂದ ಅದಕ್ಕೆ ಉಸುರನ್ನೂ ತ್ರಾಣವನ್ನೂ ಉಂಟುಮಾಡುತ್ತಾ ಇರುವಷ್ಟರಲ್ಲಿಯೇ ರೋಷದಿಂದ ರೇಗಿದ್ದ ಗಿಡಗ ಪಕ್ಷಿಯೊಂದು ಆಸ್ಥಾನ ಮಂಟಪದೊಳಕ್ಕೆ ರೊಯ್ಯನೆ ನುಗ್ಗಿ ಬಂದು, ಮಹಾರಾಜನಿದಿರಿಗೆ ತಟ್ಟನೆ ನಿಂತಿತು. ಮರಳಿ ಮರಳಿ ಕಾಣಿಸಿಕೊಳ್ಳುತ್ತಿದ್ದ ಭಯದಿಂದೊಡಗೂಡಿ ಕಪೋತವು ಮಾನವ ಸ್ವರದಲ್ಲಿ—"ನಾನು ವಾಸಮಾಡುವ ಈ ನೆಲಕ್ಕೆಲ್ಲಾ ನೀನೇ ಒಡೆಯನು. ನನ್ನ ರಕ್ಷಣೆಯಾಗಿ ನಿನ್ನನ್ನೇ ಸೇರಿದೆ. ನನ್ನ ಶತ್ರುವಿನ ಕಾಟಕ್ಕೋಸ್ಕರ

ನಿನ್ನ ಮರೆಯನ್ನು ಹೊಕ್ಕಿರುವೆನು" ಎಂದಿತು. ಆ ಗಿಡಗವೂ ಮಾನವ ಸ್ವರದಲ್ಲಿ—"ಎಲೈ ಮಹಾರಾಜನೆ, ನಿನ್ನ ರಾಜ್ಯದಲ್ಲಿಯೇ ನಾನೂ ಇರುವೆನು. ಇದು ನನ್ನ ಆಹಾರವಾಗಿ ಭಗವಂತನಿಂದಲೇ ನಿರ್ಮಿಸಲ್ಪಟ್ಟಿದೆ, ಇದನ್ನು ನನಗೆ ಬಿಟ್ಟುಕೊಡದ ಪಕ್ಷಕ್ಕೆ, ನನ್ನದಾಗಿರುವುದನ್ನು ನನಗೇ ಕೊಡದವನಾಗುತ್ತೀಯೆ" ಎಂದು ಹೇಳಿಕೊಂಡಿತು. ಮಹಾರಾಜನು ಕೊಂಚ ಹೊತ್ತಿನವರೆಗೆ ಆಲೋಚಿಸಿ—"ನೀವಿಬ್ಬರೂ ಸರಿಯಾಗಿಯೇ ಹೇಳುತ್ತೀರಿ. ಎಲೈ ಕಪೋತವೇ, ನಿರಪರಾಧಿಯಾದ ನಿನ್ನ ಜೀವಕ್ಕೆ ಹಾನಿಯುಂಟಾಗದಿರುವಂತೆ ರಕ್ಷಿಸಬೇಕೆಂದು ಕೇಳುವುದಕ್ಕೆ ನಿನಗೆ ಅಧಿಕಾರವುಂಟು ; ಎಲೈ ಗಿಡಗನೇ, ನ್ಯಾಯವಾದ ನನ್ನನ್ನವನ್ನು ನನ್ನಿಂದ ನೀನು ಕಿತ್ತುಕೊಳ್ಳದಿರಬೇಕು ಎಂದು ನೀನು ಕೇಳುವುದಕ್ಕೆ ನಿನಗೂ ಅಧಿಕಾರವುಂಟು. ಆದರೂ ಈ ಧರ್ಮದ ತೊಡಕನ್ನು ನಾನು ಹೀಗೆ ಬಿಡಿಸುವನಾಗುತ್ತೇನೆ.—"ಗಿಡಗನೆ, ನಿನ್ನ ಹೊಟ್ಟೆತುಂಬುವವರೆಗೂ ನನ್ನಿಂದ ನೀನು ಬೇರೆಯಾದ ಆಹಾರವನ್ನು ತೆಗೆದುಕೊಳ್ಳುವನಾಗು" ಎಂದನು. ಅದಕ್ಕೆ ಗಿಡಗವು "ನನಗೆ ಆ ಕಪೋತವೇ ಬೇಕು, ಬೇರೆ ಇನ್ನೇನೂ ನನಗೆ ಬೇಡ; ಹಾಗೆ ಇನ್ನೇನಾದರೂ ಕೊಡುವ ಪಕ್ಷಕ್ಕೆ, ರಾಜನೆ, ನಿನ್ನ ಶರೀರದಿಂದ ಈ ಕಪೋತದ ತೂಕದಷ್ಟು ಮಾಂಸವನ್ನು ಕೊಡುವನಾಗು" ಎಂದಿತು. ರೇಗಿದ ಮಂತ್ರಿಗಳು ಈ ರೀತಿಯಲ್ಲಿ ತಮ್ಮ ಪ್ರೇಮದೊಡೆಯನ ಅಮೂಲ್ಯವಾದ ಜೀವಕ್ಕೇ ತಂಟೆಯನ್ನು ತಂದು ಹಾಕಿದ ಗಿಡಗವನ್ನು ಒಡನೆಯೇ ಕೊಲ್ಲುವರಾಗಿದ್ದರು. ಆದರೆ ಸಿಬಿಚಕ್ರವರ್ತಿಯು,—"ನಾನಿಲ್ಲಿ ದೊರೆಯಾಗಿ ಕುಳಿತಿರುವುದು ಸಣ್ಣವರಿಗೂ ಅಲ್ಲ, ದೊಡ್ಡವರಿಗೂ ಅಲ್ಲ; ಕಪೋತಕ್ಕೂ ಅಲ್ಲ, ಗಿಡಗಕ್ಕೂ ಅಲ್ಲ; ಧರ್ಮವನ್ನು ಆಚರಣೆಗೆತಂದು ತೋರಿಸುವುದಕ್ಕೂ, ನನ್ನ ಪ್ರಜೆಗಳಿಗೆ ಮೇಲುಪಙ್ತಿಯಾಗಿರುವುದಕ್ಕೂ ನಾನಿದ್ದೇನೆ. ಅಲ್ಪದಲ್ಲಿ ತಪ್ಪಿದರೆ ಅನಲ್ಪದಲ್ಲಿಯೂ ತಪ್ಪುವೆನು; ನನ್ನ ಪ್ರಜೆಗಳೂ ನನ್ನಂತೆಯೇ ಆಚರಿಸಿ ಬಹಳವಾಗಿ ಕೆಡುವರು. ತಕ್ಕಡಿಯನ್ನು ತನ್ನಿರಿ!" ಎಂದನು. ಮಹಾವ್ಯಸನದಿಂದ ಖಿನ್ನರಾಗಿ, ಅವಿಧೇಯರಾಗುವುದಕ್ಕೆ ಶಕ್ತಿಯಿಲ್ಲದವರಾಗಿ, ಉಕ್ಕಿಯುಕ್ಕಿ ಬರುವ ಅಳುವನ್ನು ಹಲ್ಲಿ ಕಚ್ಚುತ್ತಾ ನಿಲ್ಲಿಸುವರಾಗಿ, ಮಂತ್ರಿಗಳು ತಕ್ಕಡಿಯನ್ನು ತಂದರು. ಒಂದು ಕೈಯಿಂದ ಮೃದುವಾಗಿ ಕಪೋತ

ವನ್ನು ಆ ತಕ್ಕಡಿಯ ಒಂದು ತಟ್ಟೆಯಲ್ಲಿರಿಸಿ, ಮತ್ತೊಂದು ಕೈಯಿಂದ ಬಿರುಸಾಗಿ ತನ್ನ ಶರೀರದಿಂದ ಮಾಂಸಖಂಡವೊಂದನ್ನು ಕೊಯ್ದು ಮತ್ತೊಂದು ತಟ್ಟೆಯಲ್ಲಿಟ್ಟನು. ಆದರೆ ಕಪೋತವು ಕಾನೆ ಭಾರವಾಗಿತ್ತು. ರಾಜನು ಮತ್ತೊಂದು ಖಂಡವನ್ನು ಕೊಯ್ದನು. ಕಪೋತವು ಇನ್ನೂ ಭಾರವಾಯಿತು. ವಿಸ್ಮಯಪಡುತ್ತಾ ರಾಜನು ತನ್ನ ಶರೀರದಿಂದ ಮತ್ತಷ್ಟು ಮಾಂಸವನ್ನು ಕೊಯ್ದನು. ಕಪೋತವು ಮತ್ತಷ್ಟು ಭಾರವಾಯಿತು. ಕೊನೆಗೆ ರಾಜನು ತನ್ನ ಶರೀರವನ್ನೆಲ್ಲಾ ತಕ್ಕಡಿಯೊಳಕ್ಕೆ ಹಾಕಿಬಿಟ್ಟನು. ಆಗ ಕಪೋತವೂ ಗಿಡಗವೂ ಮಾಯವಾದುವು. ಅವು ಇದ್ದೆಡೆಯಲ್ಲಿ ಇಂದ್ರನೂ ಅಗ್ನಿಯೂ ಪ್ರತ್ಯಕ್ಷರಾಗಿ—"ನೀನು ರಾಜನೇ ಸರಿ. ರಾಜನ ಪ್ರಥಮ ಧರ್ಮವಾಗಿರುವ ಪ್ರಜಾರಕ್ಷಣವನ್ನು ನೀನು ಬಲ್ಲೆ. ನಾವು ಕೇಳಿದ್ದುದಕ್ಕಿಂತಲೂ ನೀನು ಅಧಿಕನಾಗಿರುವುದನ್ನು ಕಣ್ಣಾರ ನೋಡಿದೆವು. ನಿನ್ನ ಶರೀರವು ನೋಯದಿರುವುದನ್ನು ನೋಡುವವನಾಗು! ನಿನ್ನ ಪ್ರಜೆಗಳ ಹೃತ್ಕಮಲದಲ್ಲಿ ಬಹುಕಾಲ ಬದುಕುವವನಾಗು" ಎಂದು ಆಶೀರ್ವಾದವನ್ನು ಮಾಡಿ ಹೊರಟು ಹೋದರು. (ಮಹಾಭಾರತ. ವನಪರ್ವ. ಅ. ೧೩೧, ೧೯೭. ಅನುಶಾಸನಪರ್ವ ಅ. ೩೨).

ರಾಜರುಗಳನ್ನೇ ಕುರಿತು ಈ ಕಥೆಗಳನ್ನು ಹೇಳಿದಾರೆ; ಏಕೆಂದರೆ, ಅವರುಗಳು ಅನಾಥರಕ್ಷಕರಿಗೆಲ್ಲಾ ಮೇಲುಪಙ್ತಿಯಾಗಿದಾರೆ. ಹುಡುಗರೂಕೂಡ ತಮ್ಮ ತಮ್ಮ ಯೋಗ್ಯತಾನುಸಾರವಾಗಿ ತಮಗಿಂತಲೂ ದುರ್ಬಲರಾಗಿರುವವರನ್ನು ರಕ್ಷಿಸಬಹುದಾಗಿದೆ. ಈ ಕಥೆಗಳಿಂದ ನೀತಿಗಳನ್ನು ಗ್ರಹಿಸಿದವರಾಗಿ ಅವುಗಳು ಬೋಧಿಸುವ ಸದ್ಧರ್ಮಗಳನ್ನು ನಾವು ನಾವು ಸದಾಚರಣೆಗೆ ತರಲೆಂದು ಇವುಗಳನ್ನು ಹೇಳಿರುವರು.

ದಯಾಗುಣದಲ್ಲಿ ಪ್ರಸಿದ್ಧನಾಗಿದ್ದವನೂ ಒಬ್ಬ ದೊರೆಯು. "ರಂತಿದೇವನಂತೆ ದಯಾಪರನು" ಎಂಬುದು ಲೋಕಪ್ರಸಿದ್ಧವಾಗಿದೆ. ಒಂದಾನೊಂದು ಸಮಯದಲ್ಲಿ ಪರಿವಾರಸಹಿತನಾಗಿ ಅವನು ನಲವತ್ತೆಂಟುದಿನ ಉಪವಾಸಮಾಡಿ, ನಲವತ್ತೊಂಬತ್ತನೆಯದಿನ ಒಂದಿಷ್ಟು ತುಪ್ಪವನ್ನೂ ಹಾಲನ್ನೂ ಯವಧಾನ್ಯವನ್ನೂ ನೀರನ್ನೂ ಪಾರಣೆಗೆಂದು ಇಟ್ಟುಕೊಂಡಿದ್ದನು. ಈ ಮಿತಾಹಾರವನ್ನು ಭೋಜನಮಾಡಬೇಕೆಂದು ಎಲ್ಲರೂ ಕುಳಿತುಕೊಂಡರು;

ಆ ಹೊತ್ತಿಗೆ ಸರಿಯಾಗಿ ಅಭ್ಯಾಗತನಾಗಿ ಓರ್ವ ಬ್ರಾಹ್ಮಣನೊದಗಿದನು. ತಿಂಡಿಯನ್ನು ತಾವು ತಿನ್ನದೆ ಆತನಿಗೆ ಬಡಿಸಿದರು. ಆ ಬ್ರಾಹ್ಮಣನು ಹೊರಟುಹೋದಮೇಲೆ, ಉಳಿದಿದ್ದ ತಿಂಡಿಯನ್ನು ಸಮವಾಗಿ ವಿಭಾಗಿಸಿ ಎಲ್ಲರಿಗೂ ಕೊಟ್ಟು, ಒಂದು ಭಾಗವನ್ನು ತನಗೆಂದು ಇಟ್ಟುಕೊಂಡನು. ತನ್ನ ಭಾಗದ ತಿಂಡಿಯನ್ನು ತಿನ್ನಬೇಕೆಂದಿರುವಲ್ಲಿ, ಶೂದ್ರನೊಬ್ಬನು ಅಭ್ಯಾಗತನಾಗಿ ಬಂದನು. ತನ್ನ ಭಾಗದಲ್ಲೊಂದು ಭಾಗವನ್ನು ಸಂತೋಷದಿಂದ ಅವನಿಗೆ ಕೊಟ್ಟನು. ಶೂದ್ರನು ಹೊರಟುಹೋದಮೇಲೆ, ಪಾರಣೆಯನ್ನು ಮಾಡುವುದಕ್ಕಿಂತ ಮುಂಚೆಯೇ. ನಾಯಿಗಳ ಗುಂಪನ್ನು ಕಟ್ಟಿಕೊಂಡು ಮತ್ತೊಬ್ಬನು, ಬರುವನಾದನು. ಒಂದು ಗುಟುಕು ನೀರನ್ನು ಮಾತ್ರ ಇಟ್ಟುಕೊಂಡು, ಉಳಿದುದನ್ನೆಲ್ಲಾ ಅಭ್ಯಾಗತರಿಗೆ ಕೊಡುವನಾದನು. ಇವರೂ ಹೊರಟುಹೋದಮೇಲೆ, ರಂತಿದೇವನು ಒಣಗಿದ್ದ ತನ್ನ ತುಟಿಗಳಿಗೆ ಆಪ್ಯಾಯನವಾದ ನೀರನ್ನು, ಕುಡಿಯಬೇಕೆಂದೆತ್ತಿದನು. ಸಮೀಪದಲ್ಲಿಯೇ ಅದೊಂದು ಧ್ವನಿಯು—"ಅಯ್ಯೋ, ನೀರನ್ನು ಕೊಡು, ಕೊಂಚ ಕೊಡು" ಎಂದಿತು. ರಂತಿದೇವನು ತಿರುಗಿನೋಡಿದನು. ಮಹಾದುರವಸ್ಥೆಯಲ್ಲಿದ್ದವನೊಬ್ಬನು, ಸಜ್ಜನರ ಸಮುದಾಯದಿಂದ ಬಹಿಷ್ಕೃತನಾದ ನೀಚನೊಬ್ಬನು, ನೆಲದಮೇಲೆ ಬಿದ್ದುಕೊಂಡು, ತನ್ನ ಕೈಯಲ್ಲಿರುವ ನೀರಿನೆಡೆಗೆ ಪರಿತಪ್ತಗಳಾಗಿಯೂ ಆಶಾಪೂರಿತಗಳಾಗಿಯೂ ಇರುವ ಕಣ್ಣುಗಳಿಂದ ಎವೆಯಿಕ್ಕದೆ ನೋಡುತ್ತಿರುವುದನ್ನು ಕಂಡನು. ಅವನ ಸಮೀಪದಲ್ಲಿ ತಗ್ಗಿ ಬಗ್ಗಿ ನಿಂತು, ರಂತಿದೇವನು ಕರುಣಾಳುಗಳಾದ ತನ್ನ ನೇತ್ರಗಳಿಂದ ದಯಾರಸವನ್ನು ಚೆಲ್ಲುತ್ತಾ, ಮೆಲ್ಲನೆ ಆ ನೀಚನ ತಲೆಯನ್ನು ಕೈಯಲ್ಲಿ ಯೆತ್ತಿ ಹಿಡಿದು, ಧೂಳಿಯಿಂದಾಚ್ಛಾದಿತವಾಗಿ ತಲ್ಲಣಿಸುತ್ತಿದ್ದ ಆತನ ತುಟಿಗಳೆಡೆಗೆ ಶೀತೋದಕವನ್ನು ಎತ್ತಿಟ್ಟು—"ತಮ್ಮನೆ, ನೀರನ್ನು ಕುಡಿ" ಎಂದು ಕನಿಕರದಿಂದ ನುಡಿಯುತ್ತಾ, ತನ್ನ ಸೌಮ್ಯವಾದ ಕೃಪಾಪರಿಪೂರ್ಣತೆಯಿಂದ ತನ್ನ ದಾನದ ಫಲವನ್ನು ದ್ವಿಗುಣಿಸುವನಾದನು. ಆ ನೀಚನು ನೀರನ್ನು ಕುಡಿದು ಚೇತರಿಸಿಕೊಂಡಾಗ, ರಂತಿದೇವನು ಸಂಭ್ರಮದಿಂದ ಶ್ರೀಹರಿಯನ್ನು ಕುರಿತು,—"ಪರಮೇಶ್ವರನಿಂದ ನಾನು ಅಷ್ಟಸಿದ್ಧಿಗಳಿಂದೊಡಗೂಡಿದ ಪದವಿಯನ್ನೂ ಅರ್ಥಿಸುವುದಿಲ್ಲ, ಮೋಕ್ಷವನ್ನೂ ಅರ್ಥಿ

ಸುವುದಿಲ್ಲ. ಸರ್ವಭೂತಸನಾಗಿ, ಅವುಗಳ ದುಃಖವೆಲ್ಲವನ್ನೂ ನಾನನುಭವಿಸಿ, ಅವುಗಳಿಗೆ ಸುಖವನ್ನುಂಟುಮಾಡುವವನಾಗಬೇಕೆಂದು ಕೇಳಿಕೊಳ್ಳುತ್ತೇನೆ. ಸಂಕಟಪಡುವ ಈ ಮಾನವನ ಪ್ರಾಣವನ್ನುಳಿಸುವುದಕ್ಕೆ ಈ ನೀರನ್ನು ನಾನು ಕೊಟ್ಟುದರಿಂದ ನನ್ನ ಹಸಿವು, ಬಾಯಾರಿಕೆ, ಶ್ರಮ, (ದೇಹಪರಿಭ್ರಮಣ, ದೈನ್ಯ, ಕ್ಷಮ, ಶೋಕ)-ಎಲ್ಲವೂ ಕಳೆದುಹೋದುವು" ಎಂದು ಹೇಳುವನಾದನು. ಇದರಷ್ಟು ದಯಾರಸಭರಿತವಾದ ಪ್ರಾರ್ಥನೆ ಮತ್ತಾವುದೂ ಇಲ್ಲವೇಇಲ್ಲ. (ವಿಷ್ಣುಭಾಗವತ. ಸ್ಕಂ. ೯, ಅ. ೨೧).

ನಮಗಿಂತಲೂ ದುರ್ಬಲರಾಗಿರುವವರನ್ನು ನಾವು ರಕ್ಷಿಸಿ ಅವರ ವಿಷಯದಲ್ಲಿ ಕರುಣಾಳುಗಳಾಗಿರುವಾಗ, ನಾವು ಗರ್ವಿತರಾಗದಿರುವಂತೆ ನೋಡಿಕೊಳ್ಳಬೇಕು. ಗರ್ವವೂ ದುರ್ಗುಣದಲ್ಲಿಯೇ ಸೇರಿರುತ್ತದೆ. "ಅಹಂಕಾರದಿಂದ ಗರ್ವವೂ ಹುಟ್ಟುವುದು." ಈ ಅಹಂಕಾರವು "ನಾನು" "ನೀನು" ಎಂಬ ಭೇದವನ್ನು ಹುಟ್ಟಿಸಿ, ಶರೀರದ ಭೇದದ ದೆಸೆಯಿಂದ ಕಿಂಚಿತ್ಕಾಲದ ಮಟ್ಟಿಗೆ ಹೊರಗಿನವನಂತೆ ಕಾಣಿಸುವವನ ಸಂಗಡ ನಾನು ಲೋಕ ಸಾಮಾನ್ಯವಸ್ತುಗಳನ್ನು ಅನುಭವಿಸುತ್ತಿರುವೆನು ಎಂಬುದನ್ನು ಮರೆತು—"ನಾನು ಈ ದುರ್ಬಲನಿಗೆ ಸಹಾಯಮಾಡುತ್ತಿರುವೆನಲ್ಲವೆ?" ಎಂಬ ಆತ್ಮೋತ್ಕರ್ಷವನ್ನು ವೃದ್ಧಿಗೊಳಿಸುವುದಾಗಿದೆ. ತನಗಿರುವ ಪರೋಪಕಾರಶಕ್ತಿಯನ್ನೂ ತನ್ನಲ್ಲಿರುವ ಪ್ರಯೋಜನಾಂಶವನ್ನೂ ಕುರಿತು ಧ್ಯಾನಿಸುವಂತೆ ತನ್ನ ಮನಸ್ಸನ್ನು ಬಿಡುವುದರಿಂದ ಗರ್ವವು ಹುಟ್ಟಿ, ಮಾಡಿದ ಸತ್ಕಾರ್ಯದ ಫಲವನ್ನು ಕೆಡಿಸುತ್ತದೆ. ಭಿನ್ನ ಭಾವವನ್ನುಳ್ಳವನಾವನೂ ಅಹಂಕಾರವೆಂಬ ಅಂತರಂಗ ಶತ್ರುವಿನ ಶಕ್ತಿಗೆ ಒಳಪಡದಿರುವುದಿಲ್ಲ. ಮಹಾಮಹಾ ಪ್ರಾಜ್ಞರೂ ಕೂಡ, ಜಾಗರೂಕತೆಯಿಲ್ಲದೆ ಕೆಲವು ವೇಳೆಗಳಲ್ಲಿ ಅಹಂಕಾರದ ಅಧಿಕಾರಕ್ಕೆ ಸಿಕ್ಕಬಿದ್ದು, ತಕ್ಕ ತಕ್ಕ ಫಲಗಳನ್ನು ಅನುಭವಿಸುವವರಾಗುತ್ತಾರೆ. ಕರ್ಮವಿಧಿ ಯಾರಿಗೂ ಸಗ್ಗುವುದಿಲ್ಲ; ಮೇಲಿನವರಿಗೂ ಕೆಳಗಿನವರಿಗೂ ಒಂದೇ ಸಮನಾಗಿರುತ್ತದೆ. ಜ್ಞಾನಿಗಳಿಗೂ ಪ್ರಬಲರಿಗೂ ಅಂತರಂಗ ಶತ್ರುವಾಗಿರುವ ಗರ್ವದ ವಿಷಯದಲ್ಲಿ ಎಚ್ಚರವಿರಲೇಬೇಕೆಂದು ಸ್ಮೃತಿಗಳಲ್ಲಿ ಅನೇಕಾವರ್ತಿ ಹೇಳಿದೆ. ಈ ಕಥೆಗಳಲ್ಲಿ ಕೆಲವನ್ನು ಕೇಳಿರಿ.

ಹಿಮವತ್ಪರ್ವತದ ಬದರಿಕಾಶ್ರಮದಲ್ಲಿ ಪುರಾಣಪುರುಷನಾದ ಶ್ರೀಮನ್ನಾರಾಯಣನು ಯುಗ ಯುಗಾಂತರಗಳವರೆಗೂ ಘೋರ ತಪಸ್ಸನ್ನು ಮಾಡುತ್ತಿದ್ದನು. ಇಂದ್ರಿಯ ಜಯವು ಈ ತಪಸ್ವಿಗೆ ಎಷ್ಟರಮಟ್ಟಿಗಿರುವುದೋ ನೋಡುವೆನೆಂದು ಇಂದ್ರನು ಸಾಸಿರಾರುಮಂದಿ ದೇವಕನ್ಯೆಯರನ್ನು ಕರೆದು, ನೀವು ಅವನ ತಪೋವನಕ್ಕೆ ಹೋಗಿ, ತಪೋಭಂಗ ಮಾಡುವುದಕ್ಕೆ ಸರ್ವಪ್ರಯತ್ನವನ್ನೂ ಮಾಡಿರಿ ಎಂದು ಬೆಸಸಿದನು. ಆಜ್ಞೆಯಾಗಿದ್ದಂತೆ ನಡೆದರು. ಮಹರ್ಷಿಯಾದ ನಾರಾಯಣನು ತನ್ನ ದಿವ್ಯದೃಷ್ಟಿಯಿಂದ ಅವರ ಉದ್ದೇಶವನ್ನು ತಿಳಿದು, ಸ್ವಸಾಮರ್ಥ್ಯದ ಭರವಸದಿಂದ ಮಂದಸ್ಮಿತ ವದನನಾಗಿ, ತನ್ನ ಯೋಗಬಲದಿಂದ ಅದೇ ರೂಪಿನ ಸಾಸಿರಾರು ಮಂದಿ ದೇವಕನ್ಯೆಯರನ್ನು ಸೃಷ್ಟಿಸಿ, ದೇವೇಂದ್ರನ ಕಡೆಯವರಿಗೆ ಅತಿಥಿಸತ್ಕಾರವನ್ನು ಮಾಡಹೋಗಿರಿ ಎಂದು ಹೇಳಿದನು. ದೇವಕನ್ಯೆಯರು ನಾಚಿಕೊಂಡು, ಮಹರ್ಷಿಯ ಸನ್ನಿಧಿಗೆ ಬಂದು, ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡರು. ಮನಸ್ಸಿಗೆ ಸಂತೋಷವುಂಟಾಗಲು, ಪ್ರಸನ್ನನಾಗಿ ಕ್ಷಮಿಸಿ, ಬೇಕಾದುದೊಂದು ವರವನ್ನು ಬೇಡಿರಿ ಎಂದನು. ನಮಗೆಲ್ಲಾ ನಾಥನಾಗಿಯೂ ಪತಿಯಾಗಿಯೂ ನೀನಿರಬೇಕು ಎಂದರು. ದೊಡ್ಡ ಇಕ್ಕಟ್ಟಿನೊಳಗೆ ಸಿಕ್ಕಿದವನಾಗಿ, ಕೊಡುತ್ತೇನೆಂದುದನ್ನು ಕೊಡುವುದಿಲ್ಲವೆನ್ನುವುದಕ್ಕೆ ಆಗದೆ, ಪರಿತಾಪಪಟ್ಟು—"ಸಂದೇಹವೇ ಇಲ್ಲ ; ನನ್ನ ಅಹಂಕಾರದ ದೆಸೆಯಿಂದ ನನಗೀ ತೊಂದರೆಯು ಪ್ರಾಪ್ತವಾಯಿತು. ಧರ್ಮನಾಶಕ್ಕೆಲ್ಲಾ ಅಹಂಕಾರವೇ ಮೂಲಕಾರಣ" ಎಂದು ಹೇಳಿಕೊಂಡವನಾಗಿ,—"ಈ ಅವತಾರದಲ್ಲಿ ಗೃಹಸ್ಥಾಶ್ರಮಿಯಾಗುವುದು ನನ್ನ ವ್ರತಕ್ಕೆ ವಿರೋಧ. ಇನ್ನೊಂದವತಾರದಲ್ಲಿ, ಬೇರೆ ಕೆಲಸಕ್ಕೆ ಇನ್ನೊಂದಾವರ್ತಿ ಹುಟ್ಟುವಾಗ, ಕೃಷ್ಣನಾಗಿ ಹುಟ್ಟಿ ನಿಮ್ಮಗಳ ಮನೋಭೀಷ್ಟವನ್ನು ಸಲ್ಲಿಸುವೆನು. ಸದ್ವಂಶಗಳಲ್ಲಿ ಹುಟ್ಟುವ ನಿಮ್ಮನ್ನೆಲ್ಲಾ ವರಿಸಿ, ಈ ಮಹಾ ಸಂಸಾರಭಾರವನ್ನೂ ಹೊರುವವನಾಗುತ್ತೇನೆ" ಎಂದು ಹೇಳಿದನು.

(ದೇವೀಭಾಗವತ. ಸ್ಕಂ, ೪. ಅ, ೬,೭).

ಬ್ರಹ್ಮನಿಂದ ಬಂದ ಕುಶನಿಂದ ಸ್ಥಾಪಿತವಾದ ಕ್ಷತ್ರಿಯವಂಶಕ್ಕೆ ಸೇರಿ, ಗಾಧಿಯರಾಜ್ಯಕ್ಕೆ ಅಧಿಪತಿಯಾಗಿದ್ದ ವಿಶ್ವಾಮಿತ್ರ ರಾಜನು ಸೇನಾಸ

ಮೇತನಾಗಿ ದಿಗ್ವಿಜಯ ಮಾಡಿಕೊಂಡು ತನ್ನ ರಾಜ್ಯಕ್ಕೆ ಮರಳಿ ಬರುತ್ತಿರುವಾಗ, ವಸಿಷ್ಠ ಮಹರ್ಷಿಗಳ ತಪೋವನದ ಸಮೀಪಕ್ಕೆ ಬಂದನು. ಸ್ವಲ್ಪ ದೂರದಲ್ಲಿಯೇ ತನ್ನ ಸೈನ್ಯಗಳನ್ನು ಬಿಟ್ಟು, ಮಹರ್ಷಿ ಪೂಜೆಯಂಗೈದು ಬರುವೆನೆಂದು ತಾನೊಬ್ಬನೇ ಆಶ್ರಮವನ್ನು ಪ್ರವೇಶಿಸಿದನು. ವಸಿಷ್ಠಮಹರ್ಷಿಗಳು ವಿಶ್ವಾಮಿತ್ರನನ್ನು ಸನ್ಮಾನದೊಡನೆ ಆದರಿಸಿದರು. ಆ ಶಾಂತಾಶ್ರಮಕ್ಕೆ ತನ್ನ ಸೇನೆಗಳಿಂದ ತೊಂದರೆಯಾದೀತೆಂದು ಹೆದರಿ ವಿಶ್ವಾಮಿತ್ರನು ಬೇಗನೆ ಹೊರಟಾಗ,—"ನೀನೂ ನಿನ್ನ ಸೇನೆಗಳೂ ಭೋಜನವಮಾಡಿಕೊಂಡು ಹೊರಡಬಹುದು" ಎಂದು ವಸಿಷ್ಠರು ಹೇಳಿದರು. ಋಷಿಗಳ ವರಮಾನವು ಅಲ್ಪವಾದುದರಿಂದ ತನ್ನಿಂದ ಅವರಿಗೆ ತೊಂದರೆಯಾಗಕೂಡದೆಂದು ಭಾವಿಸಿ, ವಿಶ್ವಾಮಿತ್ರನು ತಾನು ನಿಲ್ಲುವುದಕ್ಕೆ ಆಗುವುದಿಲ್ಲವೆಂಬು ಮರಳಿ ಮರಳಿ ತಿಳಿಸಿದನು. "ನನ್ನ ತಪಃಪ್ರಭಾವದಿಂದಲೂ ನನ್ನ ನಂದಿನಿಯೆಂಬ ದಿವ್ಯ ಗೋವಿನ ಸಹಾಯದಿಂದಲೂ ರಾಜನಾದ ನಿನಗೂ ನಿನ್ನ ಪರಿವಾರದವರೆಲ್ಲರಿಗೂ ನಿರಾಯಾಸದಿಂದ ಭೋಜನವಾಗುವುದು ; ಆದುದರಿಂದ ಅತಿಥಿ ಸತ್ಕಾರವನ್ನು ಹೊಂದಿ ಹೊರಡು" ಎಂದು ವಸಿಷ್ಠರೂ ಮರಳಿ ಮರಳಿ ಹೇಳುವರಾದರು. ಹೀಗೆ ಆ ಮಹಾತ್ಮರಲ್ಲಿ ಅಹಂಕಾರವು ಹುಟ್ಟಿತ್ತು. ವಿಶ್ವಾಮಿತ್ರನು, ಬಲಾತ್ಕರಿಸಲ್ಪಟ್ಟವನಾಗಿ ನಿಂತು, ಆ ದಿವ್ಯ ಗೋವಿನ ಮಹಿಮೆಗಳನ್ನು ಕಣ್ಣಾರ ನೋಡಿದವನಾದನು. ಆಗ ದುರಾಶೆಯೆಂಬುದು ಅವನ ಮನಸ್ಸಿನಲ್ಲಿ ಅಂಕುರಿಸಿತು. "ಬ್ರಾಹ್ಮಣನಾದವನಿಗೆ ಇಂತಹ ಗೋವಿನ ಅವಶ್ಯಕತೆ ಏನುತಾನೆ ಇದ್ದೀತು? ರಾಜರುಗಳಿಗೆ ತಕ್ಕುದಾಗಿದೆ" ಎಂದು ಆಲೋಚಿಸಿಕೊಂಡು, ದಿವ್ಯ ಗೋವನ್ನು ತನಗೆ ಕೊಡಬೇಕೆಂದು ವಸಿಷ್ಠರನ್ನು ಪ್ರಾರ್ಥಿಸಿದನು. ಆಗ ವಸಿಷ್ಠರು ಚಿಂತಾಕ್ರಾಂತರಾಗಿ ಯೋಚಿಸಿ,—"ಒಳ್ಳೆತು ; ಆಕೆಯು ನನ್ನನ್ನು ತೊರೆಯುವುದಕ್ಕೊಪ್ಪಿದರೆ, ಕರೆದುಕೊಂಡು ಹೋಗು" ಎಂದರು. ಗೋವು ಒಪ್ಪಲೇ ಇಲ್ಲ. ವಿಶ್ವಾಮಿತ್ರನ ಪರಿವಾರದವರು ಹಗ್ಗವನ್ನು ಕಟ್ಟಿ ಎಳೆದುಕೊಂಡು ಹೋಗುವುದಕ್ಕೆ ಪ್ರಯತ್ನಿಸಲು, ಗೋವು ಗೋಳಿಡುತ್ತಾ, ತನ್ನನ್ನು ತೊರೆಯದಿರಬೇಕೆಂದು ತನ್ನೊಡೆಯರಾದ ವಸಿಷ್ಠರನ್ನು ಬೇಡಿಕೊಂಡಿತು. ಆಗ ವಸಿಷ್ಠರು ಕ್ರೋಧಕ್ಕೆ ಅವಕಾಶವನ್ನಿತ್ತರು. ಅಹಂಕಾ

ರವೂ ಗರ್ವವೂ ಇದ್ದ ಮೇಲೆ ಮುಂದಿನ ಮೆಟ್ಟಲು ಕ್ರೋಧವಾಗಿರುವುದು ಸಹಜವೇ ಅಲ್ಲವೆ? ಬ್ರಾಹ್ಮಣನಿಗೂ ಕ್ಷತ್ರಿಯನಿಗೂ ಘೋರ ಯುದ್ಧವು ಆಗ ಪ್ರಾರಂಭವಾಯಿತು. ಆ ಯುದ್ಧದಿಂದ ದೇಶದ ಚರಿತ್ರೆಯೆಲ್ಲಾ ವ್ಯತ್ಯಸ್ತವಾಯಿತು. ಶಕ, ಪಲ್ಲವ, ಯವನ, ಬರ್ಬರಾದಿ ಅನಾರ್ಯ ಕುಲದವರನ್ನು ಗೋವು ಸಹಾಯಕ್ಕೆ ಕರೆಯಿತು. ವಿಶ್ವಾಮಿತ್ರನು ಅವರೆಲ್ಲರನ್ನೂ ಧ್ವಂಸಮಾಡಿದನು ; ಆದರೂ ವಸಿಷ್ಠರ ಬ್ರಹ್ಮ ತೇಜೋಬಲವು ಕೊನೆಗೆ ವಿಶ್ವಾಮಿತ್ರನ ಕ್ಷಾತ್ರ ಪೌರುಷವನ್ನು ಗೆದ್ದುಬಿಟ್ಟಿತು. ಆಗ ವಿಶ್ವಾಮಿತ್ರನು ಜುಗುಪ್ಸೆಪಟ್ಟು, ವೈರಾಗ್ಯವನ್ನು ಸ್ವೀಕರಿಸಿ, ರಾಜ್ಯಕೋಶಗಳನ್ನು ತೊರೆದು, ಬ್ರಹ್ಮತೇಜಸ್ಸನ್ನು ಪಡೆಯಲೇ ಬೇಕೆಂದು ಯುಗಯುಗಾಂತರಗಳವರೆಗೂ ಘೋರ ತಪಸ್ಸನ್ನು ಮಾಡತೊಡಗಿದನು. ಆತ್ಮ ಸುಖತ್ಯಾಗವನ್ನು ಎಷ್ಟೆಷ್ಟೊ ಯುಗಗಳವರೆಗೆ ಆಚರಿಸಿದಮೇಲೆ ತನ್ನ ಮನೋಭೀಷ್ಟವನ್ನು ಪಡೆಯುವವನಾದನು ; ವಶಿಷ್ಠರಿಗೂ ಅವನಿಗೂ ಸಂಧಿಯಾಗಿ, ವಸಿಷ್ಠರು ವಿಶ್ವಾಮಿತ್ರರನ್ನು ಬ್ರಹ್ಮರ್ಷಿಗಳೆಂದು ಒಪ್ಪುವರಾದರು.

(ರಾಮಾಯಣ. ಬಾಲಕಾಂಡ).

ದೇವತೆಗಳಿಗೆಲ್ಲಾ ದೊರೆಯೆನಿಸಿಕೊಳ್ಳುವ ಪದವಿಯು ಹೃದಯವನ್ನು ಗರ್ವದಿಂದ ತುಂಬುವ ಪದವಿಯಾಗಿದೆಯಷ್ಟೆ. ಈ ಕಾರಣದ ದೆಸೆಯಿಂದ ದೇವೇಂದ್ರನು ಅನೇಕ ವೇಳೆಗಳಲ್ಲಿ ಪದಚ್ಯುತನಾದನು. ಒಂದಾನೊಂದು ವೇಳೆಯಲ್ಲಿ, ದೇವತೆಗಳಿಂದ ಪರಿವೃತನಾಗಿ, ಇಂದ್ರನು ಲೋಕತ್ರಯಾಧಿಪತ್ಯದ ಸಿಂಹಾಸನದಮೇಲೆ ಕುಳಿತಿದ್ದನು. ದೇವ ಗುರುಗಳಾದ ಬೃಹಸ್ಪತ್ಯಾಚಾರ್ಯರು ದರ್ಶನಾರ್ಥಿಗಳಾಗಿ ಬಂದಾಗ, ಅವನು ಅವರ ಸತ್ಕಾರಕ್ಕೆ ಸಿಂಹಾಸನದಿಂದ ಏಳಲೇ ಇಲ್ಲ. ಗುರುಗಳು ದೇವತೆಗಳನ್ನು ತೊರೆದು ಹೊರಟು ಹೋಗಲು, ಅಸುರರು ಬಂದು ಸ್ವರ್ಗಲೋಕವನ್ನು ಮುತ್ತಿ, ದೇವತೆಗಳನ್ನೂ ದೇವೇಂದ್ರನನ್ನೂ ಸ್ವರ್ಗದಿಂದೋಡಿಸಿಬಿಟ್ಟರು. ಇದರಿಂದ ಅನೇಕ ತೊಂದರೆಗಳು ಹುಟ್ಟಿದುವು ; ಇಂದ್ರನು ಎರಡು ವೇಳೆಗಳಲ್ಲಿ ಬ್ರಾಹ್ಮಣಹತ್ಯವನ್ನು ಮಾಡಿದನು. ಶುಚಿಯಾಗುವುದಕ್ಕೆ ಅವನು ಬಹುಕಾಲ ತಪಸ್ಸು ಮಾಡಬೇಕಾಯಿತು.

ಇಂದ್ರನು ಈ ತಪಸ್ಸನ್ನು ಮಾಡುವುದಕ್ಕೆ ಹೊರಟುಹೋಗಲು, ಸ್ವರ್ಗವು ಅನಾಯಕವಾಗುವುದೆಂದು ದೇವತೆಗಳು ಹೆದರಿ, ಮರ್ತ್ಯಲೋ

ಕದ ರಾಜರುಗಳಲ್ಲಿ ಚಂದ್ರವಂಶಕ್ಕೆ ಸೇರಿದವನಾದ ನಹುಷನನ್ನು ಸ್ವರ್ಗಾಧಿಪತ್ಯದ ಮಹಾಪದವಿಗೆ ಆರಿಸಿಟ್ಟರು. ಮತ್ತಾರೂ ಅರ್ಹರಾಗಿರಲಿಲ್ಲ. ನಹುಷನು ರಾಜ್ಯಂಗೈದನು ; ಆದರೆ ಇಂದ್ರನಿಗಿಂತಲೂ ಪ್ರಬಲನಾಗಿ ಆಳುತ್ತಿದ್ದುದರಿಂದ ದಿನದಿನಕ್ಕೆ ಗರ್ವವು ಹೃದಯದಲ್ಲಿ ಹೆಚ್ಚು ಹೆಚ್ಚುತ್ತಾ ಹೋಗಿ, ಗರ್ವದ ಚಿಂತನೆಗಳ ಬೆನ್ನಿಡಿದು ಪಾಪಕೃತ್ಯದ ಚಿಂತೆಗಳೂ ಅವನ ಮನಸ್ಸಿನಲ್ಲಿ ನೆಲೆಗೊಂಡುವು. "ಇಂದ್ರನ ರಾಜ್ಯಭಾರವನ್ನು ವಹಿಸಿರುವೆನಾದುದರಿಂದ ಇಂದ್ರನ ಮರ್ಯಾದೆಗಳೂ ನನಗಿರಬೇಕು. ಇಂದ್ರನ ಹೆಂಡತಿಯಾದ ಶಚೀದೇವಿಯು ನನ್ನ ಬಳಿಗೆ ಬರುವಳಾಗಲಿ" ಎಂದು ಆಜ್ಞಾಪಿಸಿದನು. ಆಗ ದೇವತೆಗಳು ಖಿನ್ನಮನಸ್ಕರಾಗಿ ಒಬ್ಬರ ಸಂಗಡ ಒಬ್ಬರು ಈ ವಿಷಯವನ್ನು ಕುರಿತು ಮಾತಾಡತೊಡಗಿದರು, ಮತ್ತು ನಹುಷನು ಸ್ವರ್ಗಾಧಿಪತಿಯಾಗಿರಲು ಅನರ್ಹನೆಂದೂ ಯೋಚಿಸಿದರು; ಇಂದ್ರನು ಮರಳಿ ಬರುವ ಕಾಲವೂ ಸಮೀಪಿಸಿತೆಂದು ತಿಳಿದರು. ಆದರೆ ನಹುಷನ ಮುಂದೆ ನಿಲ್ಲುವಷ್ಟು ಧೈರ್ಯವಂತನು ಯಾವನು ತಾನೇ ಇದ್ದಾನು ? ಪುರಾಕೃತ ಸುಕೃತಗಳಿಂದ ನಹುಷನು ಸಂಪಾದಿಸಿದ್ದ ಬಲವು ಅವನ ಮಹಾಪರಾಧವೊಂದರಿಂದುಂಟಾದ ಮಹರ್ಷಿಯೊರ್ವನ ಕ್ರೋಧಾಗ್ನಿಯೊಂದರಿಂದಲೇ ದಗ್ಧವಾಗುವುದಾಗಿದ್ದುದರಿಂದ ಶಚೀದೇವಿಯು ಸಂಗಡ ಅವರು ಮಾತನ್ನಾಡಿ, ಅವಳನ್ನೊಪ್ಪಿಸಿ, ನಹುಷನೆಡೆಗೆ ಬಂದು, "ತಾವು ಋಷಿಗಳ ಹೆಗಲಿನಮೇಲೆ ದಯಮಾಡುವುದಾದರೆ, ಶಚೀದೇವಿಯರು ಸ್ವಗೃಹದಲ್ಲಿ ತಮ್ಮನ್ನು ಆದರಿಸುವರು" ಎಂದು ಹೇಳಿದರು. ಋಷಿಗಳು ಹೊರುವಂತಹ ವಾಹನವನ್ನು ತನ್ನಿರಿ ಎಂದು ನಹುಷನು ಆಣತಿಯನ್ನಿತ್ತನು. ಅಗಸ್ತ್ಯಾದಿ ಮಹರ್ಷಿಗಳು ಚತುರಂತಯಾನವನ್ನು (ಪಲ್ಲಕ್ಕಿಯನ್ನು) ಹೊರುವಂತೆ ರಾಜಾಜ್ಞೆಯಾಯಿತು. ಋಷಿಗಳು ಚಿತ್ತಶಾಂತಿಯಿಂದೊಪ್ಪಿದರು. ಮೆರವಣಿಗೆ ಹೊರಟಿತು. ನಹುಷನು ಮದೋನ್ಮತ್ತನಾಗಿ ಆತುರಪಡುತ್ತಾ, ಅಗಸ್ತ್ಯರ ಶಿರಸ್ಸಿಗೆ ತನ್ನ ಹೆಜ್ಜೆಯನ್ನು ಸೋಕಿಸಿ, ಬೇಗಬೇಗನೆ ತೆರಳುವಂತೆ ಆಜ್ಞಾಪಿಸಿದನು. ಆಗ ಅಗಸ್ತ್ಯರು ನಹುಷನ ಪದಚ್ಯುತಿಕಾಲವು ಪ್ರಾಪ್ತವಾಯಿತೆಂದು ತಿಳಿದು ಶಾಪವನ್ನು ಕೊಟ್ಟರು. ನಹುಷನು ಮರ್ತ್ಯಲೋಕದಲ್ಲಿದ್ದ ಒಂದು ಅಜಗರದ ಶರೀರದೊಳಕ್ಕೆ ಆಗ ಸ್ವರ್ಗದಿಂದ ಬಿದ್ದನು. 'ಆ ತಿರ್ಯಗ್ಜಂತುವಿನ

ಶರೀರದೊಳಗೆ ಬಹುಕಾಲ ಸೆರೆಬಿದ್ದಿದ್ದವನಾಗಿ, ತನ್ನ ಸಂತತಿಯವನಾದ ಅಜಾತಶತ್ರುವೆನಿಸಿದ್ದ ಯುಧಿಷ್ಠಿರ ಮಹಾರಾಜನ ವಿವೇಕದ ನುಡಿಗಳಿಂದ ಶಾಪವಿಮೋಚನೆಯನ್ನು ಪಡೆದವನಾದನು. (ಮಹಾಭಾರತ. ವನಪರ್ವ. ಅ. ೧೭೯—೧೮೧).

ವಿರೋಚನನ ಪುತ್ರನಾದ ಬಲಿಚಕ್ರವರ್ತಿಯು ಮಹಾ ಸಂಪತ್ತಿನಲ್ಲಿ ಬಹುಕಾಲ ಬಾಳಿದನು ; ಏಕೆಂದರೆ, ಅವನು ಬಹು ಬಹು ಸುಕೃತಗಳನ್ನು ಮಾಡಿದ್ದುದರಿಂದ ಶ್ರೀದೇವಿಯು ಅವನೆಡೆಯಲ್ಲಿ ನೆಲೆಗೊಂಡಿದ್ದಳು. ತಾನು ಪರಮ ಧರ್ಮಿಷ್ಟನೆಂತಲೂ ತನ್ನದು ಪರಮ ಸುಚರವೆಂತಲೂ ಅವನು ಗರ್ವ ಪಡುವುದಕ್ಕೆ ಪ್ರಾರಂಭಿಸಿ, ಆತ್ಮಸ್ತುತಿಗಾರಂಭಮಾಡಿ ಪರನಿಂದೆಯನ್ನೆಸಗುತ್ತಾ, ಪರರ ಯೋಗಕ್ಷೇಮವನ್ನು ವಿಚಾರಿಸದೆ ಕೆಡಕನ್ನು ಮಾಡುವನಾದನು. ಶ್ರೀದೇವಿಯು ಬಲಿಚಕ್ರವರ್ತಿಯಲ್ಲಿದ್ದ ಅನುರಾಗವನ್ನು ತೊರೆದು, ಅವನನ್ನು ಬಿಟ್ಟು, ಅವನ ಶತ್ರುವಾದ ಸ್ವರ್ಗಲೋಕಾಧಿಪತಿಯಾದ ಇಂದ್ರನೆಡೆಗೆ ಹೊರಟುಹೋದಳು. ಬಹುಕಾಲದವರೆಗೂ ತನಗೆ ಸುಖವನ್ನು ಕೊಡುತ್ತಿದ್ದ ಶ್ರೀದೇವಿಯು ತನ್ನ ಶತ್ರುವನ್ನು ಸೇರಿದುದನ್ನು ನೋಡಿ ಬಲಿಯು ಬಹಳವಾಗಿ ತೊಳಲಿ ಬಳಲಿದನು. ಉತಥ್ಯನು ಮಾಂಧಾತನಿಗೆ,— "ಇದೆಲ್ಲಾ ಗರ್ವಾಸೂಯೆಗಳ ಫಲ ; ಎಲೈ ಮಾಂಧಾತನೇ, ಎಚ್ಚರವಿರಲಿ; ಶ್ರೀದೇವಿಯು ಕೋಪಿಸಿಕೊಂಡು ನಿನ್ನನ್ನು ತೊರೆದು ಹೊರಡದಿರಲಿ. ಅಧರ್ಮನು ಶ್ರೀದೇವಿಯಲ್ಲಿ ಅಹಂಕಾರನೆಂಬ ಪುತ್ರನೊಬ್ಬನನ್ನು ಪಡೆದನೆಂದು ಶ್ರುತಿಗಳು ಸಾರುತ್ತಲಿವೆ. ಎಲೈ ರಾಜನೆ, ಈ ಅಹಂಕಾರನು ಸುರರಲ್ಲಿಯೂ ಅಸುರರಲ್ಲಿಯೂ ಅನೇಕ ಮಂದಿಯನ್ನು ಹಾಳುಮಾಡಿದನು. ಅವನ ಸಹವಾಸದಿಂದ ರಾಜರ್ಷಿಗಳನೇಕರೂ ಹತರಾದರು. ಆದುದರಿಂದ ನೀನು ನಿದ್ರೆಗೈಯದೆ ಎಚ್ಚರದಿಂದಿರು. ಅಹಂಕಾರನನ್ನು ಗೆದ್ದವನೇ ರಾಜನಾಗುವನು ; ಅಹಂಕಾರನಿಂದ ಜಿತನಾದವನು ದಾಸನಾಗುವನು," ಎಂದು ರಾಜಧರ್ಮೋಪದೇಶವನ್ನು ಮಾಡಿದನು. (ಮಹಾಭಾರತ. ವನಪರ್ವ. ಅ. ೯೦).

ಗರ್ವ ಕ್ರೋಧಗಳಿಂದ ಜನಿಸುವ ಪಾಪಕೃತ್ಯಗಳಿಗೆ ಬೀಳದಿರುವಂತೆ ತನ್ನ ಹಿರಿಯನನ್ನೂ ಕೂಡ ಕಿರಿಯನೊಬ್ಬನು ವಿವೇಕದಿಂದ ನಡೆದು ಕಾಪಾ

ಡಬಹುದಾಗಿದೆ. ಬಹು ಪುರಾತನ ಕಾಲದಲ್ಲಿ ಪುತ್ರನೋರ್ವನು ತನ್ನ ತಂದೆಯನ್ನು ಈ ರೀತಿಯಲ್ಲಿ ಕಾಪಾಡಿದನು. ಅಂಗೀರಸಗೋತ್ರಕ್ಕೆ ಸೇರಿದ ಗೌತಮ ಪುತ್ರನಾದ ಚಿರಕಾರಿ ಯೆಂಬನೊರ್ವನಿದ್ದನು. ತನ್ನ ಹೆಸರಿಗೆ ಸರಿಯಾಗಿ ಚಿರಕಾರಿಯು ಚಿರಕಾಲ ಚಿಂತಿಸಿ ಚಿಂತಿಸಿ ಕೆಲಸ ಮಾಡುವವನಾಗಿದ್ದನು ಬಹು ವಿವೇಕವುಳ್ಳವನಾಗಿಯೂ ವಿಚಾರಪರನಾಗಿಯೂ ಇದ್ದನು. ತನ್ನ ಹೆಂಡಿತಿಯು ಪಾಪಕೃತ್ಯವೊಂದನ್ನೆಸಗುತ್ತಿರುವುದನ್ನು ಗೌತಮನು ಕಂಡು, ಕೋಪಪರವಶನಾಗಿ, ತನ್ನ ಮಗನಿಗೆ—"ಈ ದುಷ್ಟೆಯನ್ನು ಕೊಂದುಬಿಡು" ಎಂದು ಹೇಳಿ ಹೊರಟುಹೋದನು. ಏನುಮಾಡಲಿ; ಪಿತೃವಾಕ್ಯ ಪರಿಪಾಲನ ಧರ್ಮವೊಂದು ಕಡೆಯಲ್ಲಿದೆ; ಹೆತ್ತ ತಾಯಿಯ ಪವಿತ್ರತಮ ಶರೀರವನ್ನು ನೋಯಿಸಕೂಡದೆಂಬ ಧರ್ಮವು ಮತ್ತೊಂದು ಕಡೆಯಲ್ಲಿದೆ. ತಂದೆಯ ಆಜ್ಞೆಯನ್ನು ನಡೆಯಿಸುವುದು ಪರಮ ಪುಣ್ಯಕರ. ಮಾತೃ ರಕ್ಷಣವು ಸ್ಪಷ್ಟ ಕರ್ತವ್ಯ. ಪಾಪಕರ್ಮವನ್ನು ನಾನು ಹೇಗೆತಾನೇ ಬಿಡಲಾದೀತು? ನಾನಾದರೋ ನಮ್ಮಪ್ಪನಿಗೂ ಮಗ, ನಮ್ಮಮ್ಮನಿಗೂ ಮಗ ಪುತ್ರನಲ್ಲಿರುವುದೆಲ್ಲಾ ತಂದೆಯದು. ತಂದೆ ತೃಪ್ತಿಪಟ್ಟರೆ, ದೇವತೆಗಳೆಲ್ಲಾ ತೃಪ್ತಿ ಪಡುವರು. ತಂದೆಯ ಸಂತುಷ್ಟವಚನಗಳು ಮಗನಿಗೆ ಸಂಪತ್ತನ್ನು ತರುತ್ತವೆ. ತಾಯಿಯೊ? ಮಗುವಿಗೆ ಶರೀರಾವರಣವನ್ನು ಕೊಡುತ್ತಾಳೆ, ಮಗುವನ್ನು ಪೋಷಿಸುತ್ತಾಳೆ. ಮಗನು ತಾಯಿಯನ್ನು ಕಳೆದುಕೊಂಡಾಗ, ಲೋಕವೇ ಅವನಿಗೆ ಬರಿದಾಗುವುದು. ತಾಯಿಯಂತಹ ಆಶ್ರಯವೂ ಇಲ್ಲ, ಮರೆಯೂ ಇಲ್ಲ, ರಕ್ಷಕ ವಸ್ತುವೂ ಇಲ್ಲ; ಅವಳಂತಹ ಪ್ರೀತ್ಯಾಸ್ಪದ ವಸ್ತುವು ಮತ್ತಾವದೂ ಇಲ್ಲ" ಎಂದುಕೊಂಡು, ಧರ್ಮಸಂಕಷ್ಟಕ್ಕೊಳಗಾದನು. "ಗಂಡನಿಗೆ ಪತಿಯೆಂತಲೂ ಭರ್ತನೆಂತಲೂ ಹೆಸರುಂಟು. ಪೋಷಿಸದೆಯೂ ಪಾಲಿಸದೆಯೂ ಅವನಿದ್ದರೆ, ಅವನು ಭರ್ತನೂ ಅಲ್ಲ, ಪತಿಯೂ ಅಲ್ಲ. ನನಗಾದರೋ ನನ್ನ ತಾಯಿ ಪರಮ ಪೂಜ್ಯಳಾಗಿದಾಳೆ" ಎಂದೂ ಯೋಚಿಸಿದನು. ಇಷ್ಟರೊಳಗೆ ಗೌತಮನ ಮನಸ್ಸು ಜಪದಿಂದ ಶಾಂತವಾಯಿತು; "ನನ್ನ ಪತ್ನಿಯನ್ನು ಕೊಲ್ಲೆಂದು ನನ್ನ ಮಗನಿಗೆ ನಾನು ಹೇಳಿ ಬಂದುದರಿಂದ ಮಹಾ ಪಾತಕಕ್ಕೆ ನಾನು ಗುರಿಯಾದೆನಲ್ಲಾ!" ಎಂದು ಗೌತಮನು ಬಹು ಖಿನ್ನನಾಗಿ, ಕಣ್ಣೀರನ್ನು ಸುರಿಸುತ್ತಾ, ತನ್ನ ಹೆಂಡತಿ

ಯ ಅಪರಾಧಕ್ಕಾಗಿ ತನ್ನ ಅಜಾಗರೂಕತೆಯನ್ನೇ ದಂಡಿಸುತ್ತಾ; ತನ್ನ ಮಗನು ತನ್ನಾಜ್ಞೆಯನ್ನು ನಡೆಯಿಸದಿದ್ದರೆ ಸಾಕು ಎಂದುಕೊಳ್ಳುತ್ತಾ, ಮನೆಗೆ ಬೇಗ ಬೇಗನೆ ಬಂದನು. "ಮಹಾ ಪಾತಕಕ್ಕೊಳಗಾಗದಿರುವಂತೆ, ಎಲೈ ಮಗನೆ, ನನ್ನನ್ನೂ ನಿನ್ನ ತಾಯಿಯನ್ನೂ ನನ್ನ ತಪಸ್ಸನ್ನೂ ನಿನ್ನನ್ನೂ ಬಿಡುಗಡೆಮಾಡು" ಎಂದು ಮೊರೆಯಿಡುವನಾದನು. ಚಿರಕಾರಿಯು ತಾಳ್ಮೆಯುಳ್ಳವನಾಗಿ ವಿಚಾರಪರನಾಗಿದ್ದುದರಿಂದ ತನ್ನ ತಂದೆಯ ಕೋಪ ಕಾಲದ ಆಜ್ಞೆಯನ್ನು ನಡೆಯಿಸದೆ, ತನ್ನ ತಂದೆಯ ಮನಸ್ಸಿನಲ್ಲಿ ನಿಜವಾಗಿದ್ದ ಆಶೆಯನ್ನು ತೀರಿಸಿ, ಗರ್ವದಿಂದಲೂ ಕೋಪದಿಂದಲೂ ಪ್ರೇರಿತವಾಗಿದ್ದ ಮಹಾ ಪಾಪಕೃತ್ಯವನ್ನು ತನ್ನ ತಂದೆಯು ಮಾಡದಿರುವಂತೆ ಮಾಡಿ ಅವನನ್ನು ಉಳಿಸಿದನು. (ಮಹಾಭಾರತ, ಶಾಂತಿಪರ್ವ. ಅ, ೨೬೬).

## ಸ್ಮೃತ್ಯಾದಿ ವಚನಗಳು

ಅಹಿಂಸಯೈವ ಭೂತಾನಾಂ ಕಾರ್ಯಂ ಶ್ರೇಯೋಽನುಶಾಸನಮ್।
ವಾಕ್ಚೈವ ಮಧುರಾ ಶ್ಲಕ್ಷ್ಣಾ ಪ್ರಯೋಜ್ಯಾ ಧರ್ಮಮಿಚ್ಛತಾ॥

(ಮನುಸ್ಮೃತಿ. ಅ. ೨. ಶ್ಲೋ. ೧೫೯).

"ಹಿಂಸೆಯನ್ನುಂಟುಮಾಡದೆ, ಅವರುಗಳ ಶ್ರೇಯೋಽಭಿವೃದ್ಧಿಯನ್ನು ನೋಡಿಕೊಂಡು ಪ್ರಾಣಿಗಳನ್ನು ಅನುಶಾಸಿಸಬೇಕು. ಧರ್ಮವನ್ನು ಇಚ್ಛಯಿಸುವಾತನು ಮೃದು ಮಧುರ ವಾಕ್ಕುಗಳನ್ನೇ ಉಪಯೋಗಿಸಬೇಕು."

ರಕ್ಷಣಾದಾರ್ಯವೃತ್ತಾನಾಂ ಕಂಟಕಾನಾಂ ಚ ಶೋಧನಾತ್ ।
ನರೇನ್ದ್ರಾಸ್ತ್ರಿದಿವಂ ಯಾನ್ತಿ ಪ್ರಜಾಪಾಲನತತ್ಪರಾಃ ॥

(ಮನುಸ್ಮೃತಿ. ಅ, ೯, ಶ್ಲೋ. ೨೫೩).

"ಆರ್ಯವೃತ್ತಿಯಲ್ಲಿರುವವರನ್ನು ರಕ್ಷಿಸುತ್ತಲೂ ಕಂಟಕರನ್ನು ಶೋಧಿಸಿ ತೆಗೆಯುತ್ತಲೂ ಪ್ರಜಾಪಾಲನ ನಿರತರಾಗಿರುವ ನರೇಂದ್ರರು ಸ್ವರ್ಗವನ್ನೈಧುವರು."

ಸ್ವೇಸ್ವೇ ಧರ್ಮೇ ನಿವಿಷ್ಟಾನಾಂ ಸರ್ವೇಷಾಮನುಪೂರ್ವಶಃ ।
ವರ್ಣಾನಾಮಾಶ್ರಮಾಣಾಂ ಚ ರಾಜಾ ಸೃಷ್ಟೋಽಭಿರಕ್ಷಿತಾ ॥

(ಮನುಸ್ಮೃತಿ. ಅ. ೭, ಶ್ಲೋ. ೩೫).

" ಬೇರೆ ಬೇರೆ ವರ್ಣದವರೂ ಬೇರೆ ಬೇರೆ ಆಶ್ರಮದವರೂ, ಅವ ರವರ ಅಂತಸ್ತಿಗೆ ತಕ್ಕಂತೆ, ಅವರವರ ಧರ್ಮಗಳನ್ನು ಆಚರಿಸುತ್ತಿರುವು ದನ್ನು ನೋಡಿಕೊಳ್ಳುವುದಕ್ಕೂ ಅವರನ್ನೆಲ್ಲಾ ಅಭಿರಕ್ಷಿಸುವುದಕ್ಕೂ ರಾ ಜನು ಸೃಷ್ಟಿಸಲ್ಪಟ್ಟಿರುವನು. "

ಯಥೋದ್ಧರತಿ ನಿರ್ದಾತಾ ಕಕ್ಷಂ ಧಾನ್ಯಂ ಚ ರಕ್ಷತಿ |
ತಥಾರಕ್ಷೇನ್ನೃಪೋ ರಾಷ್ಟ್ರಂ ಹನ್ಯಾಚ್ಚ ಪರಿಪನ್ಥಿನಃ ||

(ಮನುಸ್ಮೃತಿ, ಅ. ೭, ಶ್ಲೋ. ೧೧೦).

" ಕೃಷಿಕಾರನು ಕಳೆಯನ್ನು ಕಿತ್ತು ಪೈರನ್ನು ಹೇಗೆ ರಕ್ಷಿಸುತ್ತಾ ನೆಯೋ ಹಾಗೆಯೇ ರಾಜನೂ ರಾಷ್ಟ್ರವನ್ನು ರಕ್ಷಿಸಿ ಪರಿಪಂಥಿಗಳನ್ನು (ಶತ್ರುಗಳನ್ನು) ನಾಶಮಾಡುವವನಾಗಲಿ".

ಸುವಾಸಿನೀಃ ಕುಮಾರೀಶ್ಚ ರೋಗಿಣೋ ಗರ್ಭಿಣೀಸ್ತಥಾ |
ಅತಿಥಿಭ್ಯೋಗ್ರಏವೈತಾನ್ ಭೋಜಯೇದವಿಚಾರಯನ್ ||

(ಮನುಸ್ಮೃತಿ, ಅ. ೩, ಶ್ಲೋ. ೧೧೪).

" ನೂತನ ವಧುಗಳಿಗೂ, ಕುಮಾರಿಗಳಿಗೂ, ರೋಗಿಗಳಿಗೂ, ಗರ್ಭಿ ಣಿಯರಿಗೂ, ವಿಚಾರವೇನೂ ಇಲ್ಲದೆ, ಅತಿಥಿಗಳಿಗೆ ಮುಂಚೆಯೇ, ಭೋಜ ನವನ್ನು ಮಾಡಿಸಬೇಕು. "

ಚಕ್ರಿಣೋ ದಶಮೀಸ್ಥಸ್ಯ ರೋಗಿಣೋ ಭಾರಿಣಃ ಸ್ತ್ರಿಯಾಃ |
ಸ್ನಾತಕಸ್ಯ ಚ ರಾಜ್ಞಶ್ಚ ಪನ್ಥಾ ದೇಯೋ ವರಸ್ಯ ಚ ||

(ಮನುಸ್ಮೃತಿ, ಅ. ೨, ಶ್ಲೋ. ೧೩೮).

" ಬಂಡಿಯಲ್ಲಿ ಹೋಗುವವನಿಗೂ, ತೊಂಬತ್ತು ವರುಷಕ್ಕಿಂತಲೂ ಹೆಚ್ಚಾದ ವಯಸ್ಸುಳ್ಳವನಿಗೂ, ರೋಗಿಗೂ, ಹೊರೆಯನ್ನು ಹೊತ್ತಿರುವವ ನಿಗೂ, ಹೆಂಗಸಿಗೂ, ಸ್ನಾತಕನಿಗೂ, ರಾಜನಿಗೂ, ವರನಿಗೂ ದಾರಿಯನ್ನು ಬಿಡಬೇಕು. "

ಅನುಕ್ರೋಶೋ ಹಿ ಸಾಧೂನಾ ಮಾಪದ್ಧರ್ಮಸ್ಥ ಲಕ್ಷಣಮ್ |
ಅನುಕ್ರೋಶಶ್ಚ ಸಾಧೂನಾಂ ಸದಾ ಪ್ರೀತಿಂ ಪ್ರಯಚ್ಛತಿ ||

(ಮಹಾಭಾರತ. ಅನುಶಾಸನಪರ್ವ. ಅ. ೫, ಶ್ಲೋ. ೨೮).

"ಅನುಕ್ರೋಶವೇ (clemency) ಸಾಧುಗಳ ಸನ್ಯಾಸಾಶ್ರಮದ ಲಕ್ಷಣ; ಅನುಕ್ರೋಶವು ಸಾಧುಗಳ ಪ್ರೀತಿಯನ್ನು ಸದಾ ಸಂಪಾದಿಸಿಕೊಡುವುದು."

ನ ಕಾಮಯೇಽಹಂ ಗತಿಮೀಶ್ವರಾತ್ಪರಾ
ಮಷ್ಟರ್ಧಿಯುಕ್ತಾಮಪುನರ್ಭವಂ ವಾ ।
ಆರ್ತಿಂ ಪ್ರಪದ್ಯೇಽಖಿಲದೇಹಭಾಜಾ
ಮಂತಃಸ್ಥಿತೋ ಯೇನ ಭವಂತ್ಯದುಃಖಾಃ ॥
ಕ್ಷುತ್ತೃಟ್ಛ್ರಮೋ ಗಾತ್ರಪರಿಭ್ರಮಶ್ಚ
ದೈನ್ಯಂ ಕ್ಲಮಃ ಶೋಕವಿಷಾದಮೋಹಾಃ ।
ಸರ್ವೇ ನಿವೃತ್ತಾಃ ಕೃಪಣಸ್ಯ ಜನ್ತೋ
ರ್ಜಿಜೀವಿಷೋರ್ಜೀವಜಲಾರ್ಪಣಾನ್ಮೇ ॥

(ವಿಷ್ಣು ಭಾಗವತ, ಸ್ಕಂ. ೯. ಅ. ೨೧, ಶ್ಲೋ. ೧೨, ೧೩).

(ಇದರ ಪರಿವರ್ತನವು ೨೪೦ ನೆಯ ಪುಟದಲ್ಲಿದೆ).

ಇದು ಸನಾತನ ಧರ್ಮದೀಪಿಕೆಯಲ್ಲಿ ನೀತಿಪ್ರಕಾಶಿಕೆಯೆಂಬ ತೃತೀಯ ಭಾಗದಲ್ಲಿ ಲಘುಸಂಗಧರ್ಮ ವಿವರಣೆಯೆಂಬ ದಶಮಾಧ್ಯಾಯ.



# ತೃತೀಯ ಭಾಗ.

## ಏಕಾದಶಾಧ್ಯಾಯ.

---

### ಧರ್ಮಾಧರ್ಮ ಪ್ರತಿಫಲ ವಿಚಾರ.



ಅನೇಕ ಧರ್ಮಗಳನ್ನೂ ಅಧರ್ಮಗಳನ್ನೂ ಬೇರೆ ಬೇರೆಯಾಗಿ ವಿಚಾರಮಾಡಿ, ಅನೇಕ ದೃಷ್ಟಾಂತಗಳ ಮೂಲಕವಾಗಿ ಧರ್ಮಗಳು ಸುಖಕ್ಕೊಯ್ಯುವುವೆಂಬುದನ್ನೂ ಅಧರ್ಮಗಳು ದುಃಖಕ್ಕೊಯ್ಯುವುವೆಂಬುದನ್ನೂ ತಿಳಿದವರಾಗಿದೇವೆ. ನಾವು ಆಚರಿಸುವ ಧರ್ಮವು ಇತರರಲ್ಲಿ ಹೇಗೆ ಧರ್ಮವನ್ನು, ಅಧರ್ಮವು ಅಧರ್ಮವನ್ನು, ಹುಟ್ಟಿಸುವುದೋ ಅದನ್ನು ತಿಳಿದು, ಇತರರನ್ನು ಹೇಗೆ ಋತಚಿಂತೆಗೂ ಕ್ರಿಯೆಗೂ ಒಯ್ದು ಅವರಿಗೆ ಸುಖವನ್ನುಂಟುಮಾಡಬಹುದೋ ಆ ರೀತಿಯನ್ನು ಈಗ ಕೊನೆಯಲ್ಲಿ ಕಲಿಯಲವಶ್ಯಕವಾಗಿದೆ. ವಿಶ್ವಾಸದಿಂದ ವಿಶ್ವಾಸವೇ ಹುಟ್ಟುವುದು, ಅವಿಶ್ವಾಸದಿಂದ ಅವಿಶ್ವಾಸವೇ ಹುಟ್ಟುವುದು. ಇತರರು ಏನನ್ನು ಅನುಭವಿಸುತ್ತಾರೆಯೋ ಅದನ್ನು ನಾವೂ ಅನುಭವಿಸುವರಾಗುತ್ತೇವೆ. ಕೋಪದಲ್ಲಿರುವವನು ಸುತ್ತಮುತ್ತ ಇರುವವರಲ್ಲಿಯೂ ಕೋಪವನ್ನೇ ಹುಟ್ಟಿಸುತ್ತಾನೆ ; ಕದನಗಳು ಹುಟ್ಟುವುವು, ಮತ್ತು ಮತ್ತೂ ಬಳೆಯುವುವು. ಕೋಪದ ಮಾತು ಕೋಪದ ಮಾತನ್ನೇ ಪ್ರತ್ಯುತ್ತರವಾಗಿ ತರುವುದು, ಮತ್ತು ಆ ಕೋಪದ ಪ್ರತ್ಯುತ್ತರವು ಇನ್ನಿಷ್ಟು ರೋಷವನ್ನುಂಟುಮಾಡುವುದು ; ಹೀಗೆ ರೋಷವು ಹೆಚ್ಚು ಹೆಚ್ಚುತ್ತಲೇ ಹೋಗುತ್ತದೆ. ಮೃದುವಚನಗಳಿಗೆ ಪ್ರತಿಯಾಗಿ ಮೃದುವಚನಗಳೇ ಬರುತ್ತವೆ. ಕರುಣವು ಕರುಣವನ್ನೇ ಹುಟ್ಟಿಸುತ್ತದೆ, ಸತ್ಕಾರ್ಯಗಳು ಸತ್ಕಾರ್ಯಗಳನ್ನೇ ಪ್ರತಿಯಾಗಿ ಹುಟ್ಟಿಸುವುವು.

ಈ ವಿಷಯವನ್ನು ನಾವು ಸರಿಯಾಗಿ ಗ್ರಹಿಸಿ ಮನಸ್ಸಿನಲ್ಲಿಟ್ಟುಕೊಂಡಿದ್ದರೆ, ಇತರರು ನಮ್ಮನ್ನು ಅಸದ್ಭಾವದಿಂದ ಕಂಡಾಗ, ನಾವೂ ಅವ

ರನ್ನು ಅಸದ್ಭಾವದಿಂದ ಕಾಣುವುದನ್ನು ಬಿಟ್ಟು, ಅವರ ಅಸದ್ಭಾವಗಳಿಗೆ ನಮ್ಮ ಸದ್ಭಾವಗಳನ್ನೊಡ್ಡಿ, ಅವರ ಅಸದ್ಭಾವಗಳನ್ನು ಜಯಿಸಬಹುದು. ಒಬ್ಬನು ಕೋಪದಿಂದ ನಮಗೆ ಮಾತನಾಡುವಾಗ ನಾವೂ ಕೋಪದಿಂದ ಮಾತನಾಡಬೇಕೆಂದು ನಮ್ಮ ಮನಸ್ಸಿಗೆ ತೋರಿದರೆ, ನಮ್ಮ ಮನಸ್ಸನ್ನು ಬಿಗಿಹಿಡಿದು, ಬಹು ಮೃದುವಾಗಿ ನಾವು ಮಾತನಾಡಬೇಕು ; ಈ ಮೃದು ವಚನವು ಅವನನ್ನು ಸಮಾಧಾನ ಪಡಿಸಿ ಅವನ ಕೋಪವನ್ನು ಇಳಿಸು ವುದು. ಕೆಟ್ಟದಕ್ಕೆ ಒಳ್ಳಿತನ್ನು ಕೊಡುವುದೆಂದರೆ ಇದು. ಹುಟ್ಟಿದ್ದ ಮನಃ ಕಷಾಯವನ್ನು ಹೋಗಲಾಡಿಸಿ ಸರ್ವರಿಗೂ ಸುಖವನ್ನುಂಟುಮಾಡಲು ಇದೊಂದೇ ದಾರಿಯಿದೆಯಲ್ಲದೆ ಮತ್ತಾವ ದಾರಿಯೂ ಇಲ್ಲ.

ಕೌರವರು ಯುಧಿಷ್ಠಿರನನ್ನು ನಿಷ್ಕರುಣೆಯಿಂದ ಮೋಸಗೊಳಿಸಿ ಅವನ ರಾಜ್ಯ ಕೋಶಗಳನ್ನೆಲ್ಲಾ ಕಸಿಮುಕೊಂಡಾಗ, ದ್ರೌಪದಿಯು ಅವನಿಗೆ ಯುದ್ಧಮಾಡಿ ಸಕಲವನ್ನೂ ಗೆದ್ದುಕೋ ಎಂದು ಪ್ರೇರಿಸಿದಳಲ್ಲವೆ ? ಆಗ ಧರ್ಮಜ್ಞನಾದ ಯುಧಿಷ್ಠಿರನು, ಹಾಗೆ ಮಾಡಕೂಡದು, ಕೆಡಕಿಗೆ ಪ್ರತಿಯಾಗಿ ಕೆಡಕನ್ನೇ ಮಾಡಿದರೆ, ಕೆಡಕು ಬಳೆವುದೇ ಹೊರತು ಮತ್ತೇ ನೂ ಆಗದು ಎಂದು, "ಹಿಂಸೆಗೊಳಗಾದಾಗಲೂ ಕೂಡ ಯಾವನು ಕೋ ಪಕ್ಕೆ ಅಸ್ಪದವನ್ನು ಕೊಡದೆ, ತನ್ನ ಹಿಂಸಕನನ್ನು ಉದಾಸೀನ ಭಾವದಿಂದ ಕಾಣುವನೋ ಅವನು ಪರಲೋಕದಲ್ಲಿ ಪರಮ ಸುಖಿಯಾಗುವನು. ಹೀ ಗಾಗುವುದರಿಂದಲೇ, ತನ್ನ ಹಿಂಸಕನು ಕಷ್ಟಕ್ಕೆ ಗುರಿಯಾಗಿರುವಾಗಲೂ ಕೂಡ, ಧರ್ಮಜ್ಞನು, ತಾನು ಬಲಶಾಲಿಯೇ ಆಗಲಿ ಬಲಹೀನನೇ ಆಗಲಿ, ಅವನನ್ನು ಕ್ಷಮಿಸಬೇಕೆಂದು ಹಿರಿಯರು ಹೇಳಿರುತ್ತಾರೆ. ಕ್ಷಮಾಗುಣ ದಲ್ಲಿ ಭೂದೇವಿಗೆ ಸಮನಾದವರು ಮಾನವರಲ್ಲಿ ಕೆಲಬರೂ ಇಲ್ಲದಿದ್ದ ಪಕ್ಷಕ್ಕೆ, ಮಾನವ ಕುಲದಲ್ಲಿ ನಿಷ್ಕಲಹ ಕಾಲವೆಂಬುದು ಇಲ್ಲದೆ, ಕ್ರೋಧ ಜನ್ಯಗಳಾದ ಕಲಹಗಳು ಅಂತ್ಯವಿಲ್ಲದೆ ಬಳೆಯುತ್ತಿದ್ದುವು. ನೊಂದವನು ಮರಳಿ ನೋವನ್ನೇ ಉಂಟುಮಾಡುವುದಾದರೆ, ಹಿರಿಯನಿಂದ ಶಿಕ್ಷಿತನಾದ ವನು ತನ್ನ ಹಿರಿಯನನ್ನೇ ಶಿಕ್ಷಿಸುವುದಾದರೆ, ಸರ್ವಭೂತನಾಶನವೇ ಪರಿ ಣಾಮವಾಗಿ, ಅಧರ್ಮವೇ ಜಗತ್ತನ್ನೆಲ್ಲಾ ಆಳುವುದು. ಪರನಿಂದ ತನಗೆ ಬಂದ ದುಷ್ಟವಾಕ್ಕನ್ನು ಮಾನವನು ಹಿಂದಕ್ಕೆ ತಿರುಗಿಸಿ ಕಳುಹಿಸುವನಾದರೆ

ನೊಂದವನು ಪ್ರತಿಯಾಗಿ ನೋಯಿಸುವನಾದರೆ, ದಂಡಿಸಲ್ಪಟ್ಟವನು ಇದಿರಾಂತು ನಿಂತು ಪ್ರತಿಯಾಗಿ ದಂಡಿಸುವನಾದರೆ, ತಂದೆಯರು ಪುತ್ರರನ್ನು ಕೊಲ್ಲುವರು, ಪುತ್ರರು ತಂದೆಯರನ್ನು ಕೊಲ್ಲುವರು, ಪತಿಯರು ಪತ್ನಿಯರನ್ನು ಕೊಲ್ಲುವರು, ಪತ್ನಿಯರು ಪತಿಯರನ್ನು ಕೊಲ್ಲುವರು ; ಹೀಗಾದರೆ, ಓ ಕೃಷ್ಣೆ, ಕೋಪಮಯವಾದ ಇಂತಹ ಜಗತ್ತಿನಲ್ಲಿ ಜನನ ವೆಂತು ತಾನೇ ಆದೀತು ? "ಸ್ನೇಹದಿಂದಲೇ ಪ್ರಜಾವೃದ್ಧಿ" ಎಂಬುದನ್ನು ನೀನು ತಿಳಿಯುವಳಾಗು" ಎಂದು ಧರ್ಮಪ್ರಸಂಗವನ್ನು ಮಾಡಿದನು. (ಮಹಾಭಾರತ. ವನಪರ್ವ. ಅ. ೨೯, ಶ್ಲೋ. ೧೩-೨೯).

ದಶರಥ ಮಹಾರಾಜನು ಮೃದುವಾದ ನಮ್ರತೆಯಿಂದ ತನ್ನರಾಣಿಯ ಕ್ರೋಧವನ್ನು ದೂರಮಾಡಿದ ತೆರವನ್ನು ಕೇಳಿರಿ. ವರುಷಾಂತರಗಳವರೆಗೂ ಕಾಡಪಾಲು ಮಾಡಿ, ತನ್ನ ತೋಳಿನಿಂದ ಅನುಪಮನಾದ ತನ್ನ ಪ್ರೇಮದ ಬಾಲನನ್ನು ಸೆಳೆದುಕೊಂಡು ಹೋದುದಕ್ಕಾಗಿ ವಿಷಾದಿಸುತ್ತಾ, ರಾಮಚಂದ್ರನ ತಾಯಿಯಾದ ಕೌಸಲ್ಯಾ ದೇವಿಯು ತನ್ನ ಪತಿಯಾದ ದಶರಥ ಮಹಾರಾಜನಿಗೆ ತಾನಂದಿನವರೆಗೂ ಆಡದಿದ್ದ ಕರ್ಣಕಠೋರವಾಕ್ಕುಗಳನ್ನು ಆಡುವಳಾದಳು. "ನಿರಪರಾಧಿಯಾದ ನಿನ್ನ ಪುತ್ರನನ್ನು ನಿನ್ನ ಕೈಯಿಂದಲೇ ಕೊಂದೆಯೋ ಭೂಪ! ಎಷ್ಟೋ ಕಷ್ಟದಿಂದ ನಿನ್ನ ಪೂರ್ವಿಕರು ಪಾಲಿಸಿಕೊಂಡು ಬಂದ ಆ ಸನಾತನ ಮಾರ್ಗವನ್ನು ಚೆನ್ನಾಗಿ ಮೆಟ್ಟಿದೆಯೋ, ರಾಜ ! ಹೆಂಗಸರಿಗೆ ಪತಿಯೇ ಮೊದಲನೆಯ ದಿಕ್ಕು, ಪುತ್ರನು ಎರಡನೆಯ ದಿಕ್ಕು, ಬಂಧು ಜನರು ಮೂರನೆಯ ದಿಕ್ಕು, ನಾಲ್ಕನೆಯ ದಿಕ್ಕಿಲ್ಲವೇ ಇಲ್ಲ. ನೀನು ನನ್ನನ್ನು ತೊರೆದೆ, ರಾಮಚಂದ್ರನು ಕಾಡಿಗೆ ಹೋದ, ಅವನೆಡೆಗೆ ಹೋಗುವೆನೆಂದರೆ, ನಿನ್ನನ್ನು ಇಲ್ಲಿ ಬಿಡಲಾರೆ. ಎಲ್ಲಾ ವಿಧದಲ್ಲಿಯೂ ನನ್ನನ್ನೂ ಮುಳುಗಿಸಿದೆ, ರಾಜ್ಯವನ್ನೂ ಪ್ರಜೆಗಳನ್ನೂ ಮುಳುಗಿಸಿದೆ" ಎಂದಾಡಿದಳು. ರಾಜನು ಈ ಕ್ರೂರ ವಚನಗಳನ್ನು ಕೇಳಿದನು. ಮೊದಲಿದ್ದ ವ್ಯಸನಕ್ಕಿಂತಲೂ ಹೆಚ್ಚಾದ ವ್ಯಸನವುಳ್ಳವನಾಗಿ ಕುಗ್ಗಿ ಹೋದನು. ಅವನ ಮನಸ್ಸೆಲ್ಲಾ ಉಲ್ಲೋಲ ಕಲ್ಲೋಲವಾಯಿತು, ಮತ್ತು ಮೂರ್ಛೆಹೋದನು. ಸ್ವಲ್ಪ ಕಾಲದಮೇಲೆ ಎಚ್ಚೆತ್ತು, ಕೌಸಲ್ಯಾ ದೇವಿಯು ಇನ್ನೂ ತನ್ನ ಬಳಿಯಲ್ಲಿಯೇ ಇರುವುದನ್ನು ಕಂಡನು. ತಾನು

ಯಾವಪಾಪವನ್ನು ಮಾಡಿದುದಕ್ಕೆ ಈ ವ್ಯಥೆಯು ಫಲವಾಗಿತ್ತೋ ಆ ಪಾಪವು ಸ್ಮರಣೆಗೆ ಬಂತು. ಆ ಪಾಪದ ಮತ್ತು ರಾಮಚಂದ್ರನಿಲ್ಲದ ಎರಡೂ ಬಗೆಯ ಪರಿತಾಪದಿಂದ ಪರಿತಪ್ತನಾಗಿ, ನಡುಗುತ್ತಾ, ಕೈಗಳನ್ನು ಜೋಡಿಸಿ, ತಲೆಯನ್ನು ತಗ್ಗಿಸಿ,—"ಓ ಕೌಸಲ್ಯೆ, ನನ್ನನ್ನು ಕ್ಷಮಿಸು, ನಿನಗಾಗಿ ಕರಗಳನ್ನು ಜೋಡಿಸಿ ಬೇಡುತ್ತೇನೆ. ಮೃದುವಾದ ಹೃದಯವುಳ್ಳವಳಾಗಿ ಸದಾ ಇದ್ದೆ, ಪರರಿಗೂ ಹಾಗೆಯೇ ಇದ್ದೆ. ನಿನ್ನ ಪತಿಯು ವಿಷಯದಲ್ಲಿ, ಅವನು ಸಭ್ಯನಾದರೂ ಆಗಲಿ ಅಸಭ್ಯನಾದರೂ ಆಗಲಿ, ನಿನಗೆ ಸ್ಮರಣೆಯಿರಲಿ. ಆಗಲೇ ನನ್ನ ವ್ಯಸನದಿಂದ ನಾನೆಷ್ಟೋ ಖಿನ್ನನಾಗಿದೇನೆ ವ್ಯಥೆ ಪಡುತ್ತಾ ನೀನಿರುವುದಾದರೂ, ನನಗೆ ಕಠಿನೋಕ್ತಿಗಳನ್ನಾಡದಿರು" ಎಂದನು. ನಮ್ರನಾದ ರಾಜನ ಈ ಪಶ್ಚಾತ್ತಾಪದ ನುಡಿಗಳನ್ನು ಕೇಳಿದ ಕೂಡಲೇ, ಕೌಸಲ್ಯೆಯ ಕಣ್ಣುಗಳಿಂದ ಕಾರುಣ್ಯದ ಬಾಷ್ಪಗಳು ಜಲಪಾತದೆಡೆಯಿಂದ ಮಳೆಯ ಹೊಸನೀರು ನುಗ್ಗಿ ಬರುವಂತೆ ಬಂದುವು. ಅವಳ ಕೋಪವು ತೊಟ್ಟನೆ ಮಾಯವಾಯಿತು. ಅದರ ಸ್ಥಾನದಲ್ಲಿ ಮಹಾನಮ್ರತೆಯೂ, ವ್ಯಸನವೂ, ತಾನಾಡಿದ ಕಠಿನೋಕ್ತಿಗಳಿಂದ ತನಗೆ ಪಾಪವುಂಟಾಯಿತೆಂಬ ಭಯವೂ ತಲೆದೋರಿದುವು. ರಾಜನ ಕೈಗಳನ್ನು ತೆಗೆದು ತನ್ನ ತಲೆಯಮೇಲೆ ಇಟ್ಟುಕೊಂಡವಳಾಗಿ, ಮಹಾ ದುಗುಡದಿಂದ—"ಎಲೈ ಒಡೆಯನೇ, ನನ್ನನ್ನು ಮನ್ನಿಸು ಮನ್ನಿಸು. ನಿನ್ನ ಪಾದ ಪದ್ಮಗಳಲ್ಲಿ ನನ್ನ ಶಿರಸ್ಸನ್ನೊಡ್ಡಿ ನಿನ್ನನ್ನು ಬೇಡುತ್ತಿದ್ದೇನೆ. ಕ್ಷಮಿಸೆಂದು ನಿನ್ನನ್ನು ನಾನು ಬೇಡಬೇಕು, ನನ್ನನ್ನು ನೀನು ಬೇಡಲಾಗದು, ಏಕೆಂದರೆ ನನಗೆ ಮಹಾ ಪಾಪವು ಪ್ರಾಪ್ತವಾಗುವುದು. ತನ್ನನ್ನೇ ಬೇಡುವಂತೆ ತನ್ನ ಗಂಡನನ್ನು ಇಟ್ಟಿರುವ ಹೆಂಗಸು ಪ್ರಾಜ್ಞರಿಂದ ಇಹದಲ್ಲಿಯೇ ಆಗಲಿ ಪರದಲ್ಲಿಯೇ ಆಗಲಿ, ಸನ್ಮಾನಿತಳಾಗಳು. ನನಗೆ ಧರ್ಮಜ್ಞಾನವಿದೆ ; ನಿನಗೂ ಆ ಜ್ಞಾನವಿದೆಯೆಂಬುದನ್ನು ನಾನು ಬಲ್ಲೆ ; ಹಾಗಿದ್ದುದರಿಂದಲೇ ನಿನ್ನ ಮಾತಿನಂತೆ ನೀನು ನಡೆದು ಸತ್ಯವನ್ನು ಕಾಪಾಡಿದೆ. ಮನಸ್ಸಿಗೆ ಬಲವಿಲ್ಲದಿದ್ದ ಕಾಲದಲ್ಲಿ ನನ್ನ ಮಗನ ವ್ಯಸನವು ಆ ಕಠಿನೋಕ್ತಿಗಳನ್ನಾಡುವಂತೆ ಮಾಡಿತು. ವ್ಯಸನವು ಸ್ಥೈರ್ಯವನ್ನು ಹಾಳುಮಾಡುವುದು ; ವ್ಯಸನವು ವಿವೇಕವನ್ನು ಹಾಳುಮಾಡುವುದು. ವ್ಯಸನದಂತಹ ಶತ್ರುವೇ ಇಲ್ಲ. ನನ್ನ ಮುದ್ದಿನ ಕಂದನನ್ನು ನೆನೆ

ದಾಗೆಲ್ಲಾ, ವ್ಯಸನವು, ನನ್ನ ಹೃದಯದಲ್ಲಿ, ಮಳೆಯಿಂದ ನದಿಯುಬ್ಬುವ ತೆರದಲ್ಲಿ, ಉಬ್ಬುವುದು" ಎಂದು ನುಡಿದಳು. (ರಾಮಾಯಣ. ಅಯೋಧ್ಯಾಕಾಂಡ. ಅ. ೬೦—೬೧). ಕೌಸಲ್ಯೆಯ ಕಾಠಿನ್ಯವನ್ನು ದಶರಥನು ಈ ರೀತಿಯಲ್ಲಿ ತನ್ನ ಮಧುರವಾದ ನಮ್ರತೆಯಿಂದಲೂ ತಾಳ್ಮೆಯಿಂದಲೂ ಗೆದ್ದನು. ಅವಳ ಕಠಿನೋಕ್ತಿಗಳಿಗೆ ಪ್ರತಿಯಾಗಿ ಇವನೂ ಕಠಿನೋಕ್ತಿಗಳನ್ನೇ ಆಡಿದ್ದರೆ, ಜಗಳವು ಬಳೆದು, ವ್ಯಾಕುಲದಿಂದಿಬ್ಬರೂ ಒಬ್ಬರನ್ನೊಬ್ಬರು ತೊರೆಯುತ್ತಿದ್ದರು. ಆದರೆ ಅವನು ಹಾಗೆ ಮಾಡಲಿಲ್ಲ. ಅವಳ ಗರ್ವಕ್ಕೆ ಸಾಧುತ್ವವನ್ನು, ಅವಳ ವಾಗ್ದಂಡನೆಗೆ ನಮ್ರತೆಯನ್ನು, ಅವಳ ಕ್ರೋಧಕ್ಕೆ ಅಕ್ರೋಧವನ್ನು ಒಡ್ಡಿದುದರಿಂದ, ಅವಳಲ್ಲಿಯೂ ಸಾಧುತ್ವವೂ ನಮ್ರತೆಯೂ ಅಕ್ರೋಧವೂ ಉಂಟಾದುವು.

ರಾಮಚಂದ್ರನು ಭರತನಲ್ಲಿ ತನಗಿದ್ದ ನಂಬಿಕೆಯನ್ನು ತೋರಿಸಿ ಭರತನ ವಿಷಯದಲ್ಲಿ ಲಕ್ಷ್ಮಣನಿಗೆ ಇದ್ದ ಅಪನಂಬಿಕೆಯನ್ನು ಹೋಗಲಾಡಿಸಿ, ಲಕ್ಷ್ಮಣನ ಮನಸ್ಸಿನಲ್ಲಿಯೂ ನಂಬಿಕೆಯನ್ನು ಹುಟ್ಟಿಸಿದನು. ಪತ್ನಿಯನ್ನೂ ಭ್ರಾತೃವನ್ನೂ ಒಡಗೂಡಿ, ತಂದೆಯ ಮಾತನ್ನು ರಕ್ಷಿಸುವುದಕ್ಕಾಗಿ, ರಾಮಚಂದ್ರನು ಅಯೋಧ್ಯೆಯಿಂದ ಹೊರಟು, ಅರಣ್ಯಕ್ಕೆ ಹೋಗಿ, ಅಲ್ಲಿ ವಾಸಮಾಡುತ್ತಿರುವಾಗ, ಅವುದೋ ಒಂದು ದಂಡು ದೂರದಲ್ಲಿ ಬರುತ್ತಿದ್ದಂತೆ ಶಬ್ದವು ಕೇಳಬರಲು, ಲಕ್ಷ್ಮಣನನ್ನು ಕರೆದು ಒಂದು ಮರವನ್ನೇರಿ ನೋಡುವಂತೆ ಹೇಳಿದನು. ದೊಡ್ಡಗುಂಪೊಂದನ್ನು ಜತೆಯಲ್ಲಿ ಕಟ್ಟಿಕೊಂಡು ಭರತನು ಬರುತ್ತಿರುವುದನ್ನು ಲಕ್ಷ್ಮಣನು ಕಂಡನು. ದೇಶೋಚ್ಚಾಟನದಿಂದ ಮನಸ್ಸಿನಲ್ಲಿ ಹುಟ್ಟಿದ್ದ ಕ್ರೋಧವು ಭರತನ ವಿಷಯದಲ್ಲಿ ಅನುಮಾನಪಡುವಂತೆ ಮಾಡಿತು. ಲಕ್ಷ್ಮಣನು ಅವಸರವಸರದಲ್ಲಿ ರಾಮನೆಡೆಗೆ ಬಂದು, ಕೋಪಯುಕ್ತನಾಗಿ—"ತನ್ನ ರಾಜ್ಯಾಧಿಪತ್ಯವನ್ನು ಸ್ಥಿರಪಡಿಸಿಕೊಳ್ಳಬೇಕೆಂದು ಭರತನು ನಮ್ಮನ್ನು ಕೊಲ್ಲುವುದಕ್ಕೆ ಬರುತ್ತಿದಾನೆ; ಬೇಗನೆ ಯುದ್ಧಸನ್ನದ್ಧನಾಗು" ಎಂದು ನುಡಿದನು. ರಾಮನಿಗಾದರೊ ಭರತನ ವಿಷಯದಲ್ಲಿ ಸಂಪೂರ್ಣವಿಶ್ವಾಸವಿತ್ತು, ಕೋಪವೆಂಬುದಿರಲೇ ಇಲ್ಲ. "ಅವನಲ್ಲಿ ಅಪನಂಬಿಕೆಯನ್ನು ನೀ ಇಡದಿರು. ಎಲೈ ಭರತನೇ, ಈ ರಾಜ್ಯವನ್ನೆಲ್ಲಾ ಲಕ್ಷ್ಮಣನಿಗೆ ಕೊಡುವನಾಗು ಎಂದು ನಾನು ಹೇಳುವುದಾದರೆ,

"ಆಗಲಿ" ಎಂದು ಅವನು ಒಂದೇ ಒಂದುತ್ತರವನ್ನು ಕೊಡುವನಾಗುತ್ತಾನೆ" ಎಂದು ರಾಮನು ಲಕ್ಷ್ಮಣನಿಗೆ ಹೇಳಿದ ಕೂಡಲೆ, ಲಕ್ಷ್ಮಣನಿಗೆ ಬಹಳ ನಾಚಿಕೆಯುಂಟಾಯಿತು. ಭರತನು ಬಂದು, ಅಯೋಧ್ಯೆಗೆ ತಾವು ದಯಮಾಡಬೇಕೆಂದು ರಾಮನನ್ನು ಬಗೆಬಗೆಯಲ್ಲಿ ಬೇಡಿದನು. ತಂದೆಯಮಾತಿಗೆ ಲವಲೇಶವೂ ವಿರೋಧವಾಗಿ ತಾನು ನಡೆಯುವವನಲ್ಲವೆಂದು ರಾಮನು ಹೇಳಿಬಿಟ್ಟನು. ಆಗ ಭರತನು ರಾಮನ ಪಾದುಕೆಗಳನ್ನು ಕೇಳಿ, ಸಂಭ್ರಮದಿಂದ ತೆಗೆದುಕೊಂಡುಹೋಗಿ, ಅವುಗಳನ್ನು ಸಿಂಹಾಸನದಲ್ಲಿ ನ್ಯಾಯತಃ ರಾಜನಾದ ರಾಮನ ಗುರುತಿಗಾಗಿ ಪ್ರತಿಷ್ಠಿಸಿ, ರಾಮನಿಗೆ ಪ್ರತಿನಿಧಿಯಾಗಿ ರಾಮನ ಹೆಸರಿನಲ್ಲಿ ಅರಣ್ಯವಾಸದ ಹದಿನಾಲ್ಕು ವರುಷಗಳವರೆಗೆ ರಾಜ್ಯದ ಆಡಳಿತಗಳನ್ನು ನಡೆಯಿಸುವವನಾದನು. (ರಾಮಾಯಣ. ಅಯೋಧ್ಯಾಕಾಂಡ. ಅ. ೧೪).

ಅಜ್ಞಾತವಾಸದ ಕಾಲದಲ್ಲಿ ಯುಧಿಷ್ಠಿರನ ತಮ್ಮಂದಿರೂ ದ್ರೌಪದಿಯೂ, ತಾಳ್ಮೆಯಿಲ್ಲದೆ ಧೈರ್ಯಗುಂದಿದವರಾಗಿ ಯುಧಿಷ್ಠಿರನನ್ನು ಕುರಿತು,— "ಅಧರ್ಮವು ನಡೆದರೂ ಧರ್ಮರಾಜನೆನಿಸಿಕೊಂಡ ನೀನು ಅಲಕ್ಷ್ಯದಿಂದ ಸುಮ್ಮನಿದ್ದೀಯೆ ; ಕೌರವರ ಸಂಗಡ ಆದ ಒಪ್ಪಂದವು ಅನ್ಯಾಯ" ಎಂದು ಅನೇಕಾವರ್ತಿ ತಪ್ಪನ್ನು ಹೊರಿಸಿದರು. ಆ ಧರ್ಮಿಷ್ಟನು ಅಷ್ಟೂಸಾರಿ, ತನ್ನ ವಿಶ್ವಾಸಕ್ಕೆ ಪಾತ್ರರಾದವರು ಆಡಿದ ಹೀಯಾಳಿಕೆಯ ನುಡಿಗಳ ಹಿಂಸೆಯನ್ನು ಸಹಿಸಿಕೊಳ್ಳುತ್ತಾ, ಸತ್ಯಮಾರ್ಗಕ್ಕೆ ಅವರನ್ನು ಮಧುರ ವಚನದಿಂದ ತರುವನಾದನು. ಭೀಮಸೇನನು ಒಂದುವೇಳೆಯಲ್ಲಿ ಕ್ರೋಧಾವೇಶ ಪರವಶನಾಗಿ—"ಮೋಸದಿಂದ ಗೆದ್ದ ಜೂಜುಗಾರರಿಗೆ ಕೊಟ್ಟ ಮಾತದೊಂದನ್ನು ಪರಿಪಾಲಿಸುವೆನೆಂಬ ಅಲ್ಪಧರ್ಮವೊಂದನ್ನು ಇಟ್ಟುಕೊಂಡಿದ್ದೀಯೆ, ರಾಜ್ಯವೂ ಹೋಯಿತು, ಐಶ್ವರ್ಯವೂ ಹೋಯಿತು. ಕ್ಷಾತ್ರವೀರ್ಯವೇ ನಿನಗಿಲ್ಲ ; ಕ್ಷಾತ್ರ ಧರ್ಮಗಳನ್ನೂ ತೊರೆದೆ, ನಗೆಗೆ ಗುರಿಯಾದೆ" ಎಂದು ಹೋರಾಡಿದನು. ಯುಧಿಷ್ಠಿರನು ತಾಳ್ಮೆಯನ್ನು ತಂದುಕೊಂಡವನಾಗಿ, ಸ್ವಲ್ಪ ಕಾಲದವರೆಗೆ ಮೌನದಿಂದಿದ್ದು,—"ಎಲೈ ಭೀಮಸೇನನೇ, ನೀನಾಡುವುದೆಲ್ಲಾ ನಿಜವೆ ಅಹುದು ; ಸಾಯಕದಂತಹ ವಚನಗಳಿಂದ ನನ್ನನ್ನು ಘಾತಿಸಿ ನನಗೆ ಸಂಕಟವನ್ನುಂಟುಮಾಡುತ್ತಿದ್ದೀಯೆ ಎಂದು, ನಿನ್ನಮೇಲೆ ಆಕ್ಷೇಪಣೆಯನ್ನು

ನಾನು ಮಾಡಲೇ ಆರೆ ; ಏಕೆಂದರೆ, ನನ್ನ ಅವಿವೇಕದಿಂದಲೇ ನಿಮಗೆಲ್ಲಾ ಈ ದುರ್ದಶೆಯು ಪ್ರಾಪ್ತವಾಯಿತು. ನನ್ನ ಮನವನ್ನು ನಾನು ನಿಗ್ರಹಿಸ ಬೇಕಾಗಿತ್ತು : ದುರಹಂಕಾರಕ್ಕೂ, ದಂಭಕ್ಕೂ, ಗರ್ವಕ್ಕೂ ನಾನೊಳಪಡ ಬಾರದಾಗಿತ್ತು. ಗರಿಗೂಡಿದ ನುಡಿಗಳನ್ನು ನುಡಿಯುವೆಯೆಂದು ನಿನ್ನಮೇಲೆ, ಭೀಮಸೇನನೆ, ನಾನು ದೋಷವನ್ನು ಹೊರಿಸಲೇ ಆರೆ. ಎಂತೇ ಇದ್ದರೂ, ಮಾತನ್ನು ಕೊಟ್ಟದೇನೆ; ಕೊಟ್ಟ ಮಾತನ್ನು ಮೀರಲು ಆರಿಂದತಾನೇ ಸಾಧ್ಯ ? ಒಂದು ಸುಳ್ಳಿನಿಂದ ಒಂದು ರಾಜ್ಯವನ್ನು ಗೆಲ್ಲುವುದಕ್ಕಿಂತ ಪ್ರಾಣ ವನ್ನಾದರೂ ನೀಗಬಹುದು.* ಹೀಗಿರುವಲ್ಲಿ ಈ ಕಠಿನೋಕ್ತಿಗಳನ್ನು ನನ ಗಾಡಿದುದರಿಂದ ಫಲವೇನು ? ನನ್ನಿಂದಾದ ಸಂಕಟಗಳನ್ನು ನೋಡಿ ನೋಡಿ ನನ್ನೆದೆಯೊಡೆಯುತ್ತಿದೆ. ಆದರೂ ಕೊಟ್ಟ ಮಾತನ್ನು ಮುರಿದೊಕ್ಕಲಿಕ್ಕ ಲಾರೆನು. ಎಲೋ ತಮ್ಮ, ಬಿತ್ತಿದವನು ಫಲಕ್ಕೆ ಕಾಯ್ದಿರುವಂತೆ, ಒಳ್ಳೆ ಯಕಾಲ ಬರುವುದನ್ನು ನೀನೂ ಕಾಯ್ದಿರು. ಎಲೈ ಭೀಮನೆ, ನನ್ನ ಮಾತು ಅಸತ್ಯಾಗಕೂಡದೆಂದು ತಿಳಿ. ಸದ್ಧರ್ಮವು ಪ್ರಾಣಕ್ಕಿಂತಲೂ ಮೇಲು, ಸ್ವರ್ಗ ದ ವೈಭವಗಳಿಗಿಂತಲೂ ಮೇಲು. ರಾಜ್ಯಸಂಪತ್ತು, ಪುತ್ರಸಂಪತ್ತು, ಯಶ ಸ್ಸಿನಸಂಪತ್ತು, ಧನಸಂಪತ್ತು—ಇವೆಲ್ಲವು ಸೇರಿದರೂ ಸತ್ಯವೆಂಬ ಸಂಪತ್ತಿ ನಲ್ಲಿ ವೀಸಪಾಲಷ್ಟು ಆಗಲರಿಯವು" ಎಂದು ಪ್ರವಚಿಸಿದನು. ಹೀಗೆ ಯುಧಿಷ್ಠಿರನು ತನ್ನ ತಮ್ಮಂದಿರ ಕೋಪದ ಎಗತಾಳಿ ಮಾತುಗಳನ್ನು ತಾಳ್ಮೆ ಯಿಂದ ಸಹಿಸುವನಾದನು ; ಕಠಿನವಾದ ಅವರ ದೋಷಾರೋಪಣೆಗೆ ಮೃದು ವಾದ ತನ್ನ ನಮ್ರತೆಯನ್ನೊಡ್ಡಿದನು ; ಕ್ರೋಧಕ್ಕೆಂದೂ ಸಗ್ಗದವರಾಗಿದ್ದ ತನ್ನ ಗರ್ವಿಷ್ಟರಾದ ತಮ್ಮಂದಿರನ್ನು ವಿಶ್ವಾಸದ ನುಡಿಗಳಿಂದ ಬಗ್ಗಿಸಿಕೊಳ್ಳು ವನಾದನು. (ಮಹಾಭಾರತ. ವನಪರ್ವ. ಅ. ೩೩-೩೪).

ಕರುಣೆಯಿಂದೊಡಗೂಡಿದ ಅನುತಾಪವು ಹೇಗೆ ವಿಶ್ವಾಸವನ್ನು ಹುಟ್ಟಿಸುವುದೋ ಹಾಗೆಯೇ ಯೋಚನೆಯಿಲ್ಲದ ಅಪಹಾಸ್ಯವು ದ್ವೇಷವನ್ನು ಹುಟ್ಟಿಸುತ್ತದೆ ; ದ್ವೇಷವು ತನ್ನ ಅವಧಿಯಲ್ಲಿ ಅನೇಕ ಕೆಡಕುಗಳನ್ನು ಹುಟ್ಟಿಸುತ್ತದೆ. ಯುಧಿಷ್ಠಿರನ ಕೀರ್ತಿಯು ದಿಗಂತವಿಶ್ರಾಂತವಾಗಿ ಹರ ಡಿತ್ತು ; ಮತ್ತು ಜನರೆಲ್ಲರೂ ಅವನ ರಾಜಸೂಯಯಾಗದ ಮಹೋತ್ಸವ ವನ್ನು ಹೊಗಳುತ್ತಿದ್ದರು. ತನ್ನ ಪರಮದ್ವೇಷಿಯಾದವನನ್ನು ಕುರಿತಿದ್ದ

ಈ ಸ್ತೋತ್ರಶ್ರವಣದಿಂದ ದುರ್ಯೋಧನನ ಹೃದಯವು ಅಸೂಯಾ ಭರಿತವಾಯಿತು ; ಭೀಮಾದಿಗಳು ವಿನೋದಕ್ಕೆಂದು ಹಿಂದೆ ಮಾಡಿದ್ದ ತುಂಟಾಟಗಳ ಸ್ಮರಣೆಯಿಂದ ಇವನ ಹೊಟ್ಟೆಯು ಉರಿ ಉದ್ದೀಪಿತವಾಯಿತು. ಇಂತಿರುವಲ್ಲಿ, ಒಂದಾನೊಂದು ದಿನ ಯುಧಿಷ್ಠಿರನು ಒಡ್ಡೋಲಗದಲ್ಲಿ ತನ್ನ ತಮ್ಮಂದಿರಿಂದ ಸುತ್ತಲ್ಪಟ್ಟವನಾಗಿ ಸಿಂಹಾಸನಾರೂಢನಾಗಿರುವಾಗ, ದುರ್ಯೋಧನನೂ ಅವನ ಸಹೋದರರೂ ಆಸ್ಥಾನ ಮಂಡಪವನ್ನು ಪ್ರವೇಶಿಸಿದರು. ದಾನವ ಶ್ರೇಷ್ಠನಾದ ಮಯನು ಆ ಅರಮನೆಯನ್ನೂ ಆಸ್ಥಾನ ಮಂಡಪವನ್ನೂ ಬಹು ಚಮತ್ಕಾರದಿಂದಲೂ ಯುಕ್ತಿಯಿಂದಲೂ ಕಟ್ಟಿದ್ದನು. ದುರ್ಯೋಧನನು ಮೋಸಹೋಗಿ ಸ್ಫಟಿಕಮಯ ಸರೋವರವನ್ನು ಜಲಮಯ ಸರೋವರವೆಂದು ಭ್ರಮಿಸಿದವನಾಗಿ, ತನ್ನ ಬಟ್ಟೆಗಳು ನನೆವುವೆಂದು ಅವುಗಳನ್ನು ಮೇಲಕ್ಕೆ ಮಾಡಿಕೊಂಡು ನಡೆದು, ಗಟ್ಟಿ ನೆಲದಂತೆಯೇ ಕಾಣುತ್ತಿದ್ದ ನೀರಿನ ಸರೋವರದೊಳಕ್ಕೆ ದೊಪ್ಪನೆ ಬಿದ್ದು ಬಟ್ಟೆಯನ್ನೆಲ್ಲಾ ನನೆಯಿಸಿಕೊಂಡನು. ಆಗ ಭೀಮನು ಫಕ್ಕನೆ ನಕ್ಕನು ; ಯುಧಿಷ್ಠಿರನು ನಿಷೇಧಿಸುತ್ತಿದ್ದರೂ ಇತರರೂ ನಕ್ಕರು. ದುರ್ಯೋಧನನು ಹುಬ್ಬನ್ನು ಗಂಟಿಕ್ಕಿ, ನಾಚಿಕೆಪಟ್ಟು, ರೋಷಾವೇಶದಿಂದ ಹಸ್ತಿನಾಪುರಕ್ಕೆ ಹೊರಟು, ತಕ್ಕ ಪ್ರತೀಕಾರವನ್ನು ಮಾಡುವೆನೆಂದು ಶಪಥ ಮಾಡಿಕೊಂಡನು. ಮುಂದೆ ನಡೆದ ಪಗಡೆಯ ಆಟಕ್ಕೂ, ಅಜ್ಞಾತ ವಾಸಕ್ಕೂ, ಕುರುಕ್ಷೇತ್ರದ ಮಹಾಯುದ್ಧಕ್ಕೂ, ದುರ್ಯೋಧನನ ಮತ್ತು ಅವನ ಕಡೆಯವರ ಮತ್ತು ಯುಧಿಷ್ಠಿರನ ಕಡೆಯುವರ ಕೊಲೆಗೂ ಇದ್ದ ಕಾರಣಗಳಲ್ಲಿ ಇದೂ ಒಂದಾಗಿ ಸೇರಿತು. (ಭಾಗವತಪುರಾಣ. ಅ. ೧೦, ೭೫ ; ಮತ್ತು ಮಹಾಭಾರತ ಸಭಾಪರ್ವ. ಅ. ೪೭).

ಕೆಡಕಿಗೆ ಕೆಡಕನ್ನೇ ಮಾಡುವುದಾದರೆ, ಹೊಸ ಹೊಸ ಕೆಡಕುಗಳು ಹುಟ್ಟಿ, ಕೆಡಕಿನ ಪರಂಪರೆಯನ್ನು ಬೆಳೆಯಿಸುವುದೇ ಹೊರತು ಮತ್ತೇನೂ ಆಗದು. ಭೃಗುಋಷಿಗಳಿಗೆ ಜಮದಗ್ನಿಯೆಂಬ ಒಬ್ಬ ಮಗನಿದ್ದನು. ಆ ಜಮದಗ್ನಿಯು ಮಹಾತಪಸ್ಸನ್ನು ಮಾಡಿ, ಕಠಿನವ್ರತಗಳನ್ನಾಚರಿಸಿ ಪ್ರಸಿದ್ಧನಾದನು. ಜಮದಗ್ನಿಗೆ ಪರಶುರಾಮನು ಹುಟ್ಟಿದನು. ಪರಶುರಾಮನು ಜನ್ಮತಃ ಬ್ರಾಹ್ಮಣನಾಗಿದ್ದರೂ, ಅಂತರದಲ್ಲಿ ಕ್ಷತ್ರಿಯನಾಗಿದ್ದನು. ಅವನ

ತಾತಂದಿರಾದ ಭೃಗುಋಷಿಗಳು ಮೊದಲೇ ಹೇಳಿದ್ದಂತೆ, ಪರಶುರಾಮನು ವೀರವರ್ಗಕ್ಕೆ ಅರ್ಹನಾಗಿದ್ದನು. ಜಮದಗ್ನಿಯಲ್ಲಿಯೂ ಕ್ರೂರವಾದ ಕೋಪದ ಬೀಜವದೊಂದು ಅಡಗಿಯೇ ಇತ್ತು. ಇವನ ತಪೋಜ್ವಾಲೆಯು ಆ ಬೀಜವನ್ನು ದಹಿಸಿರಲಿಲ್ಲ. ಈ ಭೃಗುಕುಲಕ್ಕೆ ಇದರಿಂದ ಬಗೆಬಗೆಯ ದುಃಖಗಳು ಬಂದೊದಗಿದುವು. ಜಮದಗ್ನಿಗೆ ತನ್ನ ಹೆಂಡತಿಯ ಪಾತಿವ್ರತ್ಯದ ವಿಷಯದಲ್ಲಿ ಸಂದೇಹವು ಹುಟ್ಟಲು, ಮಹಾಕೋಪದಿಂದ ತನ್ನ ಪುತ್ರರನ್ನು ಒಬ್ಬೊಬ್ಬನನ್ನಾಗಿ ಕರೆದು, ಪಾತಕಿಯಾದ ನಿನ್ನ ತಾಯನ್ನು ಕೊಲ್ಲು ಎಂದು ಆಜ್ಞೆಯನ್ನು ಮಾಡಿದನು. ಕಿರಿಯ ಮಗನೊಬ್ಬನು ವಿನಾ ಉಳಿದವರು ಮಾತೃವಧಕ್ಕೊಡಂಬಡದೆ ಹೋದರು. ಕೊನೆಗೆ ಕಿರಿಯ ಮಗನಾದ ರಾಮನನ್ನು ಕರೆದು ಹೇಳಲು, ಅವನು ಪರಶುವೊಂದನ್ನು ತೆಗೆದುಕೊಂಡು ತಾಯಿಯ ಶಿರಸ್ಸನ್ನು ಛೇದಿಸಿ ಕೆಡಹಿದನು. ತಂದೆಯು ಸಂತುಷ್ಟನಾಗಿ ಬೇಕಾದ ವರವನ್ನು ಬೇಡೆಂದನು. ಪರಶುರಾಮನು ತನ್ನ ತಾಯಿಯು ಮರಳಿ ಬದುಕುವಂತೆ ವರವನ್ನು ಕೇಳಿ, ತಾಯಿಯನ್ನು ಬದುಕಿಸಿ, ಮಾತೃವಧ ಪಾಪ ವಿಮೋಚನಾರ್ಥವಾಗಿ ತೀರ್ಥಯಾತ್ರೆಗೆ ಹೊರಟು ಹೋದನು. ಜಮದಗ್ನಿಯ ಕೋಪದ ಕೆಡಕು ಇಷ್ಟಕ್ಕೇ ಪರಿಸಮಾಪ್ತವಾಗಲಿಲ್ಲ. ತನ್ನ ಪುತ್ರರಿಲ್ಲದಿದ್ದಾಗ, ತಾನೊಬ್ಬಳೇ ಇರುವಕಾಲದಲ್ಲಿ, ಜಮದಗ್ನಿಯ ಹೆಂಡತಿಯಾದ ರೇಣುಕೆಯು ಕೃತವೀರ್ಯನ ಮಗನಾದ ಅರ್ಜುನನಿಗೆ ಆತಿಥ್ಯ ಸತ್ಕಾರವನ್ನು ಮಾಡಬೇಕಾಯಿತು. ಕ್ಷಾತ್ರಗರ್ವದಿಂದ ಮದಿಸಿದ್ದ ಅರ್ಜುನನು, ತನ್ನ ಗೌರವಕ್ಕೆ ತಕ್ಕ ಸತ್ಕಾರವು ನಡೆಯಲಿಲ್ಲವೆಂದು, ದೈನಂದಿನದ ಅಗ್ನಿಕಾರ್ಯಕ್ಕೆ ಬೇಕಾಗಿದ್ದ ಬೆಣ್ಣೆಯನ್ನು ಕಡೆದುಕೊಳ್ಳುವುದಕ್ಕೆ ಸಾಕಾಗುವಷ್ಟು ಹಾಲನ್ನು ಕರೆಯುತ್ತಿದ್ದ ಹಸುವಿನ ಕರುವನ್ನು ಬಲಾತ್ಕಾರದಿಂದ ಹೊತ್ತುಕೊಂಡು ಹೊರಟುಹೋದನು. ಪರಶುರಾಮನು ಮನೆಗೆ ಬಂದಮೇಲೆ ಜಮದಗ್ನಿಯು ನಡೆದ ಸಂಗತಿಗಳನ್ನು ತಿಳಿಸಿದನು. ಪರಶುರಾಮನಿಗೆ ಕೋಪ ಬಂತು, ಮತ್ತು ಕರುವನ್ನು ಕಳೆದುಕೊಂಡಿದ್ದ ಗೋವಿನ ಕೂಗುಗಳು ಆ ಕೋಪವನ್ನು ಉರಿಸಿದುವು. ಕೋಪಾವೇಶದಲ್ಲಿ ಆತ್ಮ ನಿರೋಧವನ್ನು ಮಾಡಲಾರದವನಾಗಿ, ಪರಶುರಾಮನು ನುಗ್ಗಿಹೋಗಿ ಅರ್ಜುನನ ಸಂಗಡ ಘೋರಯುದ್ಧವನ್ನು ಮಾಡಿ

ಅವನ ಸಹಸ್ರ ಬಾಹುಗಳನ್ನೂ ಕತ್ತರಿಸಿ ಅವನನ್ನೂ ಕೊಂದುಬಿಟ್ಟನು.
ಇದರಿಂದ ಅರ್ಜುನನ ಬಂಧುವರ್ಗದವರು ರೋಷದಿಂದ ಬಂದು, ಮುಯ್ಯಿಗೆ
ಮುಯ್ಯಿಮಾಡುವೆನೆಂದು, ಜಮದಗ್ನಿಯ ಆಶ್ರಮಕ್ಕೆ ನುಗ್ಗಿ, ಅವನು
ಆಯುಧವೇನೂ ಇಲ್ಲದೆ ತಪಸ್ಸನ್ನು ಮಾಡುತ್ತಿರುವ ವೇಳೆಯಲ್ಲಿ ಬಾಣ
ಪ್ರಯೋಗವನ್ನು ಮಾಡಿ ಅವನನ್ನು ಕೊಂದರು. ಕೊಲೆಯ ಎಣಿಕೆ
ಇಲ್ಲಿಗೂ ಸಮಾಪ್ತವಾಗಲಿಲ್ಲ. ಕ್ಷಮೆಯೊಂದೇ ಈ ಕೊಲೆಯ ಸರಪ
ಣಿಯನ್ನು ಒಕ್ಕಲಿಕ್ಕಬಲ್ಲುದಾಗಿತ್ತು; ಆದರೆ ಕ್ಷಮಾಗುಣವೆಂಬುದು ಪರಶು
ರಾಮನಲ್ಲಿರಲಿಲ್ಲ. ಪರಶುರಾಮನು ತಂದೆಗಾಗಿ ವ್ಯಥೆಪಟ್ಟು, ವಿಧಿಪೂರ್ವ
ಕವಾಗಿ ತಂದೆಯ ಶರೀರವನ್ನು ದಹನಮಾಡಿ, ಆ ಚಿತಿಯ ಅಗ್ನಿಸಾಕ್ಷಿ
ಯಾಗಿ ಕ್ಷತ್ರಿಯಕುಲವನ್ನು ತಾನು ನಾಶಮಾಡದೆ ಬಿಡೆನೆಂದು ಪ್ರಮಾಣ
ಮಾಡಿದನು; ಈ ರೀತಿಯಲ್ಲಿ ಕೆಡಕು ಬೆಳೆಯಿತು, ಮಿತಿಯಿಲ್ಲದೆ ದೊಡ್ಡ
ದೊಡ್ಡದಾಯಿತು. ಆಮೇಲೆ ತನ್ನ ಪರಶುವನ್ನು ತೆಗೆದುಕೊಂಡು ಹೊರಟು,
ಅರ್ಜುನನ ನೆಂಟರೆಲ್ಲರನ್ನೂ ಕೊಂದುಬಿಟ್ಟು, ಕ್ಷತ್ರಿಯಕುಲದವರ ಮೇ
ಲೆಲ್ಲಾ ಯುದ್ಧಮಾಡಿ, ಆ ಜಾತಿಯನ್ನೇ ಪ್ರಾಯಶಃ ನಿರ್ಮೂಲಮಾಡಿಬಿಟ್ಟನು.
(ಮಹಾಭಾರತ. ವನಪರ್ವ. ಅ. ೧೧೬—೧೧೭).

ನ್ಯಾಯವಿರುದ್ಧವಾಗಿಯೂ ಕರುಣವಿಲ್ಲದೆಯೂ ನಮ್ಮನ್ನು ಕಂಡಾಗ
ಕೂಡ ನಾವು ನಮ್ಮ ನಡತೆಯಲ್ಲಿ ಛಂದಾನುವರ್ತನವನ್ನೂ ವಿನಯ
ವನ್ನೂ ಪ್ರದರ್ಶನಮಾಡಿ, ನಮ್ಮನ್ನು ಹೀಗೆ ಹಿಂಸಿಸುವನು ಹಿರಿಯನೇ
ಆಗಲಿ ಸಮಾನನೇ ಆಗಲಿ ಕಿರಿಯನೇ ಆಗಲಿ, ಅವನಲ್ಲಿಯೂ ಛಂಧಾನುವರ್ತ
ನವನ್ನೂ ವಿನಯವನ್ನೂ ಹುಟ್ಟಿಸುವವರಾಗಬೇಕು. ಒಂದಾನೊಂದು
ಕಾಲದಲ್ಲಿ ದೂರ್ವಾಸರು ದುರ್ಯೋಧನನ ಜತೆಯಲ್ಲಿದ್ದು, ಪ್ರಸನ್ನರಾಗದ
ಅತಿಥಿಗಳಾಗಿ ನಡೆದವರಾದರು. ದುರ್ಯೋಧನನೂ ಅವನ ಸಹೋದರರೂ
ಅಹೋರಾತ್ರಿಗಳಲ್ಲಿಯೂ ಅವರೆಡೆಯಲ್ಲಿ ಶುಶ್ರೂಷೆಗೈದು, ತಮ್ಮ ಕೈಯ
ಲ್ಲಾದಷ್ಟು ಮಾನಮರ್ಯಾದೆಗಳನ್ನು ಮಾಡಿದರೂ ಕೂಡ ಅವರ ಮನಸ್ಸು
ಸಂತುಷ್ಟವಾಗಲಿಲ್ಲ. "ಎಲೈ ರಾಜನೆ, ನನಗೆ ಹಸಿವಾಗುತ್ತದೆ, ಬೇಗನೆ
ತಿಂಡಿಯನ್ನು ಕೊಡು" ಎಂದು ಅವೇಳೆಗಳಲ್ಲಿ ಹೇಳುವರು. ಸ್ನಾನಾಹ್ನಿ
ಕಗಳನ್ನು ಮಾಡಿಕೊಂಡು ಬಂದು, ಬಡಿಸಿದ್ದ ಭೋಜ್ಯವಸ್ತುಗಳನ್ನು

ನೋಡಿ,—“ ಈ ಹೊತ್ತು ಹಸಿವೇ ಇಲ್ಲ ; ಈಗ ನನಗೆ ಯಾವತಿಂಡಿಯೂ ಬೇಡ” ಎಂದು ಹೇಳಿ, ಸ್ವಲ್ಪ ಹೊತ್ತಿನಮೇಲೆ, ತಟ್ಟನೆ ಬಂದು “ ಬೇಗನೆ ಭೋಜನವನ್ನು ಮಾಡಿಸು ” ಎನ್ನುವರು. ಮತ್ತೊಂದು ಕಾಲದಲ್ಲಿ, ಮಧ್ಯ ರಾತ್ರಿಯಲ್ಲಿದ್ದು, ಅನ್ನವನ್ನು ತರಿಸು ಎಂದು ಹೇಳಿ, ಭೋಜ್ಯವಸ್ತುಗಳನ್ನು ತಂದಾಗ, ಅದೂ ಚೆನ್ನಾಗಿಲ್ಲ ಇದೂ ಚೆನ್ನಾಗಿಲ್ಲ ಬಂದೂ ಚೆನ್ನಾಗಿಲ್ಲ, ನನಗೆ ಯಾವುದೂ ಬೇಡ” ಎಂದು ಕೋಪಿಸಿಕೊಳ್ಳುವರಾಗುವರು. ಈ ರೀತಿಯಲ್ಲಿ ದೂರ್ವಾಸರು ದುರ್ಯೋಧನನಿಗೆ ಕಿರಿಕಿರಿ ಮಾಡತೊಡಗಿದರು; ಆದರೆ ದುರ್ಯೋಧನನು ಸಿಟ್ಟುಮಾಡದೆಯೂ ಜುಗುಪ್ಸೆಪಡದೆಯೂ ಇರುವುದನ್ನು ನೋಡಿ, ಪ್ರಸನ್ನರಾಗಿ—“ ನಿನಗೆ ವರವನ್ನು ಕೊಡುವುದಕ್ಕೆ ನನಗೆ ಶಕ್ತಿಯಿದೆ ; ಬೇಕಾದ ವರವನ್ನು ಬೇಡು. ನಿನ್ನ ವಿಷಯದಲ್ಲಿ ನಾನು ಸಂತುಷ್ಟನಾಗಿರುವುದರಿಂದ ಧರ್ಮವಿರುದ್ಧವಲ್ಲದ ವರವನ್ನು ನೀನು ನನ್ನಿಂದ ಪಡೆಯಬಹುದಾಗಿದೆ” ಎಂದು ನುಡಿದರು. (ಮಹಾಭಾರತ.ವನಪರ್ವ.ಅ.೨೬೦).

ಯಾವ ಕರುಣವೂ ದಯೆಯೂ ಕರಗಿಸಲಾರದಷ್ಟು ಕಠಿನವಾದ ಹೃದಯವನ್ನಿಟ್ಟುಕೊಂಡಿರುವ ಮಾನವರೂ ಪ್ರಪಂಚದಲ್ಲಿರುತ್ತಾರೆ. ಯಾವುದಕ್ಕೂ ಸಗ್ಗದೆ, ತಮ್ಮ ದುರ್ವರ್ತನದಲ್ಲಿಯೇ ಪ್ರವೃತ್ತರಾಗಿ ಕೊನೆಗೆ ಪ್ರಾಣ ನಿವೃತ್ತಿಯನ್ನೇ ಮಾಡಿಕೊಳ್ಳುವರು. ದುರ್ಯೋಧನನು ಇದಕ್ಕೆ ದೃಷ್ಟಾಂತವಾಗಿರುವನು. ತನ್ನ ದಾಯಾದಿಗಳಿಂದ ರಾಜ್ಯಕೋಶಗಳನ್ನೆಲ್ಲಾ ಅಪಹರಿಸಿ, ಅವರನ್ನು ಕಾಡುಪಾಲುಮಾಡಿ ಮೆರೆಯುತ್ತಿದ್ದ ದುರ್ಯೋಧನನಿಗೆ, ತಂತ್ರಗಾರನಾದ ಶಕುನಿಯು ಬಂದು,—“ ನಿನ್ನ ಶತ್ರುಗಳ ದುರವಸ್ಥೆಯನ್ನು ಕಣ್ಣಾರೆ ನೋಡಿ, ನೀನು ಪರಮಾನಂದವನ್ನು ಪಡೆಯಬಹುದು” ಎಂದು ಹೇಳಲು, ತನ್ನ ದಾಯಾದಿಗಳ ದಾರಿದ್ರ್ಯವನ್ನೂ ಅರಣ್ಯವಾಸದ ಸಂಕಟಗಳನ್ನೂ ತನ್ನ ನೇತ್ರಾತಿಥಿಗಳಿಗೆ ಊಟಿಟ್ಟು ದೊಡ್ಡ ಔತಣವನ್ನು ಮಾಡಬೇಕೆಂದು ದುರ್ಯೋಧನನು ನಿಶ್ಚಯಿಸಿದವನಾಗಿ, ತನ್ನ ಸಹೋದರರನ್ನೂ ಸ್ನೇಹಿತರನ್ನೂ ರಾಣೀವಾಸದ ಮಹಿಳೆಯರನ್ನೂ ಕರೆದುಕೊಂಡು, ತನ್ನ ಸಂಪತ್ತನ್ನು ಪಾಂಡವರು ನೋಡಿ ನಾಚಿಕೆ ಪಡಲಿ ಎಂದುಕೊಂಡು ಹೊರಟನು. ಆ ದುರ್ಯೋಧನನ ಮಹಾಗರ್ವದಿಂದ ಅಪಮಾನವನ್ನು ಹೊಂದಿದ್ದ ಗಂಧರ್ವರಾಜನೊಬ್ಬನಿಂದಲೂ ಅವನ ಸೈನಿಗಳಿಂದಲೂ ಮುತ್ತ

ಲ್ಪಟ್ಟವನಾಗಿ ಸೆರೆಗೆ ಸಿಕ್ಕಬಿದ್ದುದರಿಂದ ಅವನ ಕ್ರೂರಕೃತ್ರಿಮವು ನಿಷ್ಫಲ ವಾಯಿತು. ತಪ್ಪಿಸಿಕೊಂಡೋಡಿಹೋದವರಲ್ಲಿ ಕೆಲವರು ಯುಧಿಷ್ಠಿರ ಮಹಾರಾಜನ ಸನ್ನಿಧಿಗೆ ಬಂದು ಸಹಾಯವನ್ನು ಬೇಡಿದರು. ಭೀಮಸೇನನು ಸಹಾಯಕ್ಕೆ ಹೋಗಲೇ ಕೂಡದೆಂದು ನಿಷ್ಠುರವಾಗಿ ಮರ್ಮಭೇದಕಗಳಾದ ನುಡಿಗಳನ್ನು ಆಡಿದನು ; ಆದರೆ ಸೌಮ್ಯ ಚಿತ್ತನಾದ ಯುಧಿಷ್ಠಿರ ಮಹಾರಾಜನು ಅವನನ್ನು ಮಧುರ ವಚನದಿಂದ ಸಮಾಧಾನಪಡಿಸಿ, ದುರ್ಯೋಧನನೂ ರಾಣಿವಾಸದ ಜನರೂ ಸೆರೆಯಲ್ಲಿ ಬಿದ್ದಿರುವುದರಿಂದ ಮನೆತನಕ್ಕೇ ಅಪಕೀರ್ತಿಯುಂಟಾಗಿರುವುದನ್ನು ಮನಸ್ಸಿಗೆ ತಂದುಕೊಂಡವರಾಗಿ, ಆಯುಧಪಾಣಿಗಳಾಗಿ ಹೋಗಿ, ನಿಮ್ಮ ಬಂಧುವರ್ಗದವರನ್ನು ಬಿಡಿಸುವವರಾಗಬೇಕೆಂದು ತನ್ನ ತಮ್ಮಂದಿರಿಗೆ ಹೇಳುವವನಾದನು. "ಕೈಗಳನ್ನು ಜೋಡಿಸಿಕೊಂಡೋಡಿ ಬಂದು, "ಅಯ್ಯೋ, ನನ್ನ ಸಹಾಯಕ್ಕೆ ಬನ್ನಿರಿ ಬನ್ನಿರಿ!" ಎಂದು ಬೇಡುವವನಿಗೆ, ಅವನು ಶತ್ರುವಾಗಿದ್ದರೂ ಕೂಡ, ನಾನು ಸಹಾಯಕ್ಕೆ ಬರುವೆನು, ಹೆದರಬೇಡ, ಎನ್ನುವಷ್ಟು ದೊಡ್ಡಮನಸ್ಸು ಮಾಡಲೊಲ್ಲದ ಕ್ಷತ್ರಿಯಾಧಮನು ಎಲ್ಲಿತಾನೇ ಇರುವನು? ಪುತ್ರಜನನ, ರಾಜ್ಯಪಟ್ಟಾಭಿಷೇಕ, ವರಪ್ರದಾನ—ಇವು ಮೂರೂ ಮಹಾ ಸಂತೋಷಕ್ಕೆ ಮೂಲಗಳು ; ಎಲೈ, ಪಾಂಡುತನಯರಿರಾ! ಸಂಕಟಕ್ಕೆ ಗುರಿಯಾದ ಶತ್ರುವನ್ನು ಬಿಡಿಸುವುದು ಈ ಮೂರರ ಮೊತ್ತಕ್ಕೆ ಸಮವೆನಿಸಿಕೊಂಡಿದೆ" ಎಂದು ಯುಧಿಷ್ಠಿರನು ತನ್ನ ತಮ್ಮಂದಿರನ್ನು ಉಬ್ಬಿಸಿದನು. ಈ ಸದ್ವಚನಗಳನ್ನು ಲಾಲಿಸಿದವರಾಗಿ, ಅವರು ಅಣ್ಣನ ಮಾತನ್ನು ನಡೆಯಿಸಿದರು. ಘೋರ ಯುದ್ಧವು ಕೆಲವು ಕಾಲದವರೆಗೆ ನಡೆಯಿತು ; ಆಗ ಅರ್ಜುನನೂ ಗಂಧರ್ವರಾಜನೂ ತಾವುತಾವು ಮಿತ್ರರೆಂಬ ಸಂಗತಿಯನ್ನು ತಿಳಿದವರಾಗಿ, ಯುದ್ಧವನ್ನು ನಿಲ್ಲಿಸಿದರು. ದುರ್ಯೋಧನನ ಮೇಲೆ ಕದನಕ್ಕೆ ಹೋಗುವುದಕ್ಕೆ ಕಾರಣವೇನೆಂದು ಗಂಧರ್ವರಾಜನನ್ನು ಅರ್ಜುನನು ಕೇಳಿದನು. ಅರಣ್ಯಕ್ಕೆ ಬರುವುದರಲ್ಲಿ ದುರ್ಯೋಧನನಿಗಿದ್ದ ದುರಾಲೋಚನೆಯನ್ನು ತಾನು ತಿಳಿದಿದ್ದುದರಿಂದ, ಅವನಿಗೆ ಶಿಕ್ಷೆಮಾಡಿಸುವುದಕ್ಕಾಗಿ ದೇವೇಂದ್ರನ ಬಳಿಗೆ ಅವನನ್ನು ಕರೆದುಕೊಂಡುಹೋಗಬೇಕೆಂದು ಹೀಗೆ ಮಾಡಿದೆನೆಂದು ಗಂಧರ್ವರಾಜನು ಉತ್ತರವನ್ನಿತ್ತನು. ಸೆರೆಗೆ ಸಿಕ್ಕಿರುವವರನ್ನು ಬಿಟ್ಟುಬಿಡು ಎಂದು

ಅರ್ಜುನನು ಗಂಧರ್ವ ರಾಜನನ್ನು ಅರ್ಥಿಸಲು, ಕಥೆಯನ್ನೆಲ್ಲಾ ಲಾಲಿಸಿ ಕೇಳಿದಮೇಲೆ ಯುಧಿಷ್ಠಿರ ಮಹಾರಾಜನು ಅವರನ್ನು ಬಿಟ್ಟುಬಿಡಬೇಕೆಂದು ಅಪೇಕ್ಷಿಸಿದರೆ ಬಿಟ್ಟುಬಿಡುವೆನೆಂದು ಗಂಧರ್ವರಾಜನು ಹೇಳಿದನು. ದುರ್ಯೋಧನನು ಯೋಚಿಸಿದ್ದ ಕ್ರೂರ ಕೃತ್ರಿಮದ ಕಥೆಯನ್ನೆಲ್ಲಾ ಯುಧಿಷ್ಠಿರನು ಸಾವಧಾನ ಚಿತ್ತದಿಂದ ಕೇಳಿ, ಗಂಧರ್ವ ರಾಜನ ಉಪಕಾರಕ್ಕೆ ವಂದನೆಗಳನ್ನು ಸಮರ್ಪಿಸಿ, ದುರ್ಯೋಧನನನ್ನೂ ಅವನ ಗೆಳೆಯರನ್ನೂ ಸೆರೆಯಿಂದ ಬಿಡಿಸಿದನು. ಗಂಧರ್ವರೆಲ್ಲಾ ಹೊರಟು ಹೋದಮೇಲೆ, ಯುಧಿಷ್ಠಿರನು ಪ್ರೀತಿಪುರಸ್ಸರವಾಗಿ ತನ್ನ ದಾಯಾದಿಯನ್ನು ಕರೆದು,—"ಮಗು, ಇಂತಹ ದುಡುಕಿನ ಕೃತ್ಯವನ್ನು ಇನ್ನು ಮಾಡದಿರು ; ದುಡುಕೆನ್ನಿಸಿಕೊಳ್ಳುವುದು ಸುಖಕ್ಕೆಂದೂ ಒಯ್ಯದೈಯ್ಯಾ, ಭಾರತ. ಎಲೈ, ಕುರುಕುಲ ಸಂಜಾತಬಾಲನೇ! ನಿನಗೂ ನಿನ್ನ ತಮ್ಮಂದಿರಿಗೂ ಮಂಗಳವಾಗಲಿ! ಇಚ್ಛೆಯಿದ್ದ ತೆರದಲ್ಲಿ ರಾಜಧಾನಿಗೆ ತೆರಳು ; ವ್ಯಸನ ಪಡಬೇಡ, ಸಂತೋಷವಿಲ್ಲದವನಾಗಿರಬೇಡ" ಎಂದು ನುಡಿದನು. ದೋಷರಹಿತನಾದ ಯುಧಿಷ್ಠಿರನು, ತನ್ನ ಸಂಕಟಗಳಿಗೆಲ್ಲಾ ಇಹಲೋಕದಲ್ಲಿ ಕಾರಣಭೂತನಾಗಿಯೂ, ವಿಷಭರಿತ ಹೃದಯನಾಗಿಯೂ ಇದ್ದ ತನ್ನ ಶತ್ರುವನ್ನು ದಯಾರಸದಿಂದ ಕೂಡಿದವನಾಗಿ ಮನ್ನಣೆಗೈದನು. ದುರ್ಯೋಧನನಾದರೋ ಹೊರಟು, ಚಿಂತೆಗೂ ಕೋಪಕ್ಕೂ ಗುರಿಯಾಗಿ ಪರಿತಪಿಸುತ್ತಿದ್ದನು ; ಪಾಂಡವರ ದಯೆಯೂ ಮತ್ತೊಂದು ಅಪರಾಧವಾಯಿತು ; ತನ್ನ ದುರಾಲೋಚನೆಗೆ ಪ್ರತಿಯಾಗಿ ಕೃಪಾಪರಿಪೂರಿತವಾದ ಸಹಾಯ್ಯವನ್ನಿತ್ತ ಪಾಂಡವರನ್ನು ಉಕ್ಕಿಯುಕ್ಕಿ ಬರುತ್ತಿರುವ ವಿಷಾದದಿಂದ ದ್ವೇಷಿಸುತ್ತಾ ದುರ್ಯೋಧನನು ದುಗುಡದಿಂದ ಹಸ್ತಿನಾಪುರಕ್ಕೆತೆರಳಿದನು. (ಮಹಾಭಾರತ.ವನಪರ್ವ.ಅ. ೨೪೩,—೨೫೦)

ದೈವಾಧೀನದಿಂದ ಇಂತಹ ಮೂರ್ಖದ್ವೇಷವು ಲೋಕದಲ್ಲಿ ಅಪೂರ್ವವಾಗಿರುವುದು ; ವಾಡಿಕೆಯಾಗಿ, ಬಿಸಿಲಿಂದ ಬೆಣ್ಣೆಯು ಹೇಗೆ ಕರಗುವುದೋ ಹಾಗೆಯೇ ದಿವ್ಯದಯಾರಸವೂ ಬೇಗನೆ ದುಗುಡವನ್ನು ಕಳೆಯಿಸುವುದು.

ನಮಗೆ ತೋರಿಸಿದ ಕೋಪವು ನಮ್ಮಲ್ಲಿಯೂ ಅದೇ ಬಗೆಯ ಕೋಪವನ್ನೇ ಹುಟ್ಟಿಸುವಾಗಲೂ ಕೂಡ, ಅದನ್ನು ಅಡಗಿಸುವುದಕ್ಕೂ, ಮಾತಿ

ನಲ್ಲಿಯೇ ಆಗಲಿ ಮುಖದಲ್ಲಿಯೇ ಆಗಲಿ ಅಂಗಾಂಗಗಳಲ್ಲಿಯೇ ಆಗಲಿ ಅದನ್ನು ಪ್ರದರ್ಶಿಸಲು ಒಪ್ಪದಿರುವುದಕ್ಕೂ ನಾವು ಪ್ರಯತ್ನಮಾಡಬಹುದಾಗಿದೆ. ಹೀಗೆಯೇ ಮಾಡುತ್ತಾ ಹೋದರೆ ಕೋಪವು ಕ್ರಮ ಕ್ರಮವಾಗಿ ಅಡಗಿ ಹೋಗುವುದು ; ಮತ್ತೇನಿಲ್ಲದಿದ್ದರೂ ಕೋಪವೆಂಬ ಉರಿಗೆ ಮತ್ತಷ್ಟು ಅಡುಗಬ್ಬನ್ನು ಹಾಕದಿರುವಂತೆಯಾದರೂ ಆಗುವುದು. ಹೀಗೆಯೇ ಅಭ್ಯಾಸ ಮಾಡುತ್ತಾ ಕೆಲವು ಕಾಲವನ್ನು ಕಳೆದ ಮೇಲೆ ಇತರರ ಕೋಪವು ಪ್ರತಿಯಾಗಿ ನಮ್ಮಲ್ಲಿ ಕೋಪವನ್ನು ಹುಟ್ಟಿಸದಿರುವುದನ್ನು ತಿಳಿಯುವರಾಗುತ್ತೇವೆ ; ಹೀಗಾದಾಗ ಇತರರ ಕಾರ್ಯಕ್ಕೆ ನಮ್ಮ ದಯೆಯನ್ನು ಒಡ್ಡುವುದರಲ್ಲಿ ನಮ್ಮ ಶಕ್ತಿಯನ್ನು ಉಪಯೋಗಿಸಲು ಸಮರ್ಥರಾಗುತ್ತೇವೆ.

ದುಷ್ಟಸಹವಾಸವನ್ನು ನಾವು ಏಕೆ ತ್ಯಜಿಸಬೇಕೋ ಅದನ್ನು ತಿಳಿಯುವುದು ಈಗ ನಮಗೆ ಸುಲಭವಾಗಿರುವುದು. ದಯಾರಹಿತಗಳಾದ, ಅಶುಚಿಗಳಾದ, ದುಷ್ಟಗಳಾದ ಚಿಂತೆಗಳನ್ನಿಟ್ಟುಕೊಂಡಿರುವವರ ಜತೆಯಲ್ಲಿಯೇ ಆಗಲಿ, ಅಪರಿಶುದ್ಧಗಳಾದ ಅಮಿತಗಳಾದ ತಿಂಡಿಪೋತುಗಳಾದ ಕರ್ಮಗಳನ್ನೆಸಗುತ್ತಿರುವವರ ಸಂಗಡವೇ ಆಗಲಿ ನಾವಿರುವಾಗ, ಅವರ ಕಾಮಗಳು ನಮ್ಮನ್ನು ಮುತ್ತಿ, ಅವರ ತೆರದಲ್ಲಿಯೇ ಚಿಂತಿಸುವಂತೆಯೂ ಕ್ರಿಯೆಗಳನ್ನೆಸಗುವಂತೆಯೂ ನಮ್ಮನ್ನು ತಳ್ಳುವುವು. ಇಂತಹ ಸಂದರ್ಭಗಳಲ್ಲಿ ನಮ್ಮಲ್ಲಿ ಅಡಗಿದ್ದ ದುರಾಲೋಚನೆಗಳೂ ಹಿಂದಿನ ದುರ್ವ್ಯಾಪಾರಗಳೂ ಉಜ್ಜೀವಿತಗಳಾಗೆದ್ದು, ನಮ್ಮನ್ನು ಹೆಚ್ಚಾಗಿ ಕಾಡಿಸುವುವು ; ಅವುಗಳನ್ನು ನಿಗ್ರಹಿಸುವುದು ಕಷ್ಟವಾಗುತ್ತದೆ. ಪ್ರಾಪ್ತ ವಯಸ್ಕನಾದಾಗ ಸಭ್ಯನಾಗಿಯೂ ಪರೋಪಕಾರ ನಿರತನಾಗಿಯೂ ಬಾಳಬೇಕೆಂದು ಹಾರಯಿಸುತ್ತಾ ವಿದ್ಯಾಶಾಲೆಯಲ್ಲಿ ದುಷ್ಟಚಿಂತನೆಯಿಲ್ಲದೆಯೂ ವ್ಯಾಸಂಗನಿರತನಾಗಿಯೂ ಇರುವ ಹುಡುಗನು ಮೇಲೆ ಹೇಳಿದ ಕಾರಣಗಳಿಗೋಸ್ಕರವಾಗಿ ದುಷ್ಟ ಸಹವಾಸವನ್ನು ಕೈಯಲ್ಲಾಗುವಮಟ್ಟಿಗೂ ಬಿಡುವನಾಗಬೇಕು. ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಾಗದೆ, ದುಷ್ಟರ ಸಹವಾಸದಲ್ಲಿರಬೇಕಾಗಿ ಬಂದಕಾಲದಲ್ಲಿ, ಅವರ ದುರಾಲೋಚನೆಗಳಿಂದ ತನ್ನ ಮನಸ್ಸು ಕೆಡುವುದಕ್ಕೆ ಆಸ್ಪದವುಂಟಾಗದಿರುವುದಕ್ಕಾಗಿ ತನ್ನ ಮನಸ್ಸಿನಲ್ಲಿ ಪರಿಶುದ್ಧಗಳಾದ 'ದೊಡ್ಡ

ದೊಡ್ಡ ಆಲೋಚನೆಗಳನ್ನೇ ಇಟ್ಟುಕೊಂಡು, ತನ್ನ ಜತೆಗಾರರನ್ನು ಸಭ್ಯರನ್ನಾಗಿ ಮಾಡುವುದಕ್ಕೆ ಪ್ರಯತ್ನಿಸಬೇಕು. ಈ ರೀತಿಯಲ್ಲಿ, ನಮಗಿರುವ ಜ್ಞಾನವನ್ನು ಸದುಪಯೋಗಕ್ಕೆ ತಿರುಗಿಸಿ, ಸದಾಚರಣೆಗೆ ತರಬೇಕು; ಏಕೆಂದರೆ ಈ ಒಂದು ರೀತಿಯಲ್ಲಲ್ಲದೆ ಮತ್ತಾವ ರೀತಿಯಲ್ಲಿಯೂ ನಮ್ಮ ಜ್ಞಾನವು ಫಲಪ್ರದವಾಗುವುದಿಲ್ಲ. ನಾವು ಸಭ್ಯರಾಗಿ ಬಾಳಿ ಲೋಕದ ಸುಖವನ್ನು ವೃದ್ಧಿಗೊಳಿಸುವುದು ನಮ್ಮ ಕರ್ತವ್ಯವಾಗಿರುತ್ತದೆ.

## ಶ್ರುತ್ಯಾದಿ ವಚನಗಳು.

ಕ್ರುಧ್ಯಂತಂ ನ ಪ್ರತಿಕ್ರುಧ್ಯೇದಾಕ್ರುಷ್ಟಃ ಕುಶಲಂ ವದೇತ್ ।
(ಮನುಸ್ಮೃತಿ. ಅ. ೬, ಶ್ಲೋ. ೪೩).

"ಕ್ರುದ್ಧನಮುಂದೆ ಕ್ರುದ್ಧನಾಗಬಾರದು; ಆಕ್ರುಷ್ಟನಾದರೂ ಕುಶಲವನ್ನೇ ಆಡಬೇಕು."

ಸೇತೂಂಸ್ತರ ದುಸ್ತರಾನ್ ಅಕ್ರೋಧೇನ ಕ್ರೋಧಂ ಸತ್ಯೇನಾನೃತಮ್ ॥
(ಸಾಮವೇದ. ಆರಣ್ಯಗಾನ. ಅರ್ಕಪರ್ವ. ಪ್ರಪಾಠಕ ೧).

"ದುಸ್ತರಗಳಾದ ಮಾರ್ಗಗಳನ್ನೂ ಜಯಿಸುವನಾಗು; ಕ್ರೋಧವನ್ನು ಅಕ್ರೋಧದಿಂದ ಜಯಿಸು; ಅನೃತವನ್ನು ಸತ್ಯದಿಂದ ಜಯಿಸು."

ಆತ್ಮಾನಂ ಚ ಪರಾಂಶ್ಚೈವ ತ್ರಾಯತೇ ಮಹತೋ ಭಯಾತ್ ।
ಕ್ರುಧ್ಯಂತಮಪ್ರತಿಕ್ರುಧ್ಯನ್ ದ್ವಯೋರೇಷ ಚಿಕಿತ್ಸಕಃ ॥
(ಮಹಾಭಾರತ. ವನಪರ್ವ. ಅ. ೨೯, ಶ್ಲೋ. ೯).

"ಕೋಪಿಸಿಕೊಂಡಿರುವವರ ಮುಂದೆ ಕೋಪಿಸಿಕೊಳ್ಳದೆ ಯಾವನಿರುವನೋ ಅಂತಹನು ಮಹಾಗಂಡಗಳನ್ನು ತಾನೂ ತಪ್ಪಿಸಿಕೊಳ್ಳುವನು, ಇತರರಿಗೂ ತಪ್ಪಿಸುವನು. ಅಂತಹನು ಉಭಯತ್ರರಿಗೂ ವೈದ್ಯನು."

ಕ್ಷಮಾ ಬ್ರಹ್ಮ ಕ್ಷಮಾ ಸತ್ಯಂ ಕ್ಷಮಾ ಭೂತಂ ಚ ಭಾವಿ ಚ ।
ಕ್ಷಮಾ ತಪಃ ಕ್ಷಮಾ ಶೌಚಂ ಕ್ಷಮಯೇದಂ ಧೃತಂ ಜಗತ್ ॥
(ಮಹಾಭಾರತ. ವನಪರ್ವ. ಅ. ೨೯).

"ಕ್ಷಮೆಯಿಲ್ಲದೆ ಬ್ರಹ್ಮವಿಲ್ಲ, ಕ್ಷಮೆಯಿಲ್ಲದೆ ಸತ್ಯವಿಲ್ಲ, ಕ್ಷಮೆಯಿಲ್ಲದೆ ಭೂತವೂ ಇಲ್ಲ ಭಾವಿಯೂ ಇಲ್ಲ, ಕ್ಷಮೆಯಿಲ್ಲದೆ ತಪಸ್ಸಿಲ್ಲ, ಕ್ಷಮೆಯಿಲ್ಲದೆ ಶೌಚವಿಲ್ಲ, ಈ ಜಗತ್ತೆಲ್ಲಾ ಕ್ಷಮೆಯೇ ಆಧಾರ."

ಪರಶ್ಚೇದೇನಮತಿಬಾಣೈರ್ಭೃಶಂ
ವಿಧ್ಯೇಚ್ಛಮಯವೇಹ ಕಾರ್ಯಃ ।
ಸಂರೋಷ್ಯಮಾಣಃ ಪ್ರತಿಹೃಷ್ಯತೇ ಯಃ
ಸ ಆದತ್ತೇ ಸುಕೃತಂ ವೈ ಪರಸ್ಯ ॥
ಆಕ್ರುಶ್ಯಮಾನೋ ನ ವದಾಮಿ ಕಿಂಚಿತ್
ಕ್ಷಮಾಮ್ಯಹಂ ತಾಡ್ಯಮಾನಶ್ಚ ನಿತ್ಯಮ್ ।
ಶ್ರೇಷ್ಠಂ ಹ್ಯೇತದ್ಯತ್ ಕ್ಷಮಾಮಾಹುರಾರ್ಯಾಃ
ಸತ್ಯಂ ತಥೈವಾರ್ಜವಮಾನೃಶಂಸ್ಯಮ್ ॥
ಆಕ್ರುಶ್ಯಮಾನೋನಾಕ್ರುಶ್ಯೇನ್ಮನ್ಯುರೇನಂ ತಿತಿಕ್ಷತಃ ।
ಆಕ್ರೋಷ್ಟಾರಂ ನಿರ್ದಹತಿ ಸುಕೃತಂ ಚಾಸ್ಯ ವಿನ್ದತಿ ॥
ಯೋ ನಾತ್ಯುಕ್ತಃ ಪ್ರಾಹ ರೂಕ್ಷಂ ಪ್ರಿಯಂ ವಾ
ಯೋ ವಾ ಹತೋ ನ ಪ್ರತಿಹನ್ತಿ ಧೈರ್ಯಾತ್ ।
ಪಾಪಂ ಚ ಯೋ ನೇಚ್ಛತಿ ತಸ್ಯ ಹನ್ತುಃ
ತಸ್ಯೇಹ ದೇವಾಃ ಸ್ಪೃಹಯನ್ತಿ ನಿತ್ಯಮ್ ॥
ಪಾಪೀಯಸಃ ಕ್ಷಮೇತೈವ ಶ್ರೇಯಸಸ್ಸದೃಶಸ್ಯ ಚ ।
ವಿಮಾನಿತೋ ಹತೋತ್ಕ್ರುಷ್ಟಏವಂ ಸಿದ್ಧಿಂ ಗಮಿಷ್ಯತಿ ॥

(ಮಹಾಭಾರತ. ಶಾಂತಿಪರ್ವ. ಅ. ೩೦೦, ಶ್ಲೋ ೧೧,೧೫,೧೬-೧೯).

"ಪರನು ಬಾಣವಂತಹ ತನ್ನ ವಾಕ್ಕುಗಳಿಂದ ಬುದ್ಧಿಪೂರ್ವಕವಾಗಿ ಪ್ರಾಜ್ಞನೊಬ್ಬನನ್ನು ಆಳವಾಗಿ ಚುಚ್ಚುವನಾದರೆ, ಆ ಪ್ರಾಜ್ಞನು ತಾಳ್ಮೆಯನ್ನಾಶ್ರಯಿಸುವನಾಗಬೇಕು. ಕೋಪಬರುವಂತೆ ಆದ ಕಾಲದಲ್ಲಿ ಯಾವನು ಕೋಪಕ್ಕೊಳಗಾಗದೆ ಅಕ್ರೋಧದಿಂದ ಮಂದಸ್ಮಿತ ವದನನಾಗುವನೋ ಅವನು ಕೋಪವನ್ನು ಹುಟ್ಟಿಸಿದವನಲ್ಲಿರುವ ಸುಕೃತಗಳನ್ನೆಲ್ಲಾ ತ್ತೆಗೆದುಕೊಳ್ಳುವನಾಗುವನು.

"ಆಕ್ರೋಶದಿಂದ ಮಾತನಾಡಿದಾಗ ನಾನೇನನ್ನೂ ಆಡುವುದಿಲ್ಲ; ಮೇಲೆ ಬಂದುಬಿದ್ದಾಗಲೂ ಕೂಡ ತಪ್ಪದೆ ಕ್ಷಮಿಸುವೆನು. ಕ್ಷಮೆಯೆಂಬ ಹೆಸರನ್ನು ಆರ್ಯರು ಯಾವುದಕ್ಕಿಟ್ಟದಾರೆಯೋ ಅದು ಶ್ರೇಷ್ಠ; ಸತ್ಯ,

ಆರ್ಜವ, ಮತ್ತು ದಯೆ (ಅನೃಶಂಸ್ಯ)—ಇವೂ ಕ್ಷಮೆಯಂತೆಯೇ ಶ್ರೇಷ್ಠ ವಸ್ತುಗಳು.

"ಆಕ್ರೋಶದಿಂದ ಮಾತನಾಡಿಸಲ್ಪಟ್ಟವನು ಆಕ್ರೋಶದಿಂದ ಉತ್ತರವನ್ನು ಕೊಡದಿರಲಿ. ಆಕ್ರೋಶದಿಂದ ಮೇಲೆಬೀಳುವವನ ಆಕ್ರೋಶವು ಹಿಂದಿರುಗಿ ಅವನನ್ನೇ ದಹಿಸುವುದಲ್ಲದೆ ಅವನ ಸುಕೃತಗಳನ್ನೂ ಅಪಹರಿಸುವುದು.

"ಅತ್ಯುಕ್ತಗಳಿಂದ ಮಾತನಾಡಿಸಲ್ಪಟ್ಟಾಗ ಯಾವನು ಅತ್ಯುಕ್ತಗಳನ್ನಾಡದೆ, ಕ್ರೂರವಚನಗಳನ್ನೇ ಆಗಲಿ ಪ್ರಿಯವಚನಗಳನ್ನೇ ಆಗಲಿ ಆಡದೆ ಸುಮ್ಮನಿರುವನೋ, ತಾಡಿಸಲ್ಪಟ್ಟಾಗ ಯಾವನು ಪ್ರತಿಯಾಗಿ ತಾಡಿಸದೆ ಧೈರ್ಯದಿಂದ ಸುಮ್ಮನಿರುವನೋ, ಯಾವನು ತನ್ನನ್ನು ತಾಡಿಸಿದವನಿಗೆ ಕೇಡನ್ನು ಇಚ್ಛಯಿಸುವನಾಗುವುದಿಲ್ಲವೋ ಅವನನ್ನು ದೇವತೆಗಳೂ ಕೂಡ ಸ್ಪೃಹೆಯಿಂದ ನೋಡುವರು.

"ನೀಚರಿಂದಾಗಲಿ ಸದೃಶರಿಂದಾಗಲಿ ಶ್ರೇಷ್ಠರಿಂದಾಗಲಿ ಬೈಸಿಕೊಂಡಾಗಲೂ ಅಪಮಾನವನ್ನು ಹೊಂದಿದಾಗಲೂ ತಾಡಿಸಲ್ಪಟ್ಟಾಗಲೂ ಕ್ಷಮಿಸುವಾತನು ಸಿದ್ಧಿಯನ್ನು ಹೊಂದುವನು."

ಆಕ್ರುಷ್ಟಸ್ತಾಡಿತಃ ಕ್ರುದ್ಧಃ ಕ್ಷಮತೇ ಯೋ ಬಲೀಯಸಃ ॥
ಯಶ್ಚ ನಿತ್ಯಂ ಜಿತಕ್ರೋಧಃ ವಿದ್ವಾನುತ್ತಮಪೂರುಷಃ ॥

(ಮಹಾಭಾರತ, ವನಪರ್ವ, ಅ. ೨೯).

"ತನಗಿಂತಲೂ ಬಲಿಷ್ಠನಾದವನಿಂದ ಆಕ್ರುಷ್ಟನಾದಾಗಲೂ ತಾಡಿತನಾದಾಗಲೂ ಕ್ರುದ್ಧನಾದಾಗಲೂ ಕೂಡ ಯಾವನು ಕ್ರೋಧವನ್ನು ಜಯಿಸಿ ಕ್ಷಮಾಗುಣವನ್ನು ತೋರುವನೋ ಅವನೇ ಪಂಡಿತ ಮತ್ತು ಉತ್ತಮ ಪುರುಷ."

ಯದಿ ನ ಸ್ಯುರ್ಮಾನುಷೇಷು ಕ್ಷಮಿಣಃ ಪೃಥಿವೀಸಮಾಃ ।
ನ ಸ್ಯಾತ್ಸಂಧಿರ್ಮನುಷ್ಯಾಣಾಂ ಕ್ರೋಧಮೂಲೋ ಹಿ ವಿಗ್ರಹಃ ॥
ಅಭಿಷಕ್ತೋ ಹ್ಯಭಿಷಜೇದಾಹನ್ಯಾತ್ ಗುರುಣಾಹತಃ ।
ಏವಂ ವಿನಾಶೋ ಭೂತಾನಾಮಧರ್ಮಃ ಪ್ರಥಿತೋ ಭವೇತ್ ॥

ಆಕ್ರುಷ್ಟಃ ಪುರುಷಸ್ಸರ್ವಂ ಪ್ರತ್ಯಾಕ್ರೋಶೇದನಂತರಂ ।
ಪ್ರತಿಹನ್ಯಾದ್ಧತಶ್ಚೈವ ತಥಾ ಹಿಂಸ್ಯಾಚ್ಚ ಹಿಂಸಿತಃ ॥
ಹನ್ಯುರ್ಹಿ ಪಿತರಃ ಪುತ್ರಾನ್ ಪುತ್ರಾಶ್ಚಾಪಿ ತಥಾ ಪಿತೄನ್ ।
ಹನ್ಯುಶ್ಚ ಪತಯೋ ಭಾರ್ಯಾಃ ಪತೀನ್ ಭಾರ್ಯಾಸ್ತಥೈವಚ ॥
ಏವಂ ಸಂಕುಪಿತೇ ಲೋಕೇ ಜನ್ಮ ಕೃಷ್ಣೇ ನ ವಿದ್ಯತೇ ।
ಪ್ರಜಾನಾಂ ಸಂಧಿಮೂಲಂ ಹಿ ಜನ್ಮ ವಿದ್ಧಿ ಶುಭಾನನೇ ॥

(ಮಹಾಭಾರತ. ವನಪರ್ವ. ಅ. ೨೯, ಶ್ಲೋ. ೨೪—೨೯).

(ಇವುಗಳ ಪರಿವರ್ತನಕ್ಕೆ ೨೪೦-೧ ನೆಯ ಪುಟವನ್ನು ನೋಡಿರಿ).



ಇದು ಸನಾತನ ಧರ್ಮದೀಪಿಕೆಯಲ್ಲಿ ನೀತಿಪ್ರಕಾಶಿಕೆಯೆಂಬ ತೃತೀಯಭಾಗದಲ್ಲಿ ಧರ್ಮಾಧರ್ಮ ಪ್ರತಿಫಲವಿಚಾರವೆಂಬ ಏಕಾದಶಾಧ್ಯಾಯ.



ಸರ್ವಸ್ತರತು ದುರ್ಗಾಣಿ ಸರ್ವೋ ಭದ್ರಾಣಿ ಪಶ್ಯತು ।
ಸರ್ವಸ್ಸುಖಮವಾಪ್ನೋತು ಸರ್ವಸ್ಸರ್ವತ್ರ ನಂದತು ॥

"ದಾಟಹೋಗುವುದಕ್ಕೆ ಕಷ್ಟಗಳಾದ ದುರ್ಗಗಳನ್ನೂ ಸರ್ವರೂ ದಾಟುವರಾಗಲಿ, ಮಂಗಳವಸ್ತುಗಳನ್ನು ಸರ್ವರೂ ನೋಡುವವರಾಗಲಿ, ಸರ್ವರೂ ಸೌಖ್ಯವನ್ನು ಪಡೆಯಲಿ ; ಸರ್ವರೂ ಸರ್ವಸ್ಥಳಗಳಲ್ಲಿಯೂ ನಲಿದಾಡಲಿ!"

ಓಮ್ ! ಸತ್ಯಂವದ| ಧರ್ಮಂಚರ| ಸತ್ಯಮೇವ ಜಯತೇ ನಾನೃತಂ ॥



ವಿಶ್ವಾನಿದೇವಸವಿತರ್ದುರಿತಾನಿ ಪರಾಸುವ,
ಯದ್ಭದ್ರಂ ತನ್ನಆಸುವ.
ಓಮ್ ತತ್‌ಸತ್



# ವಿಷಯಸ್ಥಳ ಸೂಚಿನಿ.

# ಕ್ಲಿಷ್ಟಪದ ನಿಘಂಟು.

---

ಅಕಾರ್ಪಣ್ಯ—(ಅ+ಕಾರ್ಪಣ್ಯ), ದೈನ್ಯವಿಲ್ಲದಿರುವುದು.

ಅಗ್ನಿತ್ರಯ—ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಎಂಬುವು ಅಗ್ನಿತ್ರಯ.

ಅಘಾಯುವಾಗಿ—(ಅಘ+ಆಯು), ಪಾಪಪ್ರಚುರವಾದ ಆಯುಸ್ಸುಳ್ಳವನಾಗಿ.

ಅಜಗರ—(ಗೃ-ನಿಗರಣೇ; ಅಜಂ ಗಿರತಿ ಯಃ ಅಜಗರಃ; ಗಿರತಿ ಗ್ರಸತೇ), ಆಡನ್ನೂ ನುಂಗುವ ಹೆಬ್ಬಾವು.

ಅಜಾತಶತ್ರು—(ಅ+ಜಾತ+ಶತ್ರು), ಹುಟ್ಟದಿರುವ ಶತ್ರುವುಳ್ಳವನು; ಯಾರಿಂದಲೂ ದ್ವೇಷಿಸಲ್ಪಡದವನು. ಯುಧಿಷ್ಠಿರನು ಸರ್ವದಾ ಧರ್ಮನಿರತನಾಗಿಯೇ ಇರುತ್ತಿದ್ದುದರಿಂದ ಅವನನ್ನು ದ್ವೇಷಿಸುವವರು ಯಾರೂ ಇರಲಿಲ್ಲ. ಆದುದರಿಂದ ಅವನಿಗೆ ಅಜಾತಶತ್ರು ಎಂಬ ಹೆಸರು ಬಂದಿದೆ. ಕಾಮಕ್ರೋಧಾದಿ ಸಹಜ ಶತ್ರುಗಳು ಇಲ್ಲದಿದ್ದುದರಿಂದಲೂ ಅಜಾತಶತ್ರು.

ಅಡುಗಬ್ಬ—(ಅಡು+ಕಬ್ಬ), ಅಡಿಗೆಗೆ ಉಪಯೋಗಿಸುವ ಕಬ್ಬ, ಸೌದೆ, ಕಾಷ್ಠ.

ಅತ್ಯುಕ್ತಿ—(ಅತಿ+ಉಕ್ತಿ), ಅಸಂಭವೋಕ್ತಿ, ಆರೋಪಿತಕಥನ.

ಅಧ್ಯಯನ—ಸ್ವರಸಹಿತವಾಗಿ ವೇದವನ್ನು ಕಲಿಯುವುದು.

ಅಧ್ಯಾಪನ—ಸ್ವರಸಹಿತವಾಗಿ ವೇದವನ್ನು ಕಲಿಸುವುದು.

ಅನುಕ್ರೋಶ—(ಅನು+ಕ್ರೋಶ; ಕ್ರುಶರೋದನೇ), ಅಳುವವನ ಸಂಗಡ ಅಳುವುದು, ದಯೆ.

ಅನುಮಾನ—(ಅನು+ಮಾ; ಮಾಙ್‌ಮಾನೇ ಶಬ್ದೇಚ; ಮಾನವೆಂದರೆ ಅಳತೆ), ಅನುಮಿತಿಕರಣ, ತರ್ಕ, ಊಹೆ. ಊಹೆಯು ಅನೇಕ ವೇಳೆಗಳಲ್ಲಿ ಸುಳ್ಳಾಗುವುದರಿಂದ ಸಂಶಯ ಎಂಬರ್ಥವೂ ಈ ಮಾತಿಗೆ ಕನ್ನಡದಲ್ಲಿ ಬಂದಿದೆ.

ಅನುಶಾಸಿಸು—(ಅನು+ಶಾಸಿಸು), ವಿಧಿವಿಹಿತವಾಗಿ ಆಜ್ಞೆಮಾಡು.

ಅಪಥ್ಯ—(ಪಥವೆಂದರೆ ಮಾರ್ಗ), ವೈದ್ಯೋಕ್ತಭೋಜನಾದಿ ನಿಯಮಕ್ಕೂ ನಿತ್ಯಕಾಮ್ಯಾಚಾರಕ್ಕೂ ಹಿತವಾಗಿ ಯಾವುದಿರುವುದೋ ಅದು ಪಥ್ಯ. ಪಥ್ಯವಲ್ಲದುದು ಅಪಥ್ಯ.

ಅಪ್ರಮೇಯ—(ಅ+ಪ್ರಮೇಯ), ಅಳೆಯಲಳವಲ್ಲದವನು.

ಅಪ್ರವೃತ್ತಿ—(ಅ+ಪ್ರ+ವೃತ್ತಿ), ಅವ್ಯಾಪಕತೆ, ವ್ಯಾಪನೆಯಿಲ್ಲದಿರುವುದು.

ಅಭಿಮಾನ—'ಗರ್ವೋಽಭಿಮಾನೋಽಹಂಕಾರಃ' ಎಂಬುದು ಅಮರ. ಆತ್ಮೀಯಜ್ಞಾನ, ತನ್ನದೆಂಬ ಅರಿವು.

ಅಭ್ಯಾಗತ—(ಅಭಿ+ಆಗತ), ಆಕಸ್ಮಿಕವಾಗಿ ಬಂದ ಅತಿಥಿ.

ಅವಿನಾಭೂತಸಂಬಂಧ—(ಅ+ವಿನಾಭೂತ+ಸಂಬಂಧ), ಎಡೆಯನ್ನು ಬಿಡದಂತೆ ಕೂಡಿಕೊಂಡಿರುವುದು.

ಅಶ್ವಿನೀದೇವತೆಗಳು—ಇವರು ಯಮಳರು, ದೇವಲೋಕದ ಚಿಕಿತ್ಸಕರು.

ಅಷ್ಟಸಿದ್ಧಿ— ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ।
ಪ್ರಾಪ್ತಿಃ ಪ್ರಾಕಾಮ್ಯ ಮೀಶತ್ವಂ ವಶಿತ್ವಂ ಚಾಷ್ಟಭೂತಯಃ ॥

ಇಲ್ಲಿ ಹೇಳಿರುವ ಅಣಿಮ, ಮಹಿಮ, ಗರಿಮ, ಲಘಿಮ, ಪ್ರಾಪ್ತಿ, ಪ್ರಾಕಾಮ್ಯ ಈಶತ್ವ, ವಶಿತ್ವ ಎಂಬ ಎಂಟು ಸಿದ್ಧಿಗಳು ಬಂದಾಗುತ್ತಲೊಂದು ಕ್ರಮವಾಗಿ ಲಭಿಸುವುವು; ಕ್ರಮದಪ್ಪಿ ಲಭಿಸುವುದೇ ಇಲ್ಲ. ವಿಶ್ವಾಮಿತ್ರರು ಇದಕ್ಕೆ ದೃಷ್ಟಾಂತವಾಗಿದಾರೆ.

ಅಸಂರಂಭ—(ಅ+ಸಂರಂಭ), ದುಗುಡವಿಲ್ಲದಿರುವುದು.

ಅಸತ್ತಾಗು—(ಅಸತ್+ಆಗು), ಅಸತ್ ಎಂಬುದು ಕನ್ನಡದಲ್ಲಿ ಅಸತ್ತು ಎಂಬ ರೂಪವನ್ನು ಹೊಂದುತ್ತದೆ. ಸುಳ್ಳಾಗು.

ಅಸ್ತೇಯ—ಕಳವು ಮಾಡದೆಯಿರುವುದು. ಕದಿಯದಿರುವುದು.

ಅಹಂಕಾರ—'ಅಹಂ' ಅಥವಾ ನಾನು ಎಂಬ ಜ್ಞಾನವನ್ನು ಹುಟ್ಟಿಸುವ ಪ್ರಕೃತ್ಯಂಶ; ಅಭಿಮಾನಾತ್ಮಿಕಾಂತಃಕರಣವೃತ್ತಿ; ಅಹಂಕಾರತತ್ವ; ಅಹಂಕೃತಿ. 'ಗರ್ವೋಽಭಿಮಾನೋಽಹಂಕಾರಃ' ಎಂದು ಅಮರ.

ಆಕ್ರುಷ್ಟ—ಸಿಟ್ಟಿಬ್ಬಿಸಲ್ಪಟ್ಟವನು.

ಆಕ್ರೋಶ—ಕ್ರೋಧಾಕರ್ತವ್ಯನಿಶ್ಚಯ; ಕ್ರೋಧದ ದೆಸೆಯಿಂದ ಕರ್ತವ್ಯನಿಶ್ಚಯವನ್ನು ಕಳೆದುಕೊಂಡಿರುವವನು.

ಆಚಾರ—(ಚರ ಗತಿಭಕ್ಷಣಯೋಃ), ಸ್ನಾನಾಚಮನಾದಿಗಳು; ಚರಿತ್ರ; ವೃತ್ತ; ಶೀಲ. (ಜ್ಞಾ). ಸಂದರ್ಭಾನುಸಾರವಾಗಿ ಅರ್ಥ ಮಾಡಿಕೊಳ್ಳಬೇಕು.

ಆಚಾರ್ಯ—ಆಚಿನೋತಿ ಚ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ।
ಸ್ವಯಮಾಚರತೇ ಯಸ್ಮಾತ್ತಸ್ಮಾದಾಚಾರ್ಯ ಈರಿತಃ ॥

ಆತ್ಮ—(ಅತ, ಸಾತತ್ಯಗಮನೇ), ಸಂತತಭಾವದಿಂದ ಜಾಗ್ರದಾದಿ ಸರ್ವಾವಸ್ಥೆಗಳಲ್ಲಿಯೂ ಅನುವರ್ತಿಸುವುದರಿಂದ ಆತ್ಮವೆನ್ನಿಸಿಕೊಳ್ಳುವುದು. ಬ್ರಹ್ಮ, ಜೀವ, ಬುದ್ಧಿ, ಮನಸ್ಸು, ದೇಹ—ಈ ಅರ್ಥಗಳಲ್ಲಿ ಈ ಶಬ್ದವು ಬರುವುದು. (ಜ್ಞಾ). ಸಂದರ್ಭಾನುಸಾರವಾಗಿ ಅರ್ಥ ಮಾಡಿಕೊಳ್ಳಬೇಕು.

ಆತ್ಮೋತ್ಕರ್ಷ—(ಆತ್ಮ+ಉತ್ಕರ್ಷ), ಆತ್ಮಶ್ರೇಷ್ಠತೆ, ಗರ್ವ.

ಆದಿತ್ಯರು—ಇವರು ನಿಮೇಷಾದಿ ಮಹಾಕಲ್ಪಾಂತ ಕಾಲನಿಯಾಮಕರು. ದ್ವಾದಶಾದಿತ್ಯರಿರುವರು.

ಆನೃಶಂಸ್ಯ—ಕಾರುಣ್ಯ, ಅಹಿಂಸೆ, ಅಕ್ರೌರ್ಯ.

ಈಶ್ವರ—(ಈಶ ಐಶ್ವರ್ಯೇ), ಶಾಸನ ಮಾಡುವವನು; ಆಳುವವನು.

ಉಂಛಸಿಲವೃತ್ತಿ—‘ಉಂಛಃ ಕಣಶಆದಾನಂ, ಕಣಿಶಾದ್ಯಾರ್ಜನಂ ಸಿಲಂ.’ ಹೊಲಗಳಲ್ಲಿ ಕೊಯ್ಯಲಿನಲ್ಲಿ ಬಿದ್ದ ಕೆನೆಗಳನ್ನು ಆರಿಸಿಕೊಂಡು ಹೋಗಿ ಜೀವನ ಮಾಡುವುದು ಉಂಛವೃತ್ತಿ; ಹೊಲಗಳಲ್ಲಿ ಚದರಿಬಿದ್ದ ಕಾಳುಗಳನ್ನು ಆರಿಸಿಕೊಂಡು ಹೋಗಿ ಜೀವನ ಮಾಡುವುದು ಸಿಲವೃತ್ತಿ.

ಉಚ್ಚಾಟನ—ಹೊರಹೊರಡಿಸುವುದು.

ಉತ್ಪಾತ—ಹಾನಿ, ಕೇಡು.

ಉಪಾಂಜನ—ಮೃದ್ಭಸ್ಮಾದಿಲೇಪನ.

ಉಪಾಂತಪ್ರದೇಶ—ಸಮೀಪಸ್ಥಲ.

ಋಷಿ—ಊರ್ಧ್ವರೇತಾಸ್ತಪಸ್ಯುಗ್ರೋ ನಿಯತಾಶೀ ಚ ಸಂಯಮೀ ।
ಶಾಪಾನುಗ್ರಹಯೋಶ್ಶಕ್ತಃ ಸತ್ಯಸಂಧೋ ಭವೇದೃಷಿಃ ॥

ಊರ್ಧ್ವರೇತಸ್ಕನಾಗಿಯೂ ತಪಸ್ಸಿನಲ್ಲಿ ಉಗ್ರನಾಗಿಯೂ ಆಹಾರನಿಯಮವುಳ್ಳವನಾಗಿಯೂ ಜಿತೇಂದ್ರಿಯನಾಗಿಯೂ ಶಾಪಾನುಗ್ರಹಶಕ್ತಿಯುಳ್ಳವನಾಗಿಯೂ ಸತ್ಯಸಂಧನಾಗಿಯೂ ಇರುವವನು ಋಷಿ.

ಒಡ್ಡೋಲಗ—(ಒಡ್ಡು+ಓಲಗ), ಒಡ್ಡಿದೋಲಗ; ದೊರೆಯಿಂದಲೂ ಸಭಾಸದರಿಂದಲೂ ಶೋಭಿಸುವ ಸಭಾಸ್ಥಾನ.

ಓಜಸ್ಸು—(ಉಬ್ಜ್ ಆರ್ಜವೇ), ಶಕ್ತಿವಿಶೇಷ. ಸುಶ್ರುತದಲ್ಲಿ ಈ ಶಕ್ತಿವಿಶೇಷವನ್ನು ಈ ಬಗೆಯಲ್ಲಿ ವರ್ಣಿಸಿದೆ—

ಯಸ್ಯ ನಾಶಾನ್ನನಾಶೋಸ್ತಿ ಧಾರಿ ಯದ್ಧೃದಯಾಶ್ರಿತಮ್ ।
ಯಚ್ಛರೀರಬಲಂ ದೇಹಃ ಪ್ರಾಣಾಯತ್ರ ಪ್ರತಿಷ್ಠಿತಾಃ ॥

* * * *

ರಸಧಾತ್ವಾದಿಮಾರ್ಗಾಣಾಂ ಸತ್ವವದ್ಧೀಂದ್ರಿಯಾತ್ಮನಾಮ್ ।
ಪ್ರಧಾನಸ್ಯೌಜಸಶ್ಚೈವ ಹೃದಯಸ್ಥಾನಮುಚ್ಯತೇ ॥

ಯಾವುದರ ನಾಶಕ್ಕಿಂತಲೂ ನಾಶವೇ ಇಲ್ಲವೋ, ಹೃದಯಾಶ್ರಿತಗಳಾಗಿರುವವುಗಳನ್ನು ಯಾವುದು ಧರಿಸಿರುವುದೋ, ದೇಹಬಲವು ಯಾವುದರಿಂದುಂಟಾಗುವುದೋ, ಪ್ರಾಣವಾಯುಗಳು ಯಾವುದರಲ್ಲಿ ಪ್ರತಿಷ್ಠಿತಗಳಾಗಿವೆಯೋ, ರಸಧಾತ್ವಾದಿಮಾರ್ಗಗಳಿಗೂ ಸತ್ವವತ್ತಾದ ಜ್ಞಾನೇಂದ್ರಿಯಗಳಿಗೂ ಯಾವುದು ಪ್ರಧಾನವಾಗಿರುವುದೋ ಅದು ಓಜಸ್ಸು. ಹೃದಯವು ಇದರ ಸ್ಥಾನವೆಂದು ಹೇಳುತ್ತಾರೆ. ಇಂಗ್ಲೀಷಿನಲ್ಲಿ Magnetism ಎನ್ನುವುದಕ್ಕೆ ಇದು ಪ್ರತಿಪದವಾಗಿರುವಂತೆ ತೋರುವುದು.

ಕದನ್ನಭೋಜನ—ಅಭಿಯಿಲ್ಲದ ಊಟ.

ಕರುಣೆ—‘ಕರೋತಿಮನಃ ಅನುಕೂಲ್ಯಾಯ ಇತಿ ಕರುಣಾ’ ಆನುಕೂಲ್ಯವನ್ನುಂಟುಮಾಡುವುದಕ್ಕೆ ಮನಸ್ಸನ್ನು ತರುವ ಗುಣವು ಕರುಣೆ.

ಕವ್ಯ—ಪಿತೃಗಳ ಉದ್ದೇಶಕವಾದ ಆಹುತಿ ಮೊದಲಾದುವು.

ಕಾಮ—(ಕಮುಕಾನ್ತೌ, ಕಾನ್ತಿರಿಚ್ಛಾ), ಸತ್ಕಾಮ, ದುಷ್ಕಾಮ ಎನ್ನುವಾಗ, 'ಸತ್' 'ದುಃ' ಎಂಬ ಭಾವನೆಗಳಲ್ಲಿ ಬುದ್ಧಿಯ ಕೆಲಸವೂ ಸೇರಿರುವುದರಿಂದ ಸಾಮಾನ್ಯನಾಮವಾದ ಕಾಮ ಎಂಬುವುದು ಇಂಗ್ಲೀಷಿನ Emotions ಎಂಬ ಪದಕ್ಕೆ ಪ್ರತಿಪದವಾಗಿಯೂ ಇರುತ್ತದೆ. ಅಭಿಲಾಷೆ, ವೀರ್ಯ, ಅಭ್ಯನುಜ್ಞೆ, ಅನುಮತಿ, ವರ, ಮನೋರಥ ಎಂಬ ಅರ್ಥಗಳೂ ಸಂದರ್ಭಾನುಸಾರವಾಗಿ ಬರುವುವು. ವಿಷ್ಣು, ಮಹಾದೇವ, ಮನ್ಮಥ, ಬಲರಾಮ—ಇವರನ್ನೆಲ್ಲಾ ಕಾಮ ಎಂದು ಕರೆಯುವುದುಂಟು. (ಜ್ಞಾ). ವಿಚಾರಮಾಡಿ ಸಂದರ್ಭಾನುಸಾರವಾಗಿ ಈ ಪದದ ಅರ್ಥವನ್ನು ನಿರ್ಣಯಿಸಿಕೊಳ್ಳಬೇಕು.

ಕಿಲ್ಬಿಷ—ಪಾಪ.

ಕುತ್ಸೆ—ಕಿರಿಕಿರಿ.

ಕುಮಾರಿ—ಶೈಶವ ಬಾಲ್ಯಾವಸ್ಥೆಗಳನ್ನು ದಾಟಿ ಕೌಮಾರಾವಸ್ಥೆಯಲ್ಲಿರುವ ಮದುವೆಯಿಲ್ಲದ ಹುಡುಗಿ.

ಕೃತ್ಯಾದೇವತೆ—ಮಾಟ ಮುಂತಾದುವುಗಳಲ್ಲಿ ಉಪಾಸಿಸುವ ದುರ್ದೇವತೆ.

ಕೃಪೆ—ಪರಿಪಾಲನೆಯಲ್ಲಿ ಪ್ರೀತಿಯಿಡುವುದು.

ಕೇವಲ—(ಕೇವೃಸೇವನೇ), "ಅವಿಪರ್ಯಯಾತ್ ವಿಶುದ್ಧಂ ಕೇವಲ ಮುತ್ಪದ್ಯತೇಜ್ಞಾನಂ" ಎಂದುಸಾಂಖ್ಯರು ಹೇಳುವರು. ಜ್ಞಾನಭೇದ; ವಿಶುದ್ಧವಿಜ್ಞಾನ.

ಕ್ರಮಾಸಕ್ತಿ—(ಕ್ರಮ+ಆಸಕ್ತಿ), ಕ್ರಮವರಿತು ನಡೆವುದರಲ್ಲಿ ಆಸಕ್ತಿ ಅಥವಾ ಪ್ರೀತಿ.

ಕ್ಲಮ—ಬಳಲಿಕೆ.

ಗಂಧರ್ವರು—ದೇವಲೋಕದ ಗಾಯಕರು, ಇವರ ಗಣಗಳು ಹನ್ನೊಂದು.

ಗಾಯತ್ರಿ—(ಗಾಯಂತಂ ತ್ರಾಯತೇ ಇತಿ ಗಾಯತ್ರೀ), ಗಾನ ಮಾಡುವವನನ್ನು ಪಾಲನಮಾಡುತ್ತದೆಯಾದುದರಿಂದ ಗಾಯತ್ರಿ.

ಗುರು—ಗುಶಬ್ದಸ್ತ್ವಂಧಕಾರಸ್ಯಾದ್ರುಶಬ್ದಸ್ತನ್ನಿರೋಧಕಃ । ಅಂಧಕಾರನಿರೋಧಿತ್ವಾದ್ಗುರುರಿತ್ಯಭಿಧೀಯತೇ ॥

ಘೃಣೆ—ದಯೆ.

ಚತುರಂತಯಾನ—(ಚತುಃ+ಅಂತ+ಯಾನ), ನಾಲ್ಕು ಮೂಲೆಗಳಿರುವ ವಾಹನ, ಪಲ್ಲಕ್ಕಿ.

ಚಿಂತಾಕ್ರಾಂತ—(ಕ್ರಮುಪಾದವಿಕ್ಷೇಪೆ; ಚಿಂತ+ಆ+ಕ್ರಮ್), ಚಿಂತೆಯಿಂದ ಆಕ್ರಮಿಸಲ್ಪಟ್ಟವನು.

ಚಿರಕಾರಿ—(ಚಿರಂ ವ್ಯಾಪ್ಯ ಕರೋತಿ), ನಿದಾನವಾಗಿ ಯೋಚಿಸಿ ಕೆಲಸ ಮಾಡುವವನು. "ಚಿರಕಾರೀಹಿ ಮೇಧಾವೀ ನಾಪರಾಧ್ಯತಿ ಕರ್ಮಸು." ಮ. ಭಾ.

ಛಂದಾನುವರ್ತನ—(ಛಂದ+ಅನುವರ್ತನ, ಛಂದವೆಂದರೆ ಆಶಯ, ಅಭಿಪ್ರಾಯ). ಇಷ್ಟಾನುವರ್ತನ.

ಜಿಜ್ಞಾಸಾ—(ಜ್ಞಾತುಮಿಚ್ಛಾ ಜಿಜ್ಞಾಸಾ), ತಿಳಿಯಬೇಕೆಂಬ ಇಚ್ಛೆ, ವಿಚಾರ.

ತತ್ವ—(ತನೋತಿ ಸರ್ವಮಿತಿ ತತ್, ಸರ್ವವನ್ನೂ ಹರಡುವುದು ತತ್; ತಸ್ಯಭಾವಃ ತತ್ವಂ); ಪರಮಾತ್ಮ; ವಸ್ತು; ಮನಸ್ಸು; ಸ್ವರೂಪ.

ತತ್ವಜ್ಞಾನ—ಬ್ರಹ್ಮಜ್ಞಾನ: ಬುದ್ಧಿಗುಣವಿಶೇಷ.

ತಥ್ಯ—(ತಥಾ ಸಾಧು ತಥ್ಯಂ), ಸತ್ಯ.

ತಪಸ್ಸು—(ತಪಸಂತಾಪೇ), "ವೈಧಕ್ಲೇಶಜನಕಂಕರ್ಮ" ವಿಧಿವಿಹಿತವಾಗಿಯೂ ಕ್ಲೇಶಕರವಾಗಿಯೂ ಇರುವ ಕರ್ಮವು ತಪಸ್ಸು. ತಪಸ್ಸು ಶರೀರವನ್ನು ಆತ್ಮನ ವಶಕ್ಕೆ ತರುವುದು.

ತಾಪತ್ರಯ—ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ ಎಂಬುವು ತಾಪತ್ರಯ.

ತ್ರಿವರ್ಗ—ಧರ್ಮ, ಅರ್ಥ, ಕಾಮ

ದಮ—ದುಷ್ಟವಸ್ತುನಿಗ್ರಹ, ಆತ್ಮನಿಗ್ರಹ.

ದಯೆ—ಪರದುಃಖಾಸಹಿಷ್ಣುತೆ; ಪರದುಃಖದುಃಖಿತ್ವ.

ದಾನ—ಪ್ರತಿವಸ್ತುವೇನನ್ನೂ ಅಪೇಕ್ಷಿಸದೆ ಕೊಡುವುದು, ಕೃಷ್ಣಾರ್ಪಣವಾಗಿ ಕೊಡುವುದು, 'ಸ್ವಸ್ವತ್ವನಿವೃತ್ತಿಪೂರ್ವಕ ಪರಸ್ವತ್ವಾಪಾದನಂ.'

ದಾಕ್ಷ್ಯ—(ದಕ್ಷಸ್ಯ ಭಾವಃ ದಾಕ್ಷ್ಯಂ), ಸಾಮರ್ಥ್ಯ, ಚಾತುರ್ಯ.

ದಿಕ್ಕು—ಆಶ್ರಯಸ್ಥಾನ, ಅವಲಂಬನ.

ಧರ್ಮ—(ಧೃ ಧಾರಣೇ), ಲೋಕವನ್ನು ಧರಿಸುವುದರಿಂದಲೂ ಪುಣ್ಯಾತ್ಮರಿಂದ ಧರಿಸಲ್ಪಡುವುದರಿಂದಲೂ ಧರ್ಮವೆನಿಸಿಕೊಂಡಿರುವುದು. ನಾನಾರ್ಥಶಬ್ದ. ಆಚಾರ, ನ್ಯಾಯ, ಸ್ವಭಾವ, ಪುಣ್ಯ, ಶ್ರೇಯಸ್ಸು, ಸದ್ಗುಣ, ಧನುಸ್ಸು, ಯಮ, ಸೋಮಪ—ಇವೆಲ್ಲವೂ ಈ ಪದದರ್ಥಗಳು. ಸಂದರ್ಭಾನುಸಾರವಾಗಿ ಅರ್ಥವನ್ನು ಮಾಡಿಕೊಳ್ಳಬೇಕು.

ಧರ್ಮಪತ್ನಿ—ಗೃಹಸ್ಥಾಶ್ರಮ ಧರ್ಮಗಳನ್ನಾಚರಿಸುವುದಕ್ಕೋಸ್ಕರ ಮದುವೆಮಾಡಿಕೊಂಡ ಹೆಂಡತಿ.

ಧರ್ಮೋತ್ತರವಾಗಿ—ಧರ್ಮೈಕದೃಷ್ಟಿಗಳಾಗಿ.

ನಿರಂಜನವಾದ—ನಿರ್ಲಿಪ್ತವಾದ, ಆಸಕ್ತಿಯಿಲ್ಲದ.

ನಿರ್ವಾಣ—(ನಿರ್+ವಾಣ; ವಾ—ಗತಿಗಂಧನಯೋಃ), ವಿಶ್ರಾಂತಿ, ಅಸ್ತಗಮನ, ಸಮಾಪ್ತಿ, ನಿಶ್ಚಲ.(ಜ್ಞಾ). ಸಂದರ್ಭಾನುಸಾರವಾಗಿ ಅರ್ಥವನ್ನು ಮಾಡಿಕೊಳ್ಳಬೇಕು.

ನಿಶ್ರೇಯಸ—ಮೋಕ್ಷ, ಕಲ್ಯಾಣ.

ನಿಷಕ್ತ—ಎಡೆಬಿಡದೆ ಆಶ್ರಯಿಸಿಕೊಂಡಿರುವ.

ನೈಸರ್ಗಿಕ—ಸ್ವಾಭಾವಿಕ.

ನ್ಯಾಸ—(ನಿ+ಅಸ್; ಅಸುಕ್ಷೇಪಣೆ); ಕ್ರಮವರಿತಿಡುವುದು; ತ್ಯಾಗ. ಕರ್ಮ ನ್ಯಾಸ, ಸನ್ನ್ಯಾಸ, ಅಂಗನ್ಯಾಸ, ಕರನ್ಯಾಸ ಎಂಬುವುಗಳಿಗೆ ಸಮಯೋಚಿತ ವಾಗಿ ಅರ್ಥಮಾಡಿಕೊಳ್ಳಬೇಕು.

ಪರಶು—ಗಂಡುಗೊಡಲಿ.

ಪರಾಸುತ್ವ—ಪ್ರಾಣವಿಲ್ಲದಿರುವುದು, ನಿದ್ರಾಪರವಶತೆ.

ಪರಿಪಂಥಿ—ಶತ್ರು.

ಪರ್ಣಕುಟೀರ—ತರಗೆಲೆಯ ಮನೆ.

ಪಲ್ವಲ--ಸಣ್ಣ ಕುಂಟೆ, ಅಥವಾ ಕೊಳ.

ಪಾರಿತೋಷಿಕ—ಸಂತೋಷದಿಂದ ಕೊಟ್ಟವಸ್ತು.

ಪುರಾಣನು—(ಪುರಾಭವಃ ಪುರಾಣಃ ಪುರಾಪಿನವಃ ಪುರಾಣಃ), ಪೂರ್ವದಲ್ಲಿಯೂ ಹೊಸಬನಾಗಿಯೇ ಇದ್ದವನು; ನಿತ್ಯನು.

ಪುರುಷ—(ಪುರು ಶೇತೇ ಇತಿ ಪುರುಷಃ), ಶರೀರದಲ್ಲಿರುವವನು.

ಪುರುಸಂಜ್ಞೇ ಶರೀರೇಸ್ಮಿನ್ ಶಯನಾತ್ಪುರುಷೋಹರಿಃ ।
ಶಕಾರಸ್ಯಷಕಾರೋಯಂ ವ್ಯತ್ಯಯೇನ ಪ್ರಯುಜ್ಯತೇ ॥

ಪ್ರಣಯಕಲಹ—ಪ್ರೇಮದಿಂದ ಕೂಡಿದ ಜಗಳ ಅಥವಾ ಕಲಹ.

ಪ್ರತಿಕೃತಿ—ಪ್ರತಿಬಿಂಬ.

ಪ್ರತಿಗ್ರಹ—ಪ್ರತಿಯಾಗಿ ಏನನ್ನೂ ಕೊಡದೆ ತೆಗೆದುಕೊಳ್ಳುವುದು.

ಪ್ರಮಾದ—ಅನವಧಾನ (ಅಜಾಗರೂಕತೆ).

ಬ್ರಹ್ಮ—(ಬೃಹಿ ವೃದ್ಧೌ. ನಿರತಿಶಯ ಮಹತ್ವಲಕ್ಷಣ ವೃದ್ಧಿಮಾನ್ ಬ್ರಹ್ಮಾ), ಬ್ರಹ್ಮಾ ಎಂಬ ಪುಲ್ಲಿಂಗಶಬ್ದವು ಸೃಷ್ಟಿಕರ್ತನಾದ ಚತುರ್ಮುಖನಲ್ಲಿ ವ ರ್ತಿಸುತ್ತದೆ. ಬ್ರಹ್ಮ ಎಂಬ ನಪುಂಸಕಲಿಂಗ ಶಬ್ದವು ಪರಬ್ರಹ್ಮವಾಚ ಕವಾದುದು. ವಿಷಯಸ್ಥಲಸೂಚಿನಿ ಎಂಬ ಭಾಗದಲ್ಲಿ ಕೊಟ್ಟಿರುವ ಪುರಾವೆ ಗಳನ್ನು ನೋಡಿರಿ.

ಬ್ರಹ್ಮಚರ್ಯ—(ಬ್ರಹ್ಮಣೇ ವೇದಾರ್ಥಂ, ಚರ್ಯಂ ಆಚರಣೀಯಂ), "ಪುಂಸಃ ಸ್ತ್ರೀಸ್ಮರಣಾದಿ ಶೂನ್ಯತ್ವಂ, ಸ್ತ್ರಿಯಾಶ್ಚ ಪುರುಷಸ್ಮರಣಾದಿ ರಾಹಿತ್ಯಂ" ಎಂದು ಮನುವು ಹೇಳಿದಾನೆ. ಬ್ರಹ್ಮಚರ್ಯದಲ್ಲಿ ವೇದಾಧ್ಯಯನವು ಮುಖ್ಯ.

ಬ್ರಹ್ಮಜಿಜ್ಞಾಸು—ಬ್ರಹ್ಮವನ್ನು ವಿಚಾರಮಾಡುವವನು.

ಭಕ್ತಿ—(ಭಜ ಸೇವಾಯಾಂ), ತೈಲಧಾರೆಯಂದದಲ್ಲಿರುವ ವಿಚ್ಛಿತ್ತಿಯಿಲ್ಲದ ಧ್ಯಾನ ಸಂತತಿಯು ಭಕ್ತಿ, ಹಿರಿಯರಲ್ಲಿ ಕಿರಿಯರಿಗಿರುವ ಪ್ರೀತಿ.

ಭದ್ರಾಸನ – ರಾಜ್ಯಭಾರವನ್ನು ಮಾಡುವುದಕ್ಕಾಗಿ ಕುಳಿತುಕೊಳ್ಳುವ ಆಸನ; ನೃಪಾಸನ; ಸಿಂಹಾಸನವೆಂಬುದು ಪರ್ಯಾಯಪದ.

ಭರ್ತೃ—(ಡುಭೃಞ್ ಧಾರಣಪೋಷಣಯೋಃ), ಧಾರಣಾರ್ಥದಲ್ಲಿಯೂ ಪೋಷಣಾರ್ಥದಲ್ಲಿಯೂ ಭರ್ತೃವೆಂಬ ಪದವು ಬರುವುದು.

ಭಾಗವತರು—ನ ಶೂದ್ರಾ ಭಗವದ್ಭಕ್ತಾಃ ವಿಪ್ರಾಭಾಗವತಾಃ ಸ್ಮೃತಾಃ। ಸರ್ವವರ್ಣೇಷು ತೇ ಶೂದ್ರಾಃ ಯೇಹ್ಯಭಕ್ತಾ ಜನಾರ್ದನೇ॥ ಮ. ಭಾ. ಭಗವದ್ಭಕ್ತರು.

ಭೂತ—(ಭೂ ಸತ್ತಾಯಾಂ), ಪೃಥಿವ್ಯಾದಿ ಪಂಚಭೂತಗಳು, ಪ್ರಾಣವುಳ್ಳ ವಸ್ತು, ಸಮಾನ, ಯುಕ್ತ, ನ್ಯಾಯ, ಪಿಶಾಚಿ, ಬಾಲಗ್ರಹ—ಈ ಅರ್ಥಗಳಲ್ಲೆಲ್ಲಾ ಈ ಶಬ್ದವು ಬರುತ್ತದೆ. ವ್ಯಾಕರಣದಲ್ಲಿ "ಕಳೆದಕಾಲ" ವೆಂದರ್ಥ. (ಜ್ಞಾ). ಸಂದರ್ಭಾನುಸಾರವಾಗಿ ಅರ್ಥಮಾಡಿಕೊಳ್ಳಬೇಕು.

ಭೋಕ್ತೃ—ಅನುಭವವುಳ್ಳ.

ಮಂತ್ರ—(ಮತ್ರಿಗುಪ್ತಭಾಷಣೇ); "ಮನನಾತ್ತ್ರಾಯತೇ ಯಸ್ಮಾತ್ ತಸ್ಮಾನ್ಮಂತ್ರಃ ಪ್ರಕೀರ್ತಿತಃ॥" ವೇದಭಾಗ. ವಿಷಯಸ್ಥಳಸೂಚಿನಿಯಲ್ಲಿ ಈ ಶಬ್ದವನ್ನು ನೋಡಿರಿ.

ಮದ್ದು—ತಮಿಳಿನಲ್ಲಿ "ಮರಂದು", ಹಳೆಗನ್ನಡದಲ್ಲಿ "ಮರ್ದು" ಎಂಬ ರೂಪಗಳಿವೆ. ಔಷಧಿಯೆಂದರ್ಥ.

ಮರುತ್ತುಗಳು—ಗಾಳಿಯ ಅಧಿದೇವತೆಗಳು, ಸಪ್ತಮರುತ್ತುಗಳು.

ಮಹಾನುಭಾವ—(ಭೂಸತ್ತಾಯಾಂ; ಮಹತ್ + ಅನು + ಭಾವ), ಮಹಾಪ್ರಭಾವಶಾಲಿ; ಮಹಾಶಕ್ತಿಯುಳ್ಳವನು.

ಮಹಾಪುರುಷ—ಮಾಹಾತ್ಮ್ಯವುಳ್ಳವನು ಮಹಾಪುರುಷ.

ಮಿಥ್ಯ—ಸತ್ಯವಲ್ಲದುದು ಮಿಥ್ಯ; ತಥ್ಯ ಎಂಬ ಪದವನ್ನು ನೋಡಿರಿ.

ಮೃಷ್ಟಾನ್ನ—(ಮೃಜೂ ಶುದ್ಧೌ), ಪರಿಶುದ್ಧವಾದ ಆಹಾರ, ಮಧುರಾಹಾರ.

ಮೋಹ—(ಮುಹ ವೈಚಿತ್ತ್ಯೇ), ಮಮ ಮಾತಾ ಮಮ ಪಿತಾ ಮಮೇಯಂ ಗೃಹಿಣೀ ಗೃಹಂ। ಏತದನ್ಯತ್ ಮಮತ್ವಂ ಯತ್ ಸಮೋಹ ಇತಿ ಕೀರ್ತಿತಃ॥ ದೇಹಾದಿಗಳನ್ನು ಆತ್ಮವೆಂದು ತಿಳಿಯುವುದು ಮೋಹ; ಅವಿದ್ಯೆ.

ಯಜನ—ಯಜ್ಞಮಾಡುವುದು.

ಯಕ್ಷರು—ಕುಬೇರನ ಸೇವಕರು.

ಯಾಜನೆ—ಯಜ್ಞಮಾಡಿಸುವುದು.

ರಾಜವೈಭವ—ರಾಜರ ಸಂಪತ್ತು, ಮತ್ತು ಲೋಲುಪತೆ.

ರುದ್ರರು—ಇವರು ಪರಬ್ರಹ್ಮನ ಕ್ರೋಧಮೂರ್ತಿಗಳು; ರೂಪಸಂಹಾರ ಕರ್ತೃಗಳು, ಏಕಾದಶರುದ್ರರಿರುವರು, ಏಕೆಂದರೆ ಇಂದ್ರಿಯಗಳ ಸಂಖ್ಯೆ ಹನ್ನೊಂದು.

ಲವಲೇಶ—ಕಿಂಚಿದ್ಭಾಗದ ಭಾಗ.

ಲಿಂಗ—“ಲಿಂಗಂ ನಿಮಿತ್ತಂ ವ್ಯಂಜನಂ ಪದಂ.” ಕಾರಣ, ಚಿಹ್ನೆ, ಸ್ಥಾನ ಇವು ಮೂರೂ ಲಿಂಗಕ್ಕೆ ಅರ್ಥಗಳು.

ಲೋಭ—ಆಶೆ.

ವರ್ಣ—‘ವರ್ಣೋ ದ್ವಿಜಾದೌ ಶುಕ್ಲಾದೌ ಸ್ತುತೌ ವರ್ಣಂ ತು ವಾಕ್ಷರೇ.’ ದ್ವಿಜಾದಿ ಜಾತಿಗಳು, ಶುಕ್ಲಾದಿ ಬಣ್ಣಗಳು, ಅಕ್ಷರ, ಸ್ತುತಿ, ವಿಸ್ತಾರ—ಈ ಅರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತದೆ. ಸಂದರ್ಭಾನುಸಾರವಾಗಿ ಅರ್ಥಮಾಡಿಕೊಳ್ಳಬೇಕು.

ವಸುಗಳು—ಅಷ್ಟವಸುಗಳು.

ವಾಪೆ—ಬಂಧುತ್ವ.

ವಿತರ್ಕವಾದ—(ವಿಗತಃ ತರ್ಕೋ ಯಸ್ಮಾತ್ ಸಃ ವಿತರ್ಕಃ), ನ್ಯಾಯವಿಲ್ಲದವಾದ.

ವಿತಾನ—ಮೇಲ್ಕಟ್ಟುಗಳು.

ವಿಲಾಪವಚನ—‘ವಿಲಾಪಃ ಪರಿದೇವನಂ’, ‘ವಿಲಲಾಪ ಸಬಾಷ್ಪಗದ್ಗದಂ’ ಗೋಳಾಟದ ಮಾತು.

ವಿವಾಹ—(ವಿ+ವಹ; ವಹ ಪ್ರಾಪಣೇ, ವಿಶಿಷ್ಟಂ ವಹನಂ), ಉಳಿದಾಶ್ರಮಿಗಳ ಪೋಷಣೆಯ ಭಾರವಿಶಿಷ್ಟವನ್ನೂ ವಹಿಸುವುದರಿಂದ ವಿವಾಹವೆನ್ನಿಸಿಕೊಂಡಿದೆ.

ವಿಶ್ವೇದೇವತೆಗಳು—ಗಣದೇವತೆಗಳಲ್ಲಿ ಸೇರಿದವರು. ಇಷ್ಟಿಗಳಲ್ಲಿ ಕ್ರತುದಕ್ಷಸಂಜ್ಞಕರು, ನಾಂದೀಶ್ರಾದ್ಧದಲ್ಲಿ ಸತ್ಯವಸು ಸಂಜ್ಞಕರು, ನವಾನ್ನಾಲಂಭನದಲ್ಲಿ ಕಾಮಪಾಲರು, ಮಹಾಲಯ ಶ್ರಾದ್ಧದಲ್ಲಿ ಧ್ವನಿರೋಚಕರು, ಪರ್ವಶ್ರಾದ್ಧಗಳಲ್ಲಿ ಪುರೂರವ ಆರ್ದ್ರವ ಸಂಜ್ಞಕರು ಕರೆಯಲ್ಪಡುತ್ತಾರೆ.

ಕ್ರತುರ್ದಕ್ಷೋ ವಸುಸ್ಸತ್ಯಃ ಕಾಮಃಕಾಲಸ್ತಥಾಧ್ವನಿಃ ।
ರೋಚಕಶ್ಚಾರ್ದ್ರವಾಶ್ಚೈವ ತಥಾಚಾನ್ಯೇಪುರೂರವಾಃ ॥

ಇತಿದಶವಿಶ್ವೇದೇವಾಃ. ಅಗ್ನಿಪುರಾಣ, ಗಣಭೇದನಾಮಾಧ್ಯಾಯ.

ವಿಷಯ—(ವಿ+ಷಿ), ಚಕ್ಷುರಾದಿಗಳಿಂದ ಗ್ರಹಿಸಲ್ಪಡುವುವುಗಳು, ಶಬ್ದ ಸ್ಪರ್ಶ ರೂಪ ರಸ ಗಂಧಾದಿಗಳು, ಭೋಗಸಾಧನಗಳು—ಇವೆಲ್ಲಾ ವಿಷಯಗಳು.

ವ್ಯಭಿಚಾರ—(ವಿ+ಅಭಿ+ಚರ್; ಚರ ಗತಿ ಭಕ್ಷಣಯೋಃ), ಕೆಡಾಚಾರ, ಭ್ರಷ್ಟಾಚಾರ, ದೋಷಕರಕೃತ್ಯ.

ಶಪಥ—(ಶಪ್+ಅಥನ್), ಕಾರ್ಯವನ್ನು ಸಾಧಿಸದೆ ಇದ್ದಲ್ಲಿ ತನಗೆ ಕೇಡೊಂದಾಗಲಿ ಎಂದು ಹೇಳಿಕೊಂಡು ಪ್ರತಿಜ್ಞೆಮಾಡುವುದು; ಪ್ರತಿಜ್ಞೆ.

ಶಾಸನ—ಅಪ್ಪಣೆ, ಆಜ್ಞೆ.

ಶಾಸ್ತ್ರ—‘ಶಾಸನಾತ್ತ್ರಾಯತೇ ಯಸ್ಮಾಚ್ಛಾಸ್ತ್ರಮಿತ್ಯಭಿಧೀಯತೇ.’ ಶಾಸನದಿಂದ ಕಾಪಾಡುತ್ತದೆಯಾದುದರಿಂದ ಶಾಸ್ತ್ರ.

ಶಿವಪಥ—ಮಂಗಳಮಾರ್ಗ.

ಶೋಕ—(ಶುಚ ಶೋಕೇ), ಬಂಧ್ವಾದಿಗಳ ಅಗಲುವಿಕೆಯಿಂದುಂಟಾಗುವ ಮನಃಖೇದ; ಚಿತ್ತವೈಕಲ್ಯ.

ಸಂಸಾರ—(ಸಂಸರತ್ಯಸ್ಮಾತ್ ಇತಿ ಸಂಸಾರಃ; ಸೃ ಗತೌ); ಸ್ವಾದೃಷ್ಟೋಪನಿಬದ್ಧಶರೀರಪರಿಗ್ರಹ; ನೈಯಾಯಿಕರ ಮತದ ಪ್ರಕಾರ ಮಿಥ್ಯಾಜ್ಞಾನಜನ್ಯವಾಸನೆ; ದುಃಖಿಲೋಕ; ಭವ.

ಸಂಸ್ಕಾರ—(ಸಮ್+ಕೃ), ಭೂತಾದಿ ವಸ್ತುಗಳಲ್ಲಿ ಅಡಗಿರುವ ಗುಣವಿಶೇಷಗಳನ್ನು ಚೆನ್ನಾಗಿ ಹೊರಪಡಿಸುವುದಕ್ಕೋಸ್ಕರ ಮಾಡುವ ಕರ್ಮ; ಸಂಸ್ಕಾರವಾದುದಕ್ಕೆ ಗುರುತು ಗುಣಾಂತರಾಧಾನ. ಗುಣವಿಶೇಷ, ಅನುಭವ, ಮಾನಸಕರ್ಮ ಎಂಬುವು ಇತರ ಅರ್ಥಗಳು. ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೂಡಾಕರ್ಮ, ಉಪನಯನ, ಸಮಾವರ್ತನ, ವಿವಾಹ—ಇವು ದಶಸಂಸ್ಕಾರಗಳು.

ಸಭ್ಯ—(ಸಹ ಭಾನ್ತಿ ಅತ್ರ ಇತಿ ಸಭಾ; ಭಾ ದೀಪ್ತೌ), ಸಭೆಗೆ ಯೋಗ್ಯನಾದವನು ಸಭ್ಯ.

ಸಮಾಹಿತಮನಸ್ಸು—ಶಾಂತವಾದ ಮನಸ್ಸು.

ಸಮೀಕ್ಷ್ಯಕಾರಿ— (ಸಮ್+ಈಕ್ಷ್ಯ+ಕಾರಿ; ಈಕ್ಷ ದರ್ಶನೇ), ವಿಮರ್ಶೆಯಿಂದ ಕೆಲಸಮಾಡುವವನು.

ಸರ್ಗಕ್ರಮ—ಸೃಷ್ಟಿಕ್ರಮ.

ಸಹಿಷ್ಣುತೆ—ಸಹನೆ.

ಸಾಂತ್ವ—ಕರ್ಣಮನಃಪ್ರೀತಿಜನಕವಾಕ್ಯ.

ಸಾಧ್ಯರು—ಗಣದೇವತಾಭೇದ; ದ್ವಾದಶಸಾಧ್ಯರು.

ಸಿದ್ಧರು—ಇವರು ಅಣಿಮಾದಿ ಗುಣಗಳಿಂದ ಕೂಡಿದ ವಿಶ್ವಾವಸು ಮೊದಲಾದವರು; ದೇವಯೋನಿವಿಶೇಷ.

ಸಿದ್ಧೌಷಧಿ—ಅನುಭವಸಿದ್ಧವಾದ ಔಷಧಿ, ಕೈಕಂಡೌಷಧಿ.

ಸ್ವರ—(ಸ್ವೃ ಶಬ್ದೋಪತಾಪಯೋಃ), ವೇದ ಸಂಗೀತ ವ್ಯಾಕರಣಗಳಲ್ಲಿ ಈ ಪದಕ್ಕೆ ಬೇರೆಬೇರೆ ಅರ್ಥವಿರುತ್ತದೆ. – ವೇದದಲ್ಲಿ ಸ್ವರವು ಮೂರು ತೆರನಾಗಿರುವುದು—ಉದಾತ್ತ (ಉಚ್ಚೈರುದಾತ್ತಃ), ಅನುದಾತ್ತ (ನೀಚೈರನುದಾತ್ತಃ), ಸ್ವರಿತ (ಸಮಾಹಾರಃಸ್ವರಿತಃ). ಅರ್ಥಾನುಗುಣವಾಗಿ ಉದಾತ್ತಾದಿ ಸ್ವರಗಳು ಪ್ರಯೋಗಿಸಲ್ಪಟ್ಟಿವೆ. ಸ್ವರಭೇದಗಳಿಂದ ಅರ್ಥಭೇದಗಳು ಹುಟ್ಟುವುವು. ಸಂಗೀತದಲ್ಲಿ ನಿಷಾದಾದಿ ಸಪ್ತಸ್ವರಗಳಿರುವುವು. ವ್ಯಾಕರಣದಲ್ಲಿ ಹ್ರಸ್ವ, ದೀರ್ಘ, ಪ್ಲುತಗಳೆಂಬ ಭೇದಗಳಿವೆ.

ಸ್ವಾಧ್ಯಾಯ—(ಸ್ವ+ಅಧ್ಯಾಯ), ತಮ್ಮ ತಮ್ಮ ವೇದಶಾಖೆಯನ್ನು ಅಧ್ಯಯನ ಮಾಡುವುದು.

ಸ್ವಾಧ್ಯಾಯಾಭ್ಯಸನ—ಸ್ವಶಾಖಾಧ್ಯಯನ.

ಸ್ವಾಯತ್ತಚಿತ್ತನಾಗಿ—ಸ್ವಾಧೀನಮನಸ್ಕನಾಗಿ.

ಸ್ಪೃಹೆ—ಬಯಕೆ.

ಹವ್ಯ—ದೇವತೋದ್ದೇಶಕವಾದ ಆಹುತಿ ಮೊದಲಾದುವು.



## ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 4 | 18 | ವೇದದೇ | ವೇದದ |
| 11 | 19 | ವಕ್ತ್ರರೂಪ | ವ್ಯಕ್ತರೂಪ |
| 19 | 24 | ಪಶಪೃಕೃತಿ | ಪರಪ್ರಕೃತಿ |
| 22 | 25 | ಪಾಶಿಮಾತ್ಯ | ಪಾಶ್ಚಿಮಾತ್ಯ |
| 34 | 22 | ತತ್ವಮಸಿ | ತತ್ತ್ವಮಸಿ |
| 43 | 2 | ಸಮದೃಷ್ಠಿ | ಸಮದೃಷ್ಟಿ |
| 44 | 3 | ಸಮೀಪಸ್ತ | ಸಮೀಪಸ್ಥ |
| 81 | 8 | ಗೃಹಸ್ಥಾಸ್ರಮ | ಗೃಹಸ್ಥಾಶ್ರಮ |
| 88 | 13 | ಜೀವನೆನೆಸಿ | ಜೀವನೆನಿಸಿ |
| 101 | 11 | ಮಖ್ಯಪ್ರಾಣ | ಮುಖ್ಯಪ್ರಾಣ |
| 104 | 25 | ನಿರಂಜಿನ | ನಿರಂಜನ |
| 105 | 16 | ಅವ್ಯತಾತ್ತ | ಅವ್ಯಕಾತ್ತ |
| 106 | 16 | ವೀಚ್ಛತಿ | ವಿಚ್ಛತಿ |
| 112 | 14 | ಸದ್ಬುಣ | ಸದ್ಗುಣ |
| 114 | 12 | ಯದಾಪಸ್ಯೇ | ಯದಾಪಶ್ಯೇ |
| 115 | 2 | ಅನಿಷ್ವಾವ | ಅನಿಷ್ಟ್ವಾವ |
| 123 | 12 | ಏತೇಷಾಮಿವ | ಏತೇಷಾಮೇವ |
| 136 | 23 | ಪ್ರವೃತ್ತಿವಾರ್ಗ | ಪ್ರವೃತ್ತಿಮಾರ್ಗ |
| 141 | 18 | ಶಾನ್ತಿಸ್ಥಾನಂ | ಶಾನ್ತಿಂಸ್ಥಾನಂ |
| 148 | 17 | ಸನ್ಯಾಸನ | ಸನ್ಯಸನ |
| 150 | 14 | ಕೃತೃಮ | ಕೃತ್ರಿಮ |
| 154 | 4 | ಸತ್ಯಂಮೇವ | ಸತ್ಯಮೇವ |
| 165 | 3 | ಸಿಷ್ಟವಸ್ತು | ಶಿಷ್ಟವಸ್ತು |
| 177 | 15 | ಧೃತಿಕ್ಷಮಾ | ಧೃತಿಃ ಕ್ಷಮಾ |
| 180 | 10 | ಪುರಾಣವೆನಿಸಿ | ಪುರಾಣನೆನಿಸಿ |
| 196 | 8 | ತೀರಿಚ್ಯತೇ | ತಿರಿಚ್ಯತೇ |
| 214 | 7 | ಉಂಛಶಿಲ | ಉಂಛಸಿಲ |
| 219 | 8 | ಪಾರಿತೋಷಕ | ಪಾರಿತೋಷಿಕ |
| 223 | 9 | ಹಿಂದುರುಗಿ | ಹಿಂದಿರುಗಿ |
| 226 | 15 | ವೇದನಿಂದಾಚ | ವೇದನಿಂದಾಂಚ |
| 240 | 1 | ಸರ್ವಭೂತಸ | ಸರ್ವಭೂತಸ್ಥ |